# ಹೊಸತು ವಾಚಿಕೆ ಮಾಲಿಕೆ
# ಹದಿನೆಂಟು ಸಂಪುಟಗಳು




## ನವಕರ್ನಾಟಕದ ಅಪೂರ್ವ ಕೊಡುಗೆ

೧/೮ ಡೆಮಿ ಆಕಾರದ
೩,೨೦೦ ಪುಟಗಳಿಗೂ ಹೆಚ್ಚು
ವಿಚಾರ ಪ್ರಚೋದಕ ಸಾಹಿತ್ಯ ಸಂಗ್ರಹ!

೧೯೯೯ರ ಆಗಸ್ಟ್‌ನಿಂದ ೨೦೦೪ರ ಜುಲೈ ವರೆಗಿನ ೬೦ 'ಹೊಸತು' ಸಂಚಿಕೆಗಳಿಂದ

- ಆಯ್ದ ಸಂಪಾದಕೀಯ
- ತಿಳಿವು
- ವಚನ ಸಾಹಿತ್ಯ
- ಶಿಕ್ಷಣ, ಸಂಸ್ಕೃತಿ
- ಮಹಿಳೆ
- ಆರೋಗ್ಯ, ವಿಜ್ಞಾನ
- ಇತಿಹಾಸ
- ಪ್ರಚಲಿತ ವಿದ್ಯಮಾನ
- ವೈಚಾರಿಕ ಲೇಖನಗಳು
- ಸಾಹಿತ್ಯ ಸಂವಾದ
- ಸಂದರ್ಶನಗಳು
- ಕಥೆಗಳು
- ಪ್ರಬಂಧಗಳು
- ಕವಿತೆಗಳು, ಇತ್ಯಾದಿ.

ಪ್ರತಿಯೊಂದು ಸಂಪುಟದ ಬೆಲೆ ರೂ. ೭೫
ಹದಿನೆಂಟು ಸಂಪುಟಗಳ ಬೆಲೆ ರೂ. ೧೩೫೦
ಮುಂಗಡ ನೀಡಿ ಕಾಯ್ದಿರಿಸುವವರಿಗೆ
ಪ್ರಕಟಣಪೂರ್ವ ಬೆಲೆ ರೂ. ೯೫೦
(ಅಂಚೆ ವೆಚ್ಚ ರೂ ೫೦ ಪ್ರತ್ಯೇಕ)

**ಉಳಿತಾಯ ರೂ. ೪೦೦**

ರೂ. ೨೦೦ ಮುಂಗಡ ಕಳಿಸಿ ನಿಮ್ಮ ಹೆಸರು ನೋಂದಾಯಿಸಿಕೊಳ್ಳಿ
ಪ್ರಕಟಣಪೂರ್ವ ರಿಯಾಯಿತಿ ಪಡೆಯಿರಿ.
(ಬಾಕಿ ಹಣವನ್ನು ಪುಸ್ತಕ ಪ್ರಕಟಣೆಗೆ ಮುಂಚೆ ಒಟ್ಟಿಗೆ ಅಥವಾ ಕಂತುಗಳಲ್ಲಿ ನೀಡಿ) ನಿಮ್ಮ ಪ್ರತಿಗಳನ್ನು ಇಂದೇ ಕಾಯ್ದಿರಿಸಿ.

**ಅಮೂಲ್ಯ ಆಕರ ಗ್ರಂಥಗಳನ್ನು ನಿಮ್ಮದಾಗಿಸಿಕೊಳ್ಳಿ**

೨೦೦೫ರ ಕೊನೆಯಲ್ಲಿ ಪ್ರಕಟ

ವಿವರಗಳಿಗೆ
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಅಂಚೆ ಪೆಟ್ಟಿಗೆ ೫೧೯೫
ಬೆಂಗಳೂರು - ೫೬೦ ೦೦೧
ದೂರವಾಣಿ : ೨೨೨೦೩೫೮೦/೮೧/೮೨
ಶಾಖೆಗಳು : ಬೆಂಗಳೂರು

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಜಿ. ಎಂ. ಬೊಮ್ನಳ್ಳಿ , ಅರಸು, ಸ್ಯಾಮ್, ಶ್ರೀಹರಿ, ಯತೀಶ್

ಮುಖಚಿತ್ರ : ಬಿಟರ್ನ್ ಹಕ್ಕಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

'**ಹೊ**ಸತು' ಓದುಗರಿಗೆ ಈ ತಿಂಗಳ ಪ್ರಹಸನವನ್ನು ಬಿಡಿಸಿ ಹೇಳಬೇಕಾಗಿಲ್ಲ. ಅದರ ಆಶಯ, ಯೋಜನೆ, ತೋರಿಕೆಯ ದ್ವಂದ್ವ, ಇವೆಲ್ಲವೂ ಅವರಿಗೆ ಸುಲಭವಾಗಿ ತಿಳಿಯುತ್ತದೆ. ವಿಶಾಖದತ್ತನ 'ಮುದ್ರಾರಾಕ್ಷಸ' ಎಂಬ ಸಂಸ್ಕೃತ ನಾಟಕದ ಮೂರನೆಯ ಅಂಕವನ್ನು ಅವನು ''ಕೃತಕ ಕಲಹ'' ಎಂದಿದ್ದಾನೆ. ಚಂದ್ರಗುಪ್ತನು ತನ್ನ ಮಂತ್ರಿ ಮತ್ತು ಮಾರ್ಗದರ್ಶಕನಾದ ಚಾಣಕ್ಯನೊಡನೆ ಬಿರುಸಿನ ಮಾತುಗಳಲ್ಲಿ ಜಗಳವಾಡುವ ಪ್ರಸಂಗ ಅಲ್ಲಿದೆ. ಅಮಾತ್ಯರಾಕ್ಷಸ ಎಂಬುವವನು ಚಂದ್ರಗುಪ್ತನಲ್ಲಿ ಶ್ರದ್ಧೆ ಇರಿಸಿಕೊಂಡಿಲ್ಲ. ಅವನು ನಂದರ ಮಂತ್ರಿಯಾಗಿದ್ದವನು. ಅವನ ದಕ್ಷತೆ ಮತ್ತು ಪ್ರಾಮಾಣಿಕತೆಯನ್ನು ಚಾಣಕ್ಯ ಮೆಚ್ಚಿಕೊಂಡಿದ್ದಾನೆ. ಅವನನ್ನು ಹೇಗಾದರೂ ಮಾಡಿ ಚಂದ್ರಗುಪ್ತನ ಮಂತ್ರಿಯಾಗಲು ಒಪ್ಪಿಸಬೇಕು ಮತ್ತು ತಾನು ರಾಜ್ಯತಂತ್ರದ ಜವಾಬ್ದಾರಿಯಿಂದ ನಿರ್ಗಮಿಸಬೇಕೆಂಬುದು ಚಾಣಕ್ಯನ ಆಸೆ. ಆ ಒಪ್ಪಿಸುವ ತಂತ್ರವಾಗಿ ಈ ಕೃತಕ ಕಲಹ. ಇವರಿಬ್ಬರ ನಡುವಣ ತೀವ್ರ ಭಿನ್ನಾಭಿಪ್ರಾಯಗಳು ಹೇಗೂ ಅಮಾತ್ಯರಾಕ್ಷಸನಿಗೆ ಬೇಹುಗಾರರಿಂದ ತಿಳಿದುಬರುತ್ತದೆ; ಆಗ ಅವನು ಚಂದ್ರಗುಪ್ತನಿಗೆ ಹತ್ತಿರವಾಗುತ್ತಾನೆ ಮತ್ತು ಕ್ರಮೇಣ ಅವನ ಅಮಾತ್ಯನಾಗುತ್ತಾನೆಂದು ಚಾಣಕ್ಯನ ಲೆಕ್ಕಾಚಾರ. ಅದರ ಸಿದ್ಧಿಗಾಗಿ ಕೃತಕ ಕಲಹವೆಂಬ ಚದುರಂಗದಾಟ. ಒಬ್ಬರನ್ನೊಬ್ಬರು ದೂಷಿಸಿ ಕಟುವಾದ ಮಾತುಗಳನ್ನು ಚಂದ್ರಗುಪ್ತ-ಚಾಣಕ್ಯರು ವಿನಿಮಯ ಮಾಡಿಕೊಳ್ಳುತ್ತಾರೆ. ಆ ಮಾತುಗಳನ್ನೂ ಚಂದ್ರಗುಪ್ತನಿಗೆ ಚಾಣಕ್ಯನೇ ಕಲಿಸಿದ್ದ. ಜಗಳವೆಲ್ಲಾ ಮುಗಿದು ಚಾಣಕ್ಯ ಹೊರ ಹೋದ ನಂತರ ಚಂದ್ರಗುಪ್ತನು ತನಗೆ ತಾನು ಹೇಳಿಕೊಳ್ಳುತ್ತಾನೆ : ''ಅಬ್ಬಾ, ಎಷ್ಟು ಕಷ್ಟದ ಸಂದರ್ಭ ! ಯಾರನ್ನು ಗೌರವಿಸುತ್ತೇವೋ ಅವರೊಡನೆ ಜಗಳ ಮಾಡಿ ಆಪಾದನೆ ಹೊರಿಸುವುದೆಂದರೆ, ಕೃತಕವೆಂದು ಗೊತ್ತಿರುವಾಗಲೂ ಅದೆಷ್ಟು ಮುಜುಗರದ ವಿಷಯ. ಇನ್ನು ನಿಜಕ್ಕೂ ಜಗಳವಾಡುವವರ ಮನಸ್ಸು ಎಷ್ಟು ಕಠಿಣವಾಗಿರಬೇಕು !''

ನಮ್ಮ ಸಮಕಾಲೀನ ಚಂದ್ರಗುಪ್ತನೆಂದರೆ ಲಾಲ ಕೃಷ್ಣ ಅದ್ವಾನಿ; ಅವರ ಗುರು ಅಶೋಕ ಸಿಂಘಾಲ. ತಿಕ್ಕಾಟದಿಂದ ಅವರು ಜಯಿಸಬೇಕಾದ ಅಮಾತ್ಯರಾಕ್ಷಸನೆಂದರೆ ದೇಶದ ಮುಸ್ಲಿಂ ಸಮುದಾಯ. ಅಮಾತ್ಯರಾಕ್ಷಸನ ಬೆಂಬಲವಿಲ್ಲದೆ ಚಂದ್ರಗುಪ್ತನ ರಾಜತ್ವ ಸುಭದ್ರವಾಗಿ ಉಳಿಯುವುದಿಲ್ಲ. ಆದ್ದರಿಂದ ಮುಸ್ಲಿಮರನ್ನು ಹೇಗಾದರೂ ಓಲೈಸಿ ಅವರ ಸಮರ್ಥನೆ ಪಡೆಯಬೇಕಾದ್ದು ಅದ್ವಾನಿ – ವಾಜಪೇಯಿ – ಭಾಜಪಗಳಿಗೆ ಅಗತ್ಯವಿದೆ. ಸ್ಥಿರವಾದ ಸರ್ಕಾರ ಬೇಕು, ಸ್ವತಂತ್ರವಾದ ಸರ್ಕಾರ ಬೇಕು. ತೆಲುಗು ದೇಶಂ, ಕರುಣಾನಿಧಿ ಮುಂತಾದವರ ಕೃಪೆಯಿಂದ ರಾಜ್ಯಭಾರ ಮಾಡಹೊರಟರೆ ಅವರು ನೀರ ಮಧ್ಯೆ ಮುಳುಗಿಸಿಬಿಡಬಹುದು. ಜಾರ್ಜ್ ಫರ್ನಾಂಡಿಸ್ ಅಂತಹ ವ್ಯಕ್ತಿಯಲ್ಲ. ಆತನಿಗೆ ಯಜಮಾನನಲ್ಲಿ ನಿಷ್ಠೆಯೇನೋ ಇದೆ. ಆದರೆ ಬಲ ಸಾಲದು. ಆದ್ದರಿಂದ ಇರುವ ಏಕೈಕ ಮಾರ್ಗ ಮುಸ್ಲಿಮರ ಹೃದಯವನ್ನು ಗೆದ್ದುಕೊಳ್ಳುವುದು. ಅವರ ಹೃದಯಗಳನ್ನು ಒಡೆಯುವ ಕೆಲಸವನ್ನು ಇಪ್ಪತ್ತು ವರ್ಷ ಸತತವಾಗಿ ಮಾಡಿರುವ ಅದ್ವಾನಿಯವರಿಗೆ ಇದೊಂದು ಭಾರಿ ಸವಾಲು. ಇಟ್ಟಿಗೆ ಯಾತ್ರೆ, ರಥಯಾತ್ರೆ, ಮಸೀದಿ ಧ್ವಂಸ, ಗುಜರಾತು ಮುಂತಾದ ಕಪ್ಪು ಭಾರ ತಲೆಯ ಮೇಲಿರುವಾಗ ಮುಸ್ಲಿಮರ ಹೃದಯ ಗೆಲ್ಲುವುದು ಹೇಗೆ ? ಅರ್ಜುನನಿಗೆ ಶ್ರೀಕೃಷ್ಣ ಪರಮಾತ್ಮ ಉಪದೇಶ ನೀಡಿದ್ದಂತೆ ಅದ್ವಾನಿಯವರಿಗೆ ಕಲ್ಕತ್ತೆಯಲ್ಲಿ ಸ್ವಾಮಿ ರಂಗನಾಥಾನಂದರು ಕಣ್ಣು ತೆರೆಯಿಸಿದರು. ಹೇಗೆ ಕುರುಕ್ಷೇತ್ರದಲ್ಲಿ ಕಾಲಿಡುವವರೆಗೆ ಅರ್ಜುನನಿಗೆ ಯುದ್ಧದ ಅನಾಹುತದ ಬಗ್ಗೆ ತಿಳಿವಳಿಕೆ ಇರಲಿಲ್ಲವೋ ಹಾಗೆ ಕಲ್ಕತ್ತೆಯ ರಾಮಕೃಷ್ಣಾಶ್ರಮಕ್ಕೆ ಭೇಟಿ ನೀಡುವವರೆಗೆ ಅದ್ವಾನಿಯವರಿಗೆ ಮಹಮ್ಮದಾಲಿ ಜಿನ್ನಾ ಎಂಬ ಪಾಶ್ಚಾತ್ಯ ಜೀವನಶೈಲಿಯ ರಾಷ್ಟ್ರ ವಿಭಜಕನ ಮಹಾನ್ ವಾಕ್ಯಗಳು ತಿಳಿದಿರಲಿಲ್ಲ. ಮಾನ್ಯ ದೀನದಯಾಳ್ ಮತ್ತು ಗೋಲ್ವಾಲ್ಕರ್ ಅವರ ಸಾಹಿತ್ಯವನ್ನುಳಿದು ಬೇರೆಯವನ್ನೆಲ್ಲಾ ಪರಿಚಯ ಮಾಡಿಕೊಳ್ಳಲು ಅವರಿಗೆ ವ್ಯವಧಾನವಿರಲಿಲ್ಲ. ''ಚಕ್ಷುರುನ್ಮೀಲಿತಂ ಯೇನ'' (ಯಾವನಿಂದ ಕಣ್ಣು ತೆರೆಸಲ್ಪಟ್ಟಿತೋ) ಎಂದು ವಿನೀತ ಭಾವದಿಂದ ಪ್ರಣಾಮ ಸಲ್ಲಿಸಬಹುದಾದಂತಹ ರಂಗನಾಥಾನಂದರು ಉಪನಿಷತ್ತುಗಳ ಪಂಚ ಮಹಾವಾಕ್ಯಗಳಿಗೆ ಸಮನಾದ ಜಿನ್ನಾ ಮಾತನ್ನು ಅದ್ವಾನಿಯವರ ಕಿವಿಯಲ್ಲಿ ಉಸುರಿದ್ದೇ ತಡ, ಇವರಿಗೆ ಜ್ಞಾನಸುಧೆ ದೊರಕಿತು. ಪಾಕಿಸ್ತಾನಕ್ಕೆ ಹೋದರು, ಜಿನ್ನಾ ಮಾತನ್ನು ಅಪೂರ್ವವಾಣಿ ಎಂಬಂತೆ ಉದ್ಧರಿಸಿದರು. ಪಾಕಿಸ್ತಾನದ ನೆಲದ ಮೇಲೆ ನಿಂತು ಆ ಮಾತನ್ನಾಡಿದರೆ ಭಾರತದ ಮುಸ್ಲಿಮರು ತಲೆದೂಗದಿರುವುದು ಹೇಗೆ ತಾನೆ ಸಾಧ್ಯ ಎಂಬುದು ಅವರ ರಾಜಕೀಯ ಅಜ್ಞಾನದ ಸಂಕೇತ. ಭಾರತದ ಮುಸ್ಲಿಮರ ಬಗೆಗಿರುವ ಅವರ ಭಾವನೆ ಮತ್ತು ಆಕ್ಷೇಪ ಇದು. ಅದೇ ಆಕ್ಷೇಪವನ್ನು ತಮ್ಮ ಬತ್ತಳಿಕೆಯಲ್ಲಿಟ್ಟು ಯುದ್ಧ ಮಾಡಿ ಚುನಾವಣೆಗಳಲ್ಲಿ ಸೋತಿದ್ದರು; ಈಗ ಅದನ್ನು ಬ್ರಹ್ಮಾಸ್ತ್ರವನ್ನಾಗಿ ಪರಿವರ್ತಿಸುವ ಉಪಾಯ ಕಂಡುಕೊಂಡರು. ಅಯೋಧ್ಯೆಯಲ್ಲಿ ಮಸೀದಿಯನ್ನು ಉರುಳಿಸಿದ ದಿನ ಅದ್ವಾನಿಯವರ ಮುಖ ಎಷ್ಟು ಪ್ರಫುಲ್ಲವಾಗಿದ್ದಿತೆಂಬುದನ್ನು ಆನಂದ ಪಟವರ್ಧನ್ ಅವರ ''ರಾಮನ ಹೆಸರಲ್ಲಿ'' ಎಂಬ ಸಾಕ್ಷ್ಯಚಿತ್ರವು ಪ್ರಪಂಚಕ್ಕೆ ತೋರಿಸಿಕೊಟ್ಟಿದೆ. ಅವರ ರಥಯಾತ್ರೆಯ ಸಂದರ್ಭದಲ್ಲೊಮ್ಮೆ ಅವರು ಗುಡುಗಿದ್ದ ಮಾತುಗಳನ್ನೂ ಅದೇ ಚಿತ್ರವು ದಾಖಲಿಸಿದೆ; ''ನಡೆಯಿರಿ, ಅದಾರು ನಮ್ಮನ್ನು ತಡೆಯುತ್ತಾರೋ ನೋಡೇಬಿಡೋಣ; ಆ ಮಸೀದಿ ಇರುವ ಜಾಗದಲ್ಲೇ ನಾವು ಮಂದಿರ ಕಟ್ಟುವವರಿದ್ದೇವೆ.'' ಭೌತ ನಿಯಮದ

೭ನೇ ಪುಟಕ್ಕೆ




ಸಂಪುಟ - ೬ ಸಂಚಿಕೆ - ೧೨ ಜುಲೈ ೨೦೦೫

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಜಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೨೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೨೦೩೫೮೦ / ೮೧ / ೮೨
e-mail : nkp@bgl.vsnl.net.in
website : www.navakarnatakabooks.com

# ಉನ್ನತ ಶಿಕ್ಷಣದಿಂದ ಸಾವಯವ ಬುದ್ಧಿಜೀವಿಯ ಉದಯ

**ಸಂಪಾದಕೀಯ**

ಸಮಾಜದ ಅಭಿವೃದ್ಧಿ ಬಿಂದುಗಳನ್ನು ಗುರುತಿಸುವ ಕೆಲಸದಲ್ಲಿ ಎಲ್ಲ ಸಂದರ್ಭಗಳಲ್ಲೂ ಸಾಕಷ್ಟು ಬುದ್ಧಿಜೀವಿಗಳು ತೊಡಗಿದ್ದಾಗ ಅಭಿವೃದ್ಧಿಯು ಸಾಮಾಜಿಕ ಹಿತರಕ್ಷಣೆಯನ್ನು ಎಷ್ಟರಮಟ್ಟಿಗೆ ಮಾಡುತ್ತಿದೆಯೆಂಬುದನ್ನು ತಿಳಿಸಿಕೊಡಲು ಸಾಧ್ಯ. ಅದನ್ನು ಮಾಡುವವರು ಗ್ರಾಮ್ಸಿಯ ಪರಿಭಾಷೆಯಲ್ಲಿ ಸಾವಯವ ಬುದ್ಧಿಜೀವಿಗಳೆನಿಸಿಕೊಳ್ಳುತ್ತಾರೆ. ಅಂಥವರನ್ನು ತಯಾರು ಮಾಡಬೇಕಾದ್ದು ಉನ್ನತ ಶಿಕ್ಷಣದ ಜವಾಬ್ದಾರಿ. ಇಂದಿನ ನಮ್ಮ ಸನ್ನಿವೇಶವು ಅದು ಅಸಾಧ್ಯವಾಗುವಂತೆ ಮಾಡುತ್ತಿದೆಯೇನೋ ಎನಿಸುತ್ತದೆ. ಉನ್ನತ ಶಿಕ್ಷಣ ಸಂಸ್ಥೆಗಳು ವಿಪರೀತ ಖರ್ಚಿನ ಬಾಬ್ತು, ಆದ್ದರಿಂದ ಅದಕ್ಕೆ ಹಣ ಸುರಿಯುವ ಬದಲು ಪ್ರಾಥಮಿಕ ಶಿಕ್ಷಣಕ್ಕೆ ಸಂಪನ್ಮೂಲ ತೊಡಗಿಸುವುದು ಶ್ರೇಯಸ್ಕರವೆಂಬ ವಾದವೊಂದಿದೆ. ವಿಶಾಲ ತಳಹದಿಯ ಪ್ರಾಥಮಿಕ ಶಿಕ್ಷಣದ ಕಟ್ಟಡದ ತುದಿಯಲ್ಲಿ ಗೋಪುರದ ರೀತಿ ಉನ್ನತ ಶಿಕ್ಷಣ ಸ್ವಲ್ಪ ಇದ್ದರೆ ಸಾಕೆಂದು ಇದರರ್ಥ. ಅನಕ್ಷರತೆಯನ್ನು ನಿವಾರಿಸಿ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣವಾಗದಿರುವುದು ನಿಜಕ್ಕೂ ಒಂದು ರಾಷ್ಟ್ರೀಯ ಅವಮಾನ. ಸ್ವಾತಂತ್ರ್ಯಗಳಿಸಿ ಅರ್ಧ ಶತಮಾನ ಕಳೆದಿದ್ದರೂ ಶಾಲೆಗೆ ಹೋಗಬೇಕಾದವರಲ್ಲಿ ಶೇ. 40ರಷ್ಟು ಮಕ್ಕಳು ಹೊರಗೇ ಉಳಿದಿರುವುದು ನಾಚಿಕೆಗೇಡು. ಉನ್ನತ ಶಿಕ್ಷಣಕ್ಕೆ ಮಾಡುವ ವೆಚ್ಚವನ್ನು ತಡೆಹಿಡಿದರೆ ಈ ನ್ಯೂನತೆ ದೂರವಾಗುತ್ತದೆಂಬುದು ಮಾತ್ರ ತರ್ಕಬದ್ಧವಲ್ಲ. ಹಾಗೆ ತಡೆಯಬೇಕಾದ್ದು ಅನಿವಾರ್ಯವೂ ಅಲ್ಲ. ''ಸಾಕಷ್ಟು'' ಎನ್ನಬಹುದಾದಷ್ಟು ಹಣವನ್ನು ಸ್ವಾತಂತ್ರ್ಯ ಬಂದಾಗಿನಿಂದ ಶಿಕ್ಷಣಕ್ಕೆ ಯಾವ ವರ್ಷದಲ್ಲೂ ನಾವು ತೊಡಗಿಸಿದ್ದೇ ಇಲ್ಲ. ನಮ್ಮ ಆದ್ಯತೆಗಳನ್ನು ಸ್ಪಷ್ಟ ಮಾಡಿಕೊಳ್ಳುವುದು ಮತ್ತು ಅವನ್ನು ಪೂರೈಸಲು ರಾಜಕೀಯ ಇಚ್ಛಾ ಶಕ್ತಿಯನ್ನು ಬೆಳೆಸಿಕೊಳ್ಳುವುದು, ಇವು ನಮ್ಮ ಇಂದಿನ ಅವಶ್ಯಕತೆಗಳು. ಹಣವನ್ನು ಮೀಸಲಿರಿಸುವುದು ಅದರ ನಂತರದ ಪ್ರಶ್ನೆ.

ಉನ್ನತ ಶಿಕ್ಷಣವನ್ನು ವೃದ್ಧಿಪಡಿಸುವುದು ದಂಡದ ಕೆಲಸವಲ್ಲ. ಹತ್ತಾರು ಚಿಂತನಾ ಕ್ರಮಗಳಿಗೆ ಅದು ಜನನ ಕೇಂದ್ರ. ಈಗಾಗಲೇ ಚಿಂತನೆಯು ಮೊಟಕುಗೊಳ್ಳುತ್ತಿರುವುದು ಅನುಭವಕ್ಕೆ ಬರುತ್ತಿದೆ. ನಮ್ಮ ಸಮಾಜವು ಚಿಂತನೆಗೂ ಪರಾವಲಂಬಿ ಯಾದರೆ ಎಂತಹ ಚಿಂತನೆಗೆ ಸೊಪ್ಪು ಹಾಕಲಾಗುತ್ತದೆಯೆಂಬುದು ಸರಳವಾಗಿ ತಿಳಿಯುತ್ತದೆ. ಕೋಮುಭಾವನೆ, ಅವೈಜ್ಞಾನಿಕತೆಯ ಅಟ್ಟಹಾಸ ಮತ್ತು ವಿದೇಶಗಳ ಹಿಡಿತ, ಇವು ಮೇಲುಗೈ ಪಡೆಯುತ್ತವೆ. ಬರ್ಟೋಲ್ಟ್ ಬ್ರೆಕ್ಟ್ ಹೇಳುತ್ತಿದ್ದನಂತೆ: ''ಎಲೈ, ಹಸಿದವನೇ, ಪುಸ್ತಕವನ್ನು ಹಿಡಿ'' ಎಂದು. ಅವನಿಗೆ ಸರಿಯಾದ ಪುಸ್ತಕ ಸಿಕ್ಕಬೇಕು; ಹಸಿವು ಪೂರ್ವಜನ್ಮದ ಪಾಪದ ಫಲವೆಂದು ಬೋಧಿಸುವ ಪುಸ್ತಕವಲ್ಲ. ಅಂದರೆ, ನಮ್ಮ ಸಾಮಾಜಿಕ ವಸ್ತುಸ್ಥಿತಿಯನ್ನು ವೈಜ್ಞಾನಿಕವಾಗಿ ವಿಶ್ಲೇಷಿಸುವುದು ಅತ್ಯಗತ್ಯ. ಇದು ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಸ್ವಲ್ಪಮಟ್ಟಿಗೆ ನಡೆಯಿತು. ಅದನ್ನು ಮುಂದುವರೆಸುವಂತಹ ಉನ್ನತ ಶಿಕ್ಷಣ ಸಂಸ್ಥೆಗಳು ನಮಗಿಂದು ಸಹ ಬೇಕು.

ಈಗಿನ ಒಂದು ಪ್ರಕ್ರಿಯೆ ವಿಚಿತ್ರವಾಗಿದೆ. ಉನ್ನತ ಶಿಕ್ಷಣ ಸಂಸ್ಥೆಗಳನ್ನು ಉತ್ತಮವಾದುವು, ಕೀಳಾದುವು ಎಂದು ವಿಭಾಗಿಸಬಹುದೆಂಬ ಭಾವನೆಯನ್ನು ಬೆಳೆಸಿ ಉತ್ತಮವಾದುವನ್ನು ಇನ್ನೂ ಹೆಚ್ಚಾಗಿ ಪೋಷಿಸುವುದು ಮತ್ತು ಕೀಳಾದುವನ್ನು ಅವಗಣನೆಗೆ ಗುರಿ ಮಾಡುವುದು ಇಂತಹ ಪ್ರಕ್ರಿಯೆ. ಉತ್ತಮವಾದುದೆಂದರೆ ಕೇಂಬ್ರಿಜ್-ಹಾರ್ವರ್ಡ್‌ಗಳಂತಿರುವುದು ! ಅಲ್ಲಿ ಸಾವಯವ ಬುದ್ಧಿಜೀವಿಗೆ ಎಲ್ಲಿಯ ಸ್ಥಾನ? ಹಾರ್ವರ್ಡ್‌ನ ಯಾವ ಅರ್ಥಶಾಸ್ತ್ರಜ್ಞ ದಾದಾಭಾಯಿ ನವರೋಜಿ, ಲಾಲಾ ಲಜಪತ್‌ರಾಯ್ ಅಥವಾ ಗಾಂಧೀಜಿ ಮಾಡಿದ ಆರ್ಥಿಕ ವಿಶ್ಲೇಷಣೆಗಳನ್ನು ಭಾರತದ ಬಗ್ಗೆ ಮಾಡುತ್ತಾನೆ ? ಅವನ ಉದ್ದೇಶ ಮತ್ತು ಪದ್ಧತಿಗಳೇ ಬೇರೆ. ಅವು ಕನಿಷ್ಠ ಮಟ್ಟದ ಭಾರತೀಯನನ್ನು ಕಣ್ಣೆತ್ತಿ ನೋಡುವುದಿಲ್ಲ. ನಮಗೆ ಬೇಕಾದ ಉನ್ನತ ಶಿಕ್ಷಣ ಅಂತಹುದಲ್ಲ. ಶಿಕ್ಷಣ ಉನ್ನತವಾಗಿರಬೇಕು, ಆದರೆ ಅದು ಭಾರತದ ಕಟ್ಟಕಡೆಯ ಪ್ರಜೆಯನ್ನು ದೃಷ್ಟಿಯಲ್ಲಿರಿಸಿಕೊಂಡಿರಬೇಕು ಕೂಡ. ಹಾರ್ವರ್ಡನ್ನು ನಮ್ಮಲ್ಲಿ ಅಚ್ಚಳಿಸಬೇಕೆಂಬ ಶಿಕ್ಷಣ ತಜ್ಞನನ್ನು ಅನರ್ಥಕ ಬೇಜವಾಬ್ದಾರ ಎನ್ನಬೇಕಷ್ಟೆ. ಬೇರೆ ದೇಶಗಳಲ್ಲಿ ಮಾನ್ಯತೆ ದೊರಕಿಸಿಕೊಳ್ಳುವುದು ನಮ್ಮ ವಿದ್ವತ್ತಿನ ಗುರಿಯಾಗಬಾರದು; ಪರಕೀಯರ ಹಿಡಿತದಲ್ಲಿ ಸಿಲುಕಿಕೊಳ್ಳದೆ ಸಾರ್ವಭೌಮತ್ವವನ್ನು ರಕ್ಷಿಸುವಂತಹ ಶಿಕ್ಷಣವು ನಮ್ಮದಾಗಬೇಕು. ಗುಣಮಟ್ಟವನ್ನು ಉಪೇಕ್ಷಿಸಬೇಕೆಂದು ಇದರರ್ಥವಲ್ಲ; ಗುಣಮಟ್ಟವೆಂದರೆ ನಮ್ಮ ಅವಶ್ಯಕತೆಗಳನ್ನು ಗಣನೆಗೆ ತೆಗೆದುಕೊಳ್ಳಬೇಕಿಲ್ಲವೆಂದೂ ಅಲ್ಲ. ಸ್ವತಂತ್ರವಾಗಿ ಚಿಂತಿಸುವ ಒಂದು ವಿಶಾಲವಾದ ಪಡೆ ಇಲ್ಲದಿದ್ದರೆ ಈ ಗುರಿಯನ್ನು ಕಾಯ್ದುಕೊಳ್ಳುವುದು ಹೇಗೆ ? ಉನ್ನತ ಶಿಕ್ಷಣಕ್ಕೆ ನೀಡಬೇಕಾದ ಸ್ಥಾನಕ್ಕೆ ಇದು ಸಮರ್ಥನೆ. ಸಾರ್ವಜನಿಕ ಹಣವನ್ನು ತೊಡಗಿಸದಿದ್ದರೆ ಈ ಗುರಿಯನ್ನು ಹೊಂದಿರುವ ಉನ್ನತ ಶಿಕ್ಷಣ ಹೇಗೆ ರೂಪುಗೊಂಡೀತು ?

ರಾಜೀವ್ ಗಾಂಧಿ ಅವತರಿಸಿದ ನಂತರ ನಮ್ಮಲ್ಲಿ ಶಿಕ್ಷಣವನ್ನು ವ್ಯವಹಾರ ಯೋಗ್ಯವನ್ನಾಗಿಸುವ ತವಕ ಹೆಚ್ಚಾಗಿ, ಸ್ವತಂತ್ರ ಚಿಂತನೆಯ ಕಲ್ಪನೆಯನ್ನು ಮುರುಟುಗೊಳಿಸಲಾಗಿದೆ. ಎಲ್ಲದಕ್ಕೂ ಪರಿಹಾರವಾಗಿ ಖಾಸಗೀಕರಣವನ್ನು ವೈಭವೀಕರಿಸ ಲಾಗುತ್ತಿದೆ. ಖಾಸಗೀತನಕ್ಕೂ ಲಾಭಕೋರತನಕ್ಕೂ ಬಲವಾದ ನೆಂಟಸ್ತನ ಉಂಟು. ಶಿಕ್ಷಣವು ವ್ಯಾಪಾರವಾದಾಗ 'ಸಾವಯವ ಬುದ್ಧಿಜೀವಿ' ಆಕಾಶದಿಂದ ಉದುರಬೇಕು, ಅಷ್ಟೆ. ಉಕ್ಕು, ಸಿಮೆಂಟು, ಕಾಗದ, ಇತ್ಯಾದಿಗಳಂತೆ ಶಿಕ್ಷಣವನ್ನು ಸರ್ಕಾರಿ ಮತ್ತು ಖಾಸಗಿ ಕ್ಷೇತ್ರಗಳೆರಡರಲ್ಲೂ ಉತ್ಪಾದಿಸಲಾಗದು; ಏಕೆಂದರೆ, ಅದು ಕೇವಲ ವ್ಯವಹಾರ ಯೋಗ್ಯತೆಯಲ್ಲ. ಒಳ್ಳೆಯ ವೇತನ ಪಡೆಯಲು ಬೇಕಾದ ಶಿಕ್ಷಣ ಒಂದು, ಒಳ್ಳೆಯ ಸಾವಯವ ಬುದ್ಧಿಜೀವಿಯಾಗಲು ಪಡೆಯುವ ಶಿಕ್ಷಣ ಬೇರೊಂದು. ಅಂದರೆ, ಸಾವಯವ ಬುದ್ಧಿಜೀವಿಗೆ ಒಳ್ಳೆಯ ವೇತನ ಪಡೆಯುವ ಅಗತ್ಯವಿಲ್ಲವೆಂದಾಗಲಿ, ಅದಕ್ಕೆ ಆವನು ಕುಶಲಿಯಲ್ಲವೆಂದಾಗಲಿ ಅರ್ಥವಲ್ಲ. ಖಾಸಗಿ ಕ್ಷೇತ್ರವು ಅವನಂಥವನಿಗೆ ಪ್ರೋತ್ಸಾಹ ನೀಡುವುದಿಲ್ಲ ಎಂದರ್ಥ. ಅದು ಸಾರ್ವಜನಿಕ ಕ್ಷೇತ್ರದ ವಿಶಿಷ್ಟ ಕೊಡುಗೆ. ಖಾಸಗೀಕರಣವು ಶಿಕ್ಷಣವನ್ನು ಒಂದು ಸರಕಾಗಿಸುತ್ತದೆಯಾದ್ದರಿಂದ ಕೊಳ್ಳುವವನಿಗೆ ಬೇಕಾದಂತಹ ಸರಕನ್ನೇ ಅದು ಉತ್ಪಾದಿಸಬೇಕು. ಅದು ವಿಶಾಲ ಜನತೆಯ ಅಗತ್ಯವನ್ನು ಪೂರೈಸಬೇಕಾಗಿಲ್ಲ. ಗಿರಾಕಿಗೆ ಸರಿಹೊಂದಬೇಕು, ಅಷ್ಟೆ. ಆದ್ದರಿಂದ ಸಾರ್ವಜನಿಕ ಹಿತವನ್ನು ಕಾಯುವ ಚಿಂತನೆ ಮತ್ತು ಕ್ರಿಯೆಗೆ ಸಾರ್ವಜನಿಕ ಉನ್ನತ ಶಿಕ್ಷಣದ ನೀತಿಯನ್ನು ಅವಲಂಬಿಸಬೇಕಾಗುತ್ತದೆ.

ತಂತ್ರಜ್ಞಾನದ ಬೆಳವಣಿಗೆಯು ಸತತವಾಗಿ ನಡೆಯುತ್ತಿರುವಾಗ ಸಹಜವಾಗಿಯೇ ವ್ಯಾವಹಾರಿಕ ಶಿಕ್ಷಣವೂ ಬದಲಾಗುತ್ತಿರುತ್ತದೆ; ಸರಕನ್ನು ಕಾಲದಿಂದ ಕಾಲಕ್ಕೆ ಆಧುನಿಕಗೊಳಿಸುತ್ತಿರಬೇಕಲ್ಲ, ಹಾಗೆ. ಮಾರುಕಟ್ಟೆ ಅದರ ಗುಣ ಮತ್ತು

ಸ್ವರೂಪವನ್ನು ನಿರ್ಧರಿಸುತ್ತದೆ. ಅದಷ್ಟೇ ಉನ್ನತ ಶಿಕ್ಷಣವೆನಿಸಿಕೊಳ್ಳಲು ಅರ್ಹವಲ್ಲ. ಈ ಹಿನ್ನೆಲೆಯಲ್ಲಿ ನಮ್ಮ ಶಿಕ್ಷಣ ಕ್ಷೇತ್ರದ ಹಣದ ಕೊರತೆಯನ್ನು ಗಮನಿಸಬೇಕು. ಶ್ರೀಮಂತರಿಗೆ ತೆರಿಗೆಯ ವಿನಾಯಿತಿ; ಜನಸಾಮಾನ್ಯರಿಗೆ ನಿರುದ್ಯೋಗ ಮತ್ತು ಸಾಮಾಜಿಕ ವೆಚ್ಚದ ಕಡಿತ: ಇದು ನಮ್ಮ ವಸ್ತುಸ್ಥಿತಿ. ಹೀಗಿರುವಾಗ, ಶಿಕ್ಷಣವು ಪೂರ್ತಿಯಾಗಿ ಖಾಸಗೀತನಕ್ಕೆ ಬಲಿಯಾದರೆ ಶಿಕ್ಷಣ ಪಡೆಯುವವರು ಯಾರು ಮತ್ತು ಅವರ ಸಾಮಾಜಿಕ ಕಾಳಜಿ ಯಾವ ತೆರನಾದದ್ದು? ಹೀಗೆ ಹೊರಗುಳಿದವರನ್ನು ಪ್ರತಿನಿಧಿಸುವ ಬುದ್ಧಿಜೀವಿ ನಮಗೆ ಬೇಡವೆ? ಸಾರ್ವಜನಿಕ ಹಣದಿಂದ ಖಾಸಗಿ ಲಾಭ ಪಡೆದುಕೊಳ್ಳುವ ಶಿಕ್ಷಣ ನಮ್ಮಲ್ಲಿ ಹೇರಳವಾಗಿದೆ. ನಮ್ಮ ಐ.ಐ.ಟಿ.ಗಳು ಮುಂತಾದುವು ಅದಕ್ಕೆ ಸಾಕ್ಷಿ. ಅಲ್ಲಿ ಶಿಕ್ಷಣ ಪಡೆದು ವಿದೇಶಕ್ಕೆ ಹೋಗುವವರೆ ಹೆಚ್ಚು. ಅದು ಅವರ ಅಪರಾಧವಲ್ಲ; ಅವರಿಗೆ ಇಲ್ಲಿಯೇ ಅವಕಾಶ ಕಲ್ಪಿಸದ ಸರ್ಕಾರದ ಅನೀತಿ ಅದು. ಪ್ರಪಂಚದ ಅತಿ ಶ್ರೀಮಂತ ದೇಶಗಳ ಆರೋಗ್ಯ ಭಾಗ್ಯವನ್ನು ಕಾಪಾಡಲು ಪ್ರಪಂಚದ ಅತಿಬಡತನದ ದೇಶಗಳ ಪ್ರಜೆಗಳು ಸಾಧನವಾಗಿರುವುದು ಈ ವಿಪರ್ಯಾಸದ ಫಲ. ನಮ್ಮ ಬಡಜನತೆ ನೀಡಿರುವ ಉದಾರ ದಾನ ಇದು! ಹಾಗೆ ಹೊರಹೋಗಿರುವವರಿಗೆ ಎಲ್ಲಿಲ್ಲದ ಗೌರವ. ಅವರಿಗೆ ದ್ವಿ-ಪೌರತ್ವವನ್ನೂ ಕೊಡುತ್ತಾರೆ. ಅವರಿಂದ ಬರುವ ವಿದೇಶಿ ವಿನಿಮಯ ಅಗಾಧವೇನಲ್ಲ. ನಿಜಕ್ಕೂ ಅಗಾಧವಾದ್ದು ಕೊಲ್ಲಿ ದೇಶಗಳಲ್ಲಿ ದುಡಿಯಲು ಹೋಗಿರುವ ಕೆಲಸಗಾರರು ಕಳಿಸುವ ಹಣ. ಅದು ವರ್ಷಕ್ಕೆ ಐದು ನೂರು ಕೋಟಿ ರೂಪಾಯಿಗಳನ್ನು ಮೀರಿದೆ, ಅದು ಬೇರೆ ವಿಷಯ. ಮುಖ್ಯವಾಗಿ ಅರಿತುಕೊಳ್ಳಬೇಕಾದ್ದು ಇದು: ಶಿಕ್ಷಣದ ಖಾಸಗೀಕರಣವನ್ನು ವಿರೋಧಿಸುತ್ತಲೇ ಸಾರ್ವಜನಿಕ ಸಂಪನ್ಮೂಲವನ್ನು ಈ ರೀತಿಯಾಗಿ ಖಾಸಗೀತನಕ್ಕೆ ಮುಡಿಪಿಡುವುದನ್ನು ವಿರೋಧಿಸಬೇಕು. ಸಾವಯವ ಬುದ್ಧಿಜೀವಿಗೆ ಆ ಕರ್ತವ್ಯವೂ ಇದೆ. ಆದರೆ ಅಂಥವರು ವಿಕಾಸವಾಗಲು ಉನ್ನತ ಶಿಕ್ಷಣ ಕ್ಷೇತ್ರವನ್ನು ಸಮಗ್ರವಾಗಿ ವ್ಯವಸ್ಥೆಗೊಳಿಸಬೇಕು.

## ಸುಧಾರಣೆಯ ಹೆಸರಿನಲ್ಲಿ ಮಹಿಳಾ ಹಕ್ಕುಗಳ ನಿರಾಕರಣೆ

ಭಾರತದಲ್ಲಿ ಏಕರೂಪ ಸಿವಿಲ್ ಸಂಹಿತೆಯ ಜಾರಿಯ ಪ್ರಸ್ತಾಪ ಬಂದಾಗಲೆಲ್ಲ ಒಂದು ಗುಂಪಿನ ಪ್ರಗತಿಪರರು ಆಯಾಯ ಪರ್ಸನಲ್ ಕಾನೂನಿನಲ್ಲಿ ಮೊದಲು ಸಮಾನತೆಯನ್ನು ತಂದು, ಅದರ ಮೂಲಕ ಸಮಾನ ಸಿವಿಲ್ ಸಂಹಿತೆಯತ್ತ ಹೆಜ್ಜೆ ಹಾಕಬೇಕೆಂಬ ಮತ್ತು ಅಂತಹ ಬದಲಾವಣೆಯ ಪ್ರಯತ್ನಗಳು ಆ ಸಮುದಾಯದವರಿಂದಲೇ ಬರಬೇಕೆಂಬ ವಾದವನ್ನು ಮಂಡಿಸುತ್ತಿರುತ್ತಾರೆ. ಈ ವಾದದ ಹಿನ್ನೆಲೆಯಲ್ಲಿ ಅಖಿಲ ಭಾರತ ಮುಸ್ಲಿಂ ಪರ್ಸನಲ್ ಬೋರ್ಡ್ ಇತ್ತೀಚೆಗೆ ಮಂಡಿಸಿದ ಮಾದರಿ ಕರಡು 'ನಿಖಾನಾಮ' ಭಾರಿ ನಿರಾಸೆ ಹುಟ್ಟಿಸಿದೆ. ಮುಸ್ಲಿಂ ಬೋರ್ಡ್ ತಯಾರಿಸಿರುವ ಈ 'ನಿಖಾನಾಮ' ಖಾಸಗಿಯ ಪ್ರಯತ್ನವಾಗಿರುವುದರಿಂದ ಎಲ್ಲರೂ ಒಪ್ಪಿ ಅದನ್ನು ಅನುಸರಿಸಲೇಬೇಕೆಂಬ ಕಡ್ಡಾಯವಿಲ್ಲ. ಆದರೂ ಇಂತಹದೊಂದು ಪ್ರಯತ್ನದಿಂದ ಪ್ರಗತಿಪರ ಸಲಹೆಗಳು ಬಂದರೆ ಕಾನೂನಿನ ಕಣ್ಣಿನಲ್ಲೂ ಮಾನ್ಯವಾಗಬಹುದಾದಂತಹ ಚಳುವಳಿಯನ್ನು ನಡೆಸಲು ಅವಕಾಶವಿರುತ್ತಿತ್ತು.

ಅಖಿಲ ಭಾರತ ಮುಸ್ಲಿಂ ಪರ್ಸನಲ್ ಬೋರ್ಡ್ ನಾಲ್ಕು ನೂರು ಸದಸ್ಯರುಗಳನ್ನು ಹೊಂದಿದ್ದು, ಭಾರತದಲ್ಲಿರುವ ಮುಸ್ಲಿಂ ಸಮುದಾಯದ ಎಲ್ಲ ಬುಡಕಟ್ಟುಗಳನ್ನು ಪ್ರತಿನಿಧಿಸುವ ಸಂಸ್ಥೆಯೆಂದೆನಿಸಿಕೊಂಡಿದ್ದು, 'ಶರೀಯತ್'ನ ಬಗ್ಗೆ ತಿಳುವಳಿಕೆ ಮೂಡಿಸುವ ಮತ್ತು ಆ ಕಾನೂನನ್ನು ರಕ್ಷಿಸುವ ಹೊಣೆ ಹೊತ್ತಿದ್ದರೂ ಈಗ ಮಂಡಿಸಿರುವ 'ನಿಖಾನಾಮ'ದಲ್ಲಿ ಅದು ಸ್ತ್ರೀಪರ ಕಾಳಜಿಯನ್ನೇನೂ ಪ್ರಕಟಪಡಿಸಿಲ್ಲ. ಬೆರಳೆಣಿಕೆಯ ಮಹಿಳಾ ಸದಸ್ಯರನ್ನು ಬಿಟ್ಟರೆ ಬಹುಪಾಲು ಪುರುಷರಿಂದ ಕೂಡಿರುವ ಈ ಪರ್ಸನಲ್ ಬೋರ್ಡ್‌ನಿಂದ ಮಹಿಳೆಯರ ಹಿತ ಕಾಯುವ ಸುಧಾರಣೆಗಳು ಜಾರಿಯಾಗಲೆಂದು ಆಶಿಸುವುದು ಮರೀಚಿಕೆಯಾಗಿದೆ. ಈ ವರ್ಷದ ಮೇ ಒಂದರಂದು ಭೋಪಾಲ್‌ನಲ್ಲಿ ಮುಸ್ಲಿಂ ಬೋರ್ಡ್ 'ನಿಖಾನಾಮ'ವನ್ನು ಪ್ರಕಟಿಸಿದ ನಂತರ ದೇಶಾದ್ಯಂತ ಮಹಿಳಾ ಸಂಘಟನೆಗಳು, ವಿಶೇಷವಾಗಿ ಮುಸ್ಲಿಂ ಮಹಿಳಾ ಸಂಘಟನೆಗಳು, ಲಿಂಗ ಸೂಕ್ಷ್ಮತೆಯಿಲ್ಲದ, ಬದಲಾವಣೆಯತ್ತ ಮನಸ್ಸೊಲ್ಲದ ಈ ಕರಡನ್ನು ತಿರಸ್ಕರಿಸುವುದಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿದವು. ಮುಸ್ಲಿಂ ಮಹಿಳೆಯರ ನಡುವೆ ಕೆಲಸ ಮಾಡುತ್ತಿರುವ ಆ ಸಂಘಟನೆಯ ನಾಯಕಿಯರು ಲಿಂಗ ನ್ಯಾಯವನ್ನು, ಮಹಿಳಾ ಸಮಾನತೆಯನ್ನು ಒಪ್ಪದ ಬೋರ್ಡ್‌ನ ವಿಚಾರಗಳಿಗೆ ತಕ್ಕುದಾಗಿಯೇ 'ನಿಖಾನಾಮ' ಇರುವುದರಿಂದ ತಾವೇ ಹೊಸ ಕರಡನ್ನು ರೂಪಿಸಿಕೊಳ್ಳುವ ನಿರ್ಧಾರವನ್ನು ಪ್ರಕಟಿಸಿ ಸವಾಲು ಎಸೆದವು.

ಯಾವುದೇ ಕಾನೂನಿನಲ್ಲಿ ಬದಲಾವಣೆ, ಸುಧಾರಣೆ, ತಿದ್ದುಪಡಿಯ ಅಗತ್ಯ ಕಂಡುಬಂದಾಗ ಅದರ ಅನುಷ್ಠಾನಕ್ಕೆ ವ್ಯಾಪಕವಾದ ಚರ್ಚೆ, ಚಳುವಳಿಗಳು ನಡೆಯಬೇಕಾಗಿರುತ್ತದೆ. ಮುಸ್ಲಿಂ ವಿವಾಹಿತ ಹೆಣ್ಣಿಗೆ ಶಾಪವಾಗಿ ಪರಿಣಮಿಸಿರುವ ಮೂರು ಬಾರಿಯ ತಲಾಖ್ ಮತ್ತು ಇತರ ಸಮಸ್ಯೆಗಳಲ್ಲಿ ಸುಧಾರಣೆಯನ್ನು ಉದ್ದೇಶಿಸಿ ಕಾರ್ಯಪ್ರವೃತ್ತವಾದ ಮುಸ್ಲಿಂ ಪರ್ಸನಲ್ ಬೋರ್ಡ್‌ನಲ್ಲಿಯೇ ಬದಲಾವಣೆಯ ಸಂಕಲ್ಪದ ಕೊರತೆಯಿದೆ; ಲಿಂಗ ನ್ಯಾಯಕ್ಕೆ ಕುರುಡಾದ, ಮಹಿಳಾ ಸಮಾನತೆಯನ್ನು ಒಪ್ಪದ ಮನಸ್ಸಿದೆ. ಆಂತರಿಕವಾಗಿ, ಸೈದ್ಧಾಂತಿಕ ಗೊಂದಲಗಳೂ ಹುಟ್ಟಿ ಸುಧಾರಣೆಯ ಹೆಸರಿನಲ್ಲಿಯೇ ಮಹಿಳಾ ಹಕ್ಕುಗಳನ್ನು ದಮನ ಮಾಡುವ ಅಂಶಗಳನ್ನು ಈ ಪರ್ಸನಲ್ ಬೋರ್ಡ್ 'ನಿಖಾನಾಮ'ದಲ್ಲಿ ಸೇರಿಸಿದೆ. ಹೈದರಾಬಾದ್‌ನ ಖಲೀದ್ ಸೈಫುಲ್ಲಾ ರೆಹಮಾನಿ ಸಂಚಾಲಕತ್ವದಲ್ಲಿ ತಯಾರಾದ ಹದಿನಾಲ್ಕು ಪುಟಗಳ ಮಾದರಿ 'ನಿಖಾನಾಮ'ವು ವಿಚ್ಛೇದನ ಕೇಳುವ ಹೆಣ್ಣಿನ ಹಕ್ಕನ್ನು ಸಂಪೂರ್ಣವಾಗಿ ತೊಡೆದುಹಾಕಿದೆ. ಮಹಿಳೆಯರಿಗೆ ಸಂಬಂಧಪಟ್ಟ ಹಲವಾರು ಸಂಗತಿಗಳನ್ನು ಈ ಸಭೆ ಗಮನಿಸಲಿಲ್ಲವೆಂಬುದು ವಿಷಾದನೀಯ ಅಂಶ. ಸಭೆಯಲ್ಲಿದ್ದ ಮುಸ್ಲಿಂ ಮಹಿಳೆಯರು ಬಹುಪತ್ನಿತ್ವ, ಮದುವೆಯ ಹೆಣ್ಣಿನ ವಯಸ್ಸು – ಇವುಗಳ ಅನುಷ್ಠಾನಕ್ಕಾಗಿ ಗಟ್ಟಿಯಾಗಿ ಒತ್ತಾಯಿಸುತ್ತಲೇ ಇದ್ದರೂ ಅವುಗಳಿಗೆ ಸಭೆ ಕುರುಡಾಗಿತ್ತು. ಮೂರು ಬಾರಿ ಪಠಿಸಿ ಏಕಕಾಲದಲ್ಲಿಯೇ ನೀಡುವ ತಲಾಖನ್ನು 'ನಿಖಾನಾಮ' ತಿರಸ್ಕರಿಸಿದರೂ ತಲಾಖ್ ಹೇಳುವ ಪದ್ಧತಿಯನ್ನು ಪ್ರಶ್ನಿಸುವ ಎದೆಗಾರಿಕೆಯನ್ನು ಮುಸ್ಲಿಂ ಪರ್ಸನಲ್ ಬೋರ್ಡ್ ತೋರಿಸಿಲ್ಲ. ಸುಮಾರು ಒಂದು ದಶಕಕ್ಕಿಂತಲೂ ಹೆಚ್ಚು ಕಾಲದಿಂದ ನಡೆದ ಚರ್ಚೆಯ ಪರಿಣಾಮವಾಗಿ ಈಗ ಪ್ರಕಟವಾಗಿರುವ 'ನಿಖಾನಾಮ'ವು ಮುಖ್ಯವಾಗಿ

೨೧ನೇ ಪುಟಕ್ಕೆ

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

ಬಿಡಿ ಸಂಚಿಕೆ ರೂ. ೧೨/-
ವಾರ್ಷಿಕ ಚಂದಾ ರೂ. ೧೨೫/-
ಮೂರು ವರ್ಷಗಳಿಗೆ ರೂ. ೩೦೦/-
(೧೫.೦೭.೨೦೦೫ರಿಂದ
ಅನ್ವಯವಾಗುವ ಪರಿಷ್ಕೃತ ದರಗಳು)

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
☎: ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☎: ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☎: ೦೮೨೧-೨೪೨೪೯೦೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☎: ೦೮೪೭೨-೨೨೪೩೦೨




## ಮೇ ಸಂಚಿಕೆ

ನಿಸರ್ಗ ತನ್ನ ಕೆಲಸವನ್ನು ತಾನು ನೆರವೇರಿಸುತ್ತಿರುತ್ತದೆ. ಮನುಷ್ಯರು ತಮ್ಮ ಕರ್ತವ್ಯವನ್ನು ಮುಗಿಸಲಿ, ನಂತರ ಬರೋಣವೆಂದು ಪ್ರಕೃತಿ ಕಾಯುವುದಿಲ್ಲ. ಆದರೆ ಶರ್ಮರು ಹಾಗೂ ಸಿ.ಡಿ.ಎನ್. ಅವರ ವಿಷಯದಲ್ಲಿ ಹಾಗಾಗಿಲ್ಲ. ಇಬ್ಬರೂ ತಾವು ಬಂದ ಕಾರ್ಯವನ್ನು ಅಚ್ಚುಕಟ್ಟಾಗಿ, ಸಮರ್ಪಕವಾಗಿ ನೆರವೇರಿಸಿದ್ದಾರೆ.

ರಾಮಚಂದ್ರ ಶರ್ಮರು ಬಹಳ ವರ್ಷಗಳ ಕಾಲ ವಿದೇಶದಲ್ಲಿದ್ದು ತಾಯ್ನಾಡಿಗೆ ಮರಳಿದವರು. ''ಆದ್ಯವಾದ ನನ್ನ ವಚನವನ್ನು ಕನ್ನಡಿಗರು ಅಷ್ಟು ಆಸ್ಥೆಯಿಂದ ಆಲಿಸುತ್ತಿಲ್ಲ, ನನಗೆ ಇಲ್ಲಿ ನ್ಯಾಯವಾಗಿ ಸಿಕ್ಕಬೇಕಾದ ಸ್ಥಾನಮಾನ ಸಿಕ್ಕಿಲ್ಲ'' ಎಂಬ ಕೊರಗು ಅವರಿಗೆ ಇದ್ದೇ ಇತ್ತು. ಆದರೆ ''ವರಿಷ್ಠ ನಾನು, ನನಗೆ ನೀವು, ಚಿಕ್ಕವರು, ಬೆಲೆ ಕೊಡಬೇಕು'' ಎಂದು ಅವರು ಘನಗಾಂಭೀರ್ಯದ ಸೋಗು ಹಾಕದೆ ಸಹಜವಾಗಿ ಎಲ್ಲರೊಡನೆ ಬೆರೆತು ಬದುಕಿದರು. ಕವಿಯಾಗಿ ಹೊಸ ಕ್ಷಿತಿಜದ ಅನ್ವೇಷಣೆ ಮಾಡಿದರು.

ಸಾಹಿತಿಗೇ ಒಂದು ಪ್ರತ್ಯೇಕವಾದ ಉಡುಗೆ-ತೊಡುಗೆ ಇದೆ ಎಂಬ ರೂಢಿಯನ್ನು ತೊಡೆದುಹಾಕಿ ಸದಾ ಸಾಮಾನ್ಯರೊಡನೆ ಬೆರೆಯಲನುಕೂಲವಾಗುವಂಥ ಚೌಕಳಿ ಅಂಗಿ ತೊಟ್ಟರು. ಬೈತಲೆ ಕಾಣದ ಎತ್ತಿ ಹಿಂದಕ್ಕೆ ಬಾಚಿದ ಅವರ ಗುಂಗುರು ಕೂದಲಿನ ದಪ್ಪತಲೆಯ ಒಳಗೆ ಬ್ರಹ್ಮಾಂಡವನ್ನೇ ಅಡಗಿಸಿಟ್ಟುಕೊಂಡಿರುವರೇನೊ ಎಂಬ ಭಾವನೆ ಬರುತ್ತಿತ್ತು. ಯಾವ ಅಂತರರಾಷ್ಟ್ರೀಯ ವೇದಿಕೆಯಲ್ಲೂ ಕನ್ನಡದ ಕವಿಯೆಂಬ ಹೆಮ್ಮೆಯಿಂದ ತಮ್ಮ ನಿರರ್ಗಳವಾದ ಇಂಗ್ಲಿಷ್ ಮಾತುಗಾರಿಕೆಯಿಂದ ಕಳೆಕಟ್ಟಿಸುತ್ತಿದ್ದ ಶರ್ಮರು ಕನ್ನಡ ಸಾರಸ್ವತದ ಸದೃಢ ಸವ್ಯಸಾಚಿ. ಯಾವ ಭಾಷೆಯಲ್ಲೇ ಆಗಲಿ ಹಗಲಗಲು ಇಂಥ ಕವಿಗಳು ಹುಟ್ಟುವುದಿಲ್ಲ. ಮರಣಾನಂತರ ಸಂಸ್ಕಾರ ವಿಧಿಗಳಂಥ ಕಗ್ಗ ಬೇಡವೆಂದು ಅವರು ಹೇಳಿದುದು ಲೋಕದೊಡನೆ ತಮ್ಮ ಮುನಿಸಿಂದಲ್ಲ; ಅವರು ಆದಿಯಿಂದಲೂ ಒಬ್ಬ ಪ್ರಖರ ವಿಚಾರವಾದಿ. ಬದುಕನ್ನು ಅಷ್ಟು ಉತ್ಕಟವಾಗಿ ಪ್ರೀತಿಸಿದ ವ್ಯಕ್ತಿಗೆ ವಿದಾಯ ಹೇಳುವುದೂ ಕೂಡ ಕೃತಕವಾಗದೆ ?

*ಮೈಸೂರು* **ಪ್ರೊ|| ಸಿ. ನಾಗಣ್ಣ**

### 'ದ್ವೈತ ವೃಕ್ಷದ ಕೆಳಗೆ' ಕವಿತೆ

ನನ್ನ ಕವಿತೆಯನ್ನು ಪ್ರಕಟಿಸದಿದ್ದರೂ ಆಗುತ್ತಿತ್ತು. ಆದರೆ ಪತ್ರಗಳ ಅಂಕಣದಲ್ಲಿ ಅಚ್ಚಾದದ್ದು ಮತ್ತು ಕವಿತೆಯ ಹಲವು ಮುಖ್ಯವಾದ ಸಾಲುಗಳನ್ನೇ ಕೈಬಿಟ್ಟದ್ದು ಕವಿತೆಯ ಆಶಯವನ್ನೇ ಮೊಟಕು ಮಾಡಿದೆ.

ಕನಕದಾಸ ಅಂತರಂಗ ಮತ್ತು ಬಹಿರಂಗದ ಪರಿಪೂರ್ಣ ವ್ಯಕ್ತಿತ್ವದ ಸಾಧಕನಾಗಿದ್ದೂ ದಾಸರಿಂದ, ಬ್ರಾಹ್ಮಣಶಾಹಿಯಿಂದ ತಿರಸ್ಕೃತವಾದುದನ್ನು ಧ್ವನಿಪೂರ್ಣವಾಗಿ ಅಭಿವ್ಯಕ್ತಿಸುವ ಕವಿತೆಯ ಭಾಗವನ್ನು ಮತ್ತು ವರ್ಣ ವ್ಯವಸ್ಥೆಯ ನಮ್ಮ ಸಮಾಜದಲ್ಲಿ ಇಂದಿನ ಸಂದರ್ಭದಲ್ಲೂ ಶೂದ್ರ, ಕೆಳವರ್ಗಗಳ ಜನರ ಪುರೋಗಾಮಿ, ಅಭಿವೃದ್ಧಿಪರ ಪ್ರಯತ್ನಗಳನ್ನು ಹೇಗೆ ಅಡ್ಡಿಪಡಿಸಿ ಹತ್ತಿಕ್ಕಲಾಗುತ್ತಿದೆಯೆಂಬುದನ್ನು ಧ್ವನಿಸುವ ಭಾಗವನ್ನು ಕೈಬಿಟ್ಟುದು ಕವಿತೆಯ ಆಶಯ, ಉದ್ದೇಶಗಳ ದಿಕ್ಕು ತಪ್ಪಿಸಿದಂತಾಗಿದೆ. ಅಲ್ಲದೆ ವೈದಿಕಶಾಹಿಯ ಸೂಕ್ಷ್ಮ ರಾಜಕಾರಣವನ್ನು, ಭೇದ ನೀತಿಯನ್ನು ಹೊರ ಹಾಕುವ ಕವಿತೆಯ ಕೊನೆಯ ಭಾಗದ ಮೊದಲೆರಡು ಸಾಲುಗಳನ್ನು ಕೈಬಿಟ್ಟು ಕೊನೆಯ ಎರಡು ಸಾಲುಗಳನ್ನು ಮಾತ್ರ ಉಳಿಸಿಕೊಂಡದ್ದು ಕವಿತೆಗೆ ಅಸ್ಪಷ್ಟತೆಯ ಛಾಯೆಯನ್ನು ನೀಡಿದೆ.

ಶೋಷಕ ಮನೋಭಾವದ ವೈದಿಕ ವ್ಯವಸ್ಥೆಯ ತಂತ್ರಗಳನ್ನು ಬಯಲು ಮಾಡುವ ಈ ಕವಿತೆ ಜಾತ್ಯತೀತ ಮತ್ತು ಜನಪರ ಧೋರಣೆಗಳೇ ಉಸಿರಾದ ಪತ್ರಿಕೆಗೆ ಹಿಡಿಸಲಿಲ್ಲವೇ ?

*ಬೆಂಗಳೂರು* **ರಾಜಶೇಖರ ರಾಮಣ್ಣ ಬಿಲ್ವಪತ್ರಿ**

ಜನಪದದಲ್ಲಿ ಚಿತ್ರಕಲೆಯ ಬೆಳವಣಿಗೆ ಕುರಿತ ಬಂದಗದ್ದೆ ರಾಧಾಕೃಷ್ಣರ ಲೇಖನ ಆಧುನಿಕತೆಯನ್ನೂ ನಾಚಿಸುವಂತಿತ್ತು. ಚಿತ್ರಕಲೆಗೆ ವಿವಿಧ ಬಗೆಯ ಹಳ್ಳಿಗಳಲ್ಲಿ ಸಿಗುವ ಮಣ್ಣುಗಳು, ಅರಿಶಿನ ಮೊದಲಾದ ಪ್ರಾಕೃತಿಕ ವಸ್ತುಗಳಲ್ಲಿನ ಚಿತ್ರಕಲೆ ನೈಜವಾದದ್ದು. ಇಂದಿನ ವಿಜ್ಞಾನದ ರಾಸಾಯನಿಕಗಳು, ಬಣ್ಣಗಳು ಇತ್ಯಾದಿ ಬಳಸುವ ಪರಿಸರ ಮಾರಕಗಳು. ನವೀನ ಜಗತ್ತಿನ ಬುದ್ಧಿಹೀನ ಹುಲು ಮಾನವನಿಗೆ ಅಗತ್ಯವಿರುವುದು ವಿಪರ್ಯಾಸದ ಸಂಗತಿ. ಮೊದಲು ಗ್ರಾಮೀಣರು ತಮ್ಮ ಮನೆಯ ಮುಂದಿನ




ಗೋಡೆಗಳಿಗೆ ಚಿತ್ರ ಬಿಡಿಸಿ ಪ್ರತಿ ದಿನ ಸಾಂಸ್ಕೃತಿಕ ಸೊಬಗನ್ನು ಸವಿಯುತ್ತಿದ್ದರು. ಪಕ್ಷಿ, ಝರಿ-ತೊರೆ, ಮರ ಮೊದಲಾದ ಬದುಕಿನ ಅವಿಭಾಜ್ಯ ಅಂಗಗಳನ್ನು ಚಿತ್ರಿಸುತ್ತಿದ್ದರು. ಆದರೆ ಇಂದು ಪ್ಲಾಸ್ಟಿಕ್ ಜಗತ್ತಿನಲ್ಲಿ ಇವೆಲ್ಲವೂ ಮರೀಚಿಕೆಯಾಗುತ್ತಿದೆ.

*ಲಕ್ಷ್ಮೀಸಾಗರ (ಕೋಲಾರ ಜಿಲ್ಲೆ)* **ಪದ್ಮಶಾಲಿ ಎಲ್. ಕೆ. ಮಂಜುನಾಥ**

'ಮೇ' ತಿಂಗಳು 'ಕಾರ್ಮಿಕ' ತಿಂಗಳೆಂದೇ ವಾಡಿಕೆ. ಅಲ್ಲದೆ, ಎಲ್ಲಾ ಶ್ರಮಜೀವಿಗಳಿಗೆ, ಕಾರ್ಮಿಕ ಬಂಧು-ಮಿತ್ರರಿಗೆ ಪುನರುಜ್ಜೀವನ ಸಿಕ್ಕ ಸ್ಮರಣೆಯ ದಿನ. ಇಂತಹ ವಿಶೇಷದ ಬಗ್ಗೆ ಹಾಗೂ ಮಹಾನ್ ಚೇತನ ೨೧ನೇ ಶತಮಾನದಲ್ಲಿ ಮಹಾ ಮಾನವೀಯ ಚೈತನ್ಯಕ್ಕೆ ಪ್ರೇರಣೆ ನೀಡಿದ ಕಾರ್ಲ್ ಮಾರ್ಕ್ಸ್ ಕುರಿತು ಬರೆದ ಸಂಪಾದಕೀಯ ಅರ್ಥಗರ್ಭಿತವಾಗಿದೆ.

೨೦೦೫ರ ಏಪ್ರಿಲ್ ತಿಂಗಳು ಎರಡು ಮಹಾನ್ ಚೇತನಗಳನ್ನು ಕನ್ನಡದ ನೆಲದಿಂದ ದೂರ ಸೆಳೆದುಕೊಂಡು ಹೋದದ್ದು ದುಃಖಕರ ಸಂಗತಿಯೇ. 'ನವ್ಯ'ದ ಸದಾ ನವಚೇತನದ ನಗುವಿನ ಡಾ|| ಬಿ.ಸಿ. ರಾಮಚಂದ್ರಶರ್ಮ ಹಾಗೂ 'ಧ್ವನ್ಯಾಲೋಕ'ದ ದೊರೆ 'ಸಿಡಿಎನ್' ಇವರನ್ನು ಈ ಸಂದರ್ಭದಲ್ಲಿ ನೆನೆದು ಪತ್ರಿಕೆ ತನ್ನ ಮಾನವೀಯಾಂತಃಕರಣದ ಶ್ರೀಮಂತಿಕೆ ಮೆರೆದಿದೆ.

*ಕೂಡ್ಲಿಗಿ* **ಸಿ. ಮಂಜುನಾಥ**

## ಜೂನ್ ಸಂಚಿಕೆ

ಸುಂದರ ಪ್ರಕೃತಿಯ ರಮಣೀಯ ಸೊಬಗನ್ನು ಹೊತ್ತು ಬಂದ ಜೂನ್-೨೦೦೫ರ 'ಹೊಸತು' ಸಂಚಿಕೆ ಮೈ-ಮನಗಳಿಗೆ ಮುದ ನೀಡಿತು. ಪುಟ ತೆರೆದೊಡನೆ 'ನೇತ್ರ'ರಾಜರ ಗಜಗಮನ ಈ ಬಗ್ಗೆ ಶ್ರೀಕಂಠ ಗುಂಡಪ್ಪರವರ ಲೇಖನ ಓದಿದೆ. ಬಾನುಲಿಗೆ ಭಾಷೆ ನೀಡಿದ 'ಎನ್ಕೆ'ಯವರ ಬಗ್ಗೆ ಜಿ. ಎಂ. ಶಿರಹಟ್ಟಿಯವರ ಲೇಖನ ಅರ್ಥಗರ್ಭಿತವಾಗಿತ್ತು. ಶಿಕ್ಷಣ, ಸಾಹಿತ್ಯ, ಹೀಗೆ ಪ್ರಚಲಿತ ವಿದ್ಯಮಾನಗಳ ಕನ್ನಡಿಯಂತಿರುವ 'ಹೊಸತು' ಹೆಸರಿಗೆ ತಕ್ಕಂತೆ ಮುದ ನೀಡುತ್ತಿದೆ. ಓದುಗರೇ ಬರೆಯುವ ಅಂಕಣವನ್ನು ಪ್ರಾರಂಭಿಸಿ, ಅದರಲ್ಲಿ ಪ್ರಶ್ನೋತ್ತರ ಅಂಕಣವೂ ಇರಲಿ.

*ಮೈಸೂರು* **ಕಾಳಹುಂಡಿ, ಕೆ. ವಿ. ಶಿವಕುಮಾರ್**

ಜೂನ್ ತಿಂಗಳ ಸಂಪಾದಕೀಯಕ್ಕೆ ಸಂಬಂಧಿಸಿದಂತೆ ಅಂದು ಹಿರೋಶಿಮಾ ನಗರಕ್ಕೆ ಅಣು ಬಾಂಬು ಮಾರಕಾಸ್ತ್ರವನ್ನು ಸಿಡಿಸುವಾಗ ಅಮೆರಿಕಾದ ಅಧ್ಯಕ್ಷರಿಗೆ ಅಂತಃಸಾಕ್ಷಿಯ ಅಳುಕು ಇರದಿದ್ದುದು ಆಕಸ್ಮಿಕವೇನೂ ಅಲ್ಲ. ಇರಾಕಿನ ಮೇಲೆ ಅವರು ಇತ್ತೀಚೆಗೆ ನಡೆಸಿದ ಧಾಳಿ ಮತ್ತು ಮುಂದುವರಿಯುತ್ತಿರುವ ಹಿಂಸಾಚಾರವು ಆಕಸ್ಮಿಕವಲ್ಲ. ಅದು ಪೂರ್ವಯೋಜಿತ ತಂತ್ರ. ತಮ್ಮ ಸ್ವಾರ್ಥಕ್ಕೆ ಆ ದೇಶವು ಎಲ್ಲೂ, ಯಾವಾಗಲೂ, ಹೀನ ಕಾರ್ಯವೆಸಗಲು ಹಿಂಜರಿಯದಷ್ಟು ಮಟ್ಟಿಗೆ ಅಂತಃಸಾಕ್ಷಿಯ ಅಳುಕನ್ನು ಕಳೆದುಕೊಂಡಿದೆ ಎಂಬುದಕ್ಕೆ ಇರಾಕಿನ ಘಟನೆ ಒಂದು ನಿದರ್ಶನ.

'ಸೀಯಾರ್ಕೆ'ಯವರ ''ಮರೆಯಲಾಗದ...'' ಸಂಬಂಧಿಸಿ – ಎರಡನೇ ಜಾಗತಿಕ ಯುದ್ಧದ ನಂತರ ಅಮೆರಿಕಾ ದೇಶವು ಯೂರೋಪಿನ ಕೆಲವು ಮಿತ್ರರ ರಾಷ್ಟ್ರಗಳನ್ನು ''ನ್ಯಾಟೋ'' ಸಂಧಾನದ ಮೂಲಕ ಒಂದುಗೂಡಿಸಿ, ಅವನ್ನು ಸೋವಿಯತ್ ಒಕ್ಕೂಟಕ್ಕೆ ವಿರೋಧವಾಗಿರಿಸಿ, ಆ ರಾಷ್ಟ್ರಗಳಿಗೆ ತನ್ನ 'ಮಾರ್ಷಲ್ ಪ್ಲಾನಿನ' ಮೂಲಕ ಆರ್ಥಿಕ ನೆರವು ನೀಡಿ ಅವನ್ನು ಪುನಶ್ಚೇತನಗೊಳಿಸಿದ್ದುದನ್ನು ಇಲ್ಲಿ ಸ್ಮರಿಸಬಹುದು.

*ಸುರತ್ಕಲ್* **ಟಿ. ಸಿ. ಶ್ರೀಯಾನ್**

ಪ್ರೊ|| ಬರಗೂರು ರಾಮಚಂದ್ರಪ್ಪ ಅವರ ಅದ್ಭುತ, ಅಪೂರ್ವ ಬರಹ ''ತಂತ್ರಜ್ಞಾನದ ಮಧ್ಯೆ ಮಾತು ಮತ್ತು ಮನುಷ್ಯ.'' ತಂತ್ರಜ್ಞಾನ ಆಧುನಿಕ ಜೀವನದಲ್ಲಿ ಒಂದು ಅವಿಭಾಜ್ಯ ಅಂಗವಾಗಿದೆ. ಮನುಷ್ಯನ ಮನಸ್ಸಿಗೆ ಮೆದಳು ಕೊಟ್ಟ ಆಕಾರವೇ ತಂತ್ರಜ್ಞಾನ.

ತಂತ್ರಜ್ಞಾನ ಇಲ್ಲದ ಜೀವನವನ್ನು ಊಹಿಸಿಕೊಳ್ಳಲು ಸಾಧ್ಯವಿಲ್ಲದಂತಹ ಪರಿಸ್ಥಿತಿ ಈಗ ಬಂದಿದೆ.

ಡಾ|| ರುಮಾಲೆಯವರ ಲೇಖನ: ಸಂಗೀತ ನಮ್ಮ ಮನಸ್ಸಿನ 'ನೋವು' ಕಡಿಮೆ ಮಾಡಬೇಕೇ ಹೊರತು 'ನೋವು' ಹೆಚ್ಚು ಮಾಡುವ ಹೃದಯಕ್ಕೆ 'ಗಾಯ' ಮಾಡುವ ಸಂಗೀತ ಬೇಡ !

*ಶಿವಮೊಗ್ಗ* **ಪಿ. ಗೋವಿಂದರಾಜ್**

### ನೀವೇನೆನ್ನುವಿರಿ ?

ವಿದ್ಯಾರ್ಥಿಗಳು ಅಥವಾ ಈಗಷ್ಟೆ ವಿದ್ಯಾಭ್ಯಾಸ ಮುಗಿಸಿರುವವರು ನಿಮ್ಮ ಅನುಭವದಿಂದ ಕಲಿಕಾ ಮಾಧ್ಯಮ ಯಾವುದಿರಬೇಕು, ಇಂಗ್ಲಿಷನ್ನು ಯಾವ ತರಗತಿಯಿಂದ ಹೇಳಿಕೊಡಬೇಕು – ಎಂಬ ಬಗ್ಗೆ ನಿಮ್ಮ ಅಭಿಪ್ರಾಯವನ್ನು ೪೦-೫೦ ಪದಗಳಿಗೆ ಮೀರದಂತೆ ಬರೆದು ತಿಳಿಸಿ. ಆಯ್ಕೆಯಾದ ಕೆಲವನ್ನು ಪ್ರಕಟಿಸಲಾಗುತ್ತದೆ.

– ಸಂಪಾದಕ

**ಶಿಕ್ಷಣ, ಶ್ರಮದುಡಿಮೆ ಮತ್ತು ಗಾಂಧೀಜಿ**

ಜಗತ್ತಿನ ಸರ್ವಶ್ರೇಷ್ಠ ವಿಜ್ಞಾನಿ ಐನ್‌ಸ್ಟೀನ್ ಹೇಳಿದ ರಕ್ತಮಾಂಸಗಳಿಂದ ತುಂಬಿದ ಇಂತಹ ವ್ಯಕ್ತಿಯೊಂದು ನಮ್ಮ ಭೂಮಿಯಲ್ಲಿ ನಡೆದಾಡಿತ್ತು ಎಂಬುದನ್ನು ಮುಂದಿನ ಜನಾಂಗ ನಂಬಲಾರದು ಎಂಬ ಮಾತುಗಳನ್ನು ಸತ್ಯಗೊಳಿಸಿರುವ ಭಾರತೀಯರು, ಸಾರ್ವಕಾಲಿಕ ಶ್ರೇಷ್ಠ ಮಾನವ ಗಾಂಧಿಯನ್ನು ಮೂಲೆಗುಂಪಾಗಿರಿಸಿ ಆ ಸ್ಥಾನದಲ್ಲಿ ಸಿನಿಮಾ ನಟರನ್ನು, ಕ್ರಿಕೆಟ್ ಕಲಿಗಳನ್ನು ಅಲಂಕರಿಸಿರುವ ಸಂಕ್ರಮಣ ಕಾಲದಲ್ಲಿ ಮೂಡಿಬಂದಿರುವ ಸಕಾಲಿಕ ಪ್ರಜ್ಞಾ ಪೂರ್ಣ ಲೇಖನವಿದು. ಗಾಂಧೀಜಿ ಎಂದರೆ ಕೇವಲ ಸ್ವಾತಂತ್ರ್ಯ ಹೋರಾಟಗಾರನೆಂದು ಚಿತ್ರಿಸಿರುವ ಪಠ್ಯಪುಸ್ತಕ ಲೇಖಕರು, ತಮ್ಮ ರಾಜಕೀಯ ಲಾಭಕ್ಕಾಗಿ ವ್ಯಕ್ತಿಯನ್ನು ಆರಾಧಿಸಿ ವ್ಯಕ್ತಿತ್ವವನ್ನು ಮರೆತ ರಾಜಕಾರಣಿಗಳು, ಗಾಂಧೀಜಿಯಲ್ಲಿ ತಪ್ಪುಗಳನ್ನು ಹುಡುಕಿ ಅವುಗಳ ನೆರಳಿನಲ್ಲಿ ತಮ್ಮ ನೆಲೆಯನ್ನು ಗುರುತಿಸಿಕೊಳ್ಳುವ ಬುದ್ಧಿವಂತರು ಗಾಂಧೀಜಿಯ ಒಟ್ಟಾರೆ ಬದುಕಿನಿಂದ ದೂರವಾದ ಪರಿಣಾಮವೇ ನಮ್ಮ ದೇಶದ ಅತಂತ್ರ ಸ್ಥಿತಿ. ಗಾಂಧೀಜಿ ತಮ್ಮ ಅನುಭವಗಳಿಂದ ನೋಡಿ, ಅನುಭವಿಸಿದ ಅನುಭಾವಗಳಿಂದ ಮೂಡಿದ ಚಿಂತನೆಗಳನ್ನು ಮಂಡಿಸಿದರು. ವಿಚಾರಗಳನ್ನು ತಿಳಿಸಿದರು ಹಾಗೂ ತತ್ತ್ವಗಳನ್ನು ಬೋಧಿಸಿದರು. ಆದರೆ ಇಂದಿನ ಜನಾಂಗ ಕೇವಲ ಸಿದ್ಧಾಂತಗಳ ಮೇಲೆ, ರಾಜಕೀಯ ಲಾಭಗಳ ಮೇಲೆ, ಆಳವಿಲ್ಲದ ಜ್ಞಾನದ ಮೇಲೆ ಸಿರಿಸಂಪತ್ತಿನ ಗಳಿಕೆಗಾಗಿ ಬದುಕುತ್ತಿರುವಾಗ ಗಾಂಧೀಜಿಯ ಬದುಕಿನ ತತ್ತ್ವಗಳು ಹಿತವಾಗಲಾರದು. ತಿನ್ನಲು ತುಂಡು ಮೀನನ್ನು ನೀಡುವ ಬದಲು ಮೀನು ಹಿಡಿಯಲು ಕಲಿಸಿದರೆ ಬದುಕಲು ಕಲಿಸಿದಂತೆ ಎಂಬ ಖ್ಯಾತ ಮಾತಿನಂತೆ ಗಾಂಧೀಜಿ ಸಾರ್ವಕಾಲಿಕ ಬದುಕಿಗೆ ಸೂತ್ರಗಳನ್ನು ಸೂಚಿಸಿದ್ದರು, ಎಚ್ಚರಿಸಿದ್ದರು ಹಾಗೂ ಕಳಕಳಿಯನ್ನು ಹೊಂದಿದ್ದರು ಎಂಬುದರ ಅರಿವು ಕಿಂಚಿತ್ತಾದರೂ ಮೂಡಿದಾಗ ಜನರು ಬದುಕುವ ದಾರಿಯನ್ನು ಬದಲಾಯಿಸಿಕೊಂಡಾರು.

*ಬೆಂಗಳೂರು* — ***ನರೇಂದ್ರ ಸಿರಕಜೆ***

ಡಾ|| ಜಿ. ಬಿ. ಹರೀಶ ಅವರ 'ಕುಸುಮಾಕರ ದೇವರಗೆಣ್ಣೂರ' ಪರಿಚಯಾತ್ಮಕ ಲೇಖನ ನೋಡಿ ತುಂಬ ಸಂತೋಷವಾಯಿತು. ಗಡಿನಾಡ ಭಾಗದಲ್ಲಿದ್ದುಕೊಂಡು ಕನ್ನಡ ಸಾಹಿತ್ಯದ ತಪಸ್ಸು ಮಾಡುತ್ತಿರುವ – ತುಂಬ ಘನ ವ್ಯಕ್ತಿತ್ವವನ್ನು ಬದುಕುತ್ತಿರುವ ಹಿರಿಯ ಸಾಹಿತಿ ವಸಂತ ದಿವಾಣಜಿಯವರ ಸತ್ತ್ವಪೂರ್ಣ ಸಾಹಿತ್ಯದ ಪರಿಚಯ ಆಗಬೇಕಾಗಿರುವುದು ಅಗತ್ಯವಿದೆ ಅನ್ನುವ ಹರೀಶರ ಮಾತುಗಳು ತುಂಬ ಅರ್ಥಪೂರ್ಣವಾಗಿವೆ. ಸತ್ಯಕಾಮ, ಬೇಂದ್ರೆ, ಮಧುರಚೆನ್ನ, ಡಾ|| ಸಿಂಪಿ ಲಿಂಗಣ್ಣ, ಡಾ|| ಕಾಪಸೆಯವರ ನಿಕಟ ಸಂಪರ್ಕ ಹೊಂದಿರುವ ವಸಂತ ದಿವಾಣಜಿಯವರು ನಮ್ಮ ಮಧ್ಯೆ ಇರುವುದು ನಮ್ಮ ಭಾಗ್ಯ, ಶ್ರೀ ದಿವಾಣಜಿಯವರ ೩-೪ ಉಪನ್ಯಾಸಗಳನ್ನು ಆಲಿಸಿದ ನಮಗೆ ಅವರು ಭೌತಿಕವಾಗಿಯೂ ತುಂಬ ಹತ್ತಿರದವರು. ಸತ್ಯಕಾಮರ ಆರಾಧನಾ ಸಮಾರಂಭದಲ್ಲಿ ಹಾಗೂ ಅಕ್ಕಲಕೋಟೆ ಕಾಲೇಜಿನಲ್ಲಿ ಹಾಗೂ ನಮ್ಮ ಚಿಂತನ ವೇದಿಕೆಯ ಸಮಾರಂಭದಲ್ಲಿ ಅವರೊಂದಿಗೆ ಕಳೆದ ಕ್ಷಣಗಳು ನಮಗೆ ಬಹಳ ಅಪರೂಪವೆನಿಸಿವೆ. ಅವರ ಕುರಿತು ಪ್ರಕಟಿಸಿದ ತಮಗೆ ಹಾಗೂ ಲೇಖನ ಬರೆದ ಲೇಖಕರಿಗೂ ಕೃತಜ್ಞ.

*ಜಮಖಂಡಿ* — ***ಅರ್ಜುನ ಕೋರಟಕರ***

ಜೂನ್-೦೫ ಅಂತರರಾಷ್ಟ್ರೀಯ ಪರಿಸರ ದಿನ. ಇದಕ್ಕೆ ಪೂರಕವೆಂಬಂತೆ ಅತ್ಯಂತ ಆಕರ್ಷಕ ಮುಖಪುಟ. ಅದನ್ನು ನೋಡಿದೊಡನೆ ಮನಕ್ಕೆ ಉಲ್ಲಾಸ. ಇನ್ನು ರಕ್ಷಾಪುಟದಲ್ಲಿನ 'ಗಜಗಮನ'ದ ಅತ್ಯಂತ ಮೋಹಕ ವರ್ಣ ಪಾರದರ್ಶಿಕೆಯೂ ಇನ್ನೊಂದು ರೀತಿ ಪರಿಸರಕ್ಕೆ ಹೊಂದಿಕೊಂಡಂತೆ ಭಾಸವಾಯಿತು.

ಮತ್ತೊಂದು ಮನ ನೋಯುವ ಲೇಖನ ಪರಿಸರದ ನಾಶದತ್ತ ಮಾನವನ ದಾಪುಗಾಲನ್ನು ಪ್ರತಿಬಿಂಬಿಸಿತ್ತು, ಅದೆಂದರೆ ಡಾ|| ರಹಮತ್ ತರೀಕೆರೆಯವರ 'ಕೇಳುವವರಿಲ್ಲದ ಸಾವುಗಳು'.

ಒಟ್ಟಾರೆ ಪರಿಸರ ಕಾಳಜಿ ತಿಂಗಳ ಸಂಚಿಕೆಯಲ್ಲಿ ಅಭಿವ್ಯಕ್ತ.

*ಬೆಂಗಳೂರು* — ***ನೆ. ಲ. ರಾಮಮೂರ್ತಿ***

---

*೩ನೇ ಪುಟದಿಂದ (ಈ ತಿಂಗಳು....)*

ಪ್ರಕಾರ ಮಸೀದಿಯನ್ನು ಉರುಳಿಸಲೇಬೇಕಾಗಿತ್ತು, ಅವರ ಜಿದ್ದಿನ ಆಕಾಂಕ್ಷೆಯ ಪೂರೈಕೆಗೆ. ಆದರೆ ಪಾಕಿಸ್ತಾನದ ನೀರು-ಗಾಳಿಗಳಿಗೆ ಅದೇನು ಅದ್ಭುತ ಶಕ್ತಿಯಿದೆಯೋ, ಅಲ್ಲಿ ಅದ್ವಾನಿ ಯವರ ಹೃದಯ ಕರಗಿಬಂತು. ಮಸೀದಿ ಉರುಳಿಸಿದ ದಿನ ಅವರ ಜೀವನದಲ್ಲಿ ಅತ್ಯಂತ ದುಃಖದ ದಿನವೆಂಬಂತೆ ತೋರಿಬಂತು, ಕಡೇ ಪಕ್ಷ ಮಾತಿನಲ್ಲಾದರೂ ಹಾಗೆ ಹೇಳಬೇಕಾಯಿತಲ್ಲ!

ಅಲ್ಲಿಂದಾಚೆಗೆ ಆರಂಭವಾದದ್ದು ಅದ್ವಾನಿ-ಸಿಂಘಾಲ್ ಕೃತಕ ಕಲಹ. ವಿಶ್ವ ಹಿಂದು ಪರಿಷತ್ತಿನ ''ಧರ್ಮಸಂಸತ್ತು'' ದೆಹಲಿಯ ಸಂಸತ್ತಿಗಿಂತಲೂ ಹೆಚ್ಚು ಪಾವನವಾದ್ದೆಂದು ಹೇಳುತ್ತಿದ್ದವರು ಅದ್ವಾನಿ. ಅಂತೆಯೇ ಅದರ ''ಮಾರ್ಗದರ್ಶಕ ಮಂಡಲ''ವು ದೇಶಕ್ಕೆ ದಾರಿದೀಪವೆಂದೂ ಅವರು ಹೇಳುತ್ತಿದ್ದರು. ಈಗ ಅದು ಅದ್ವಾನಿಯವರಿಗೆ ಬೈಗುಳ ಸುರಿಮಳೆ ಸುರಿಸಿದೆ. ಅದನ್ನೆಲ್ಲ ಕಲಿಸಿ ಈ ಘೋರ ಗಿಳಿಯನ್ನು ಪೋಷಿಸಿದ್ದು ಇವರೇ. ಬಜರಂಗ ದಳಕ್ಕೆ ''ಮೃದು ನುಡಿಗಳನು'' ಅದ್ವಾನಿ ಎಂದೂ ಕಲಿಸಲಿಲ್ಲ. ''ನನಗೆ ನೀನು ಭಾಷೆ ಕಲಿಸಿದೆ, ಅದರ ಪ್ರಯೋಜನ ಏನೆಂದರೆ ನಿನಗೆ ಹಿಡಿಶಾಪ ಹಾಕಲು ನನಗೆ ಬರುತ್ತದೆ'' ಎಂದು ಮಂತ್ರವಾದಿ ಅದ್ವಾನಿಗೆ ತೋಗಡಿಯಾ ಹೇಳುತ್ತಿದ್ದಾರೆ. ''ಅಹಮದಾಬಾದಿನೊಳಕ್ಕೆ ಕಾಲಿಡಲು ಬಿಡುವುದಿಲ್ಲ'' ಎಂದು ಗುಜರಾತಿನ ಹಿಂದು ವೀರರು ಅದ್ವಾನಿ ವಿರುದ್ಧ ಘರ್ಜಿಸಿದ್ದಾರೆ. ಬೇರೆಯವರ ತಲೆಬೇಟೆ ಮಾಡುವ ದುಷ್ಟತನ ಮತ್ತು ಕೀಳುಭಾಷೆಯನ್ನು ಕಲಿಸಿ, ಆದರಿಂದ ಲಾಭ ಪಡೆದು, ಈಗ ಅದ್ವಾನಿ ಪೇಚಿಗೆ ಸಿಕ್ಕಿದ್ದಾರೆ. ಆದರೆ ಭಾರತೀಯ ಜನತಾ ಪಕ್ಷ ಮತ್ತು ವಿಶ್ವ ಹಿಂದೂ ಪರಿಷತ್ತು ಹಾಗೂ ಅದರ ಮಾತೃಸಂಸ್ಥೆ ರಾಷ್ಟ್ರೀಯ ಸ್ವಯಂಸೇವಕ ಸಂಘ, ಇವುಗಳ ಸಂಬಂಧ ಮತ್ತೆ ಹಿಂದಿನಂತೆಯೇ ಇರುತ್ತದೆ. ವೆಂಕಯ್ಯ ನಾಯ್ಡು ಹೇಳುತ್ತಾರೆ : ''ಅವರು ಬಾಯಿ ಮುಚ್ಚಿಕೊಂಡಿರಲಿ, ನಮ್ಮ ಪಕ್ಷವನ್ನು ಹೇಗೆ ನಡೆಸಬೇಕೆಂದು ನಮಗೆ ತಿಳಿದಿದೆ, ಅದಕ್ಕೆ ಅವರ ಸಲಹೆ ಬೇಕಿಲ್ಲ'' ಹೌದೆ ? ಹಾಗಿದ್ದರೆ ಅದೀಗ ಇನ್ನೊಂದು ಅದ್ಭುತ! ವಯಸ್ಸಿನಲ್ಲಿ ಮತ್ತು ಅನುಭವದಲ್ಲಿ ಅದ್ವಾನಿಯವರಿಗಿಂತಲೂ ಕಿರಿಯವನಾದ ರಾಮ ಮಾಧವ್ ಹೇಳಿದಂತೆ ಸದಾ ನಡೆಯಲು ಇವರಿಗೆಲ್ಲಾ ಏಕೆ ಅಷ್ಟೊಂದು ಶ್ರದ್ಧೆ? ನಾಗಪುರದಿಂದ ಸುದರ್ಶನ ಚಕ್ರ ಹೊರಡುತ್ತದೆಂದು ಗೊತ್ತಾದ ಕೂಡಲೇ ಇವರೆಲ್ಲರ ಬಾಯಿ ಕಟ್ಟುತ್ತದೆ. ರಾಜಕೀಯವನ್ನು ಮಾಡುವುದಿಲ್ಲವೆನ್ನುವ ಆರೆಸ್ಸೆಸ್‌ನ ಸುದರ್ಶನರದ್ದು ಅಂತಹ ರಾಜಕೀಯ ಪ್ರತಾಪ! ಸುದರ್ಶನ್-ಸಿಂಘಾಲ್ ಬಣವು ಅದ್ವಾನಿಯವರ ಪಕ್ಷಕ್ಕೆ ಇಂದ್ರಸಭೆ ಇದ್ದಂತೆ. ದೇವೇಂದ್ರನು ಕಾಲಕ್ಕೆ ತಕ್ಕಂತೆ ಯಾವ ಕೆಲಸವನ್ನು ಯಾರಿಂದ ಮಾಡಿಸಿಕೊಳ್ಳಬೇಕೆಂದು ತಿಳಿದಿದ್ದಾನೆ. ಆದ್ದರಿಂದ ಅವನ ಕಣ್ಣು ಒಮ್ಮೆ ಈ ಸೇವಕನತ್ತ, ಇನ್ನೊಮ್ಮೆ ಆ ಸೇವಕನತ್ತ. ಅವನು ಪ್ರಭು; ಯಾವ ಸೇವಕನಿಗೆ ಯಾವಾಗ ಗೌರವ ಎಂಬುದನ್ನು ಉದ್ದೇಶಿತ ಕೆಲಸವು ತೀರ್ಮಾನಿಸುತ್ತದೆ. ''ಪ್ರಯೋಜನಾಪೇಕ್ಷಿತಯಾ ಪ್ರಭೂಣಾಂ ಪ್ರಾಯಶ್ಚಲಂ ಗೌರವಮಾಶ್ರಿತೇಷು'' ಎನ್ನುತ್ತಾನೆ ಕಾಲಿದಾಸ. ಅದರಂತೆ, ಸುದರ್ಶನ ಚಕ್ರವರ್ತಿಗಳು ಒಮ್ಮೆ ಅದ್ವಾನಿಯವರನ್ನು ನೇಮಿಸುತ್ತಾರೆ. ಇನ್ನೊಮ್ಮೆ ಮುರಳಿ ಮನೋಹರ ಜೋಶಿಯನ್ನು ನೇಮಿಸುತ್ತಾರೆ. ಕಡೆಗೆ ಬಾಳ ಠಾಕ್ರೆ ಮತ್ತು ತೋಗಡಿಯಾ ಆಯ್ಕೆಯಾಗಬಹುದು. ಅದು ಫ್ಯಾಸಿಸ್ಟ್ ದಬ್ಬಾಳಿಕೆಗೆ ಮೆಟ್ಟಿಲುಗಳ ಸಂಯೋಜನೆ. ನಾಳೆ ಒಂದು ದಿನ ಅದ್ವಾನಿ ಮತ್ತು ಸಿಂಘಾಲ್ ಪರಸ್ಪರ ತಬ್ಬಿಕೊಂಡು ಉಬ್ಬಿಹೋಗುವುದು ಅಸಂಭವವಲ್ಲ. ಭಾಜಪ ಮತ್ತು ವಿಹಿಂಪ ಒಬ್ಬರನ್ನುಳಿದು ಇನ್ನೊಬ್ಬರು ಬಾಳುವಂಥವಲ್ಲ. ಅದ್ವಾನಿ-ಸಿಂಘಾಲ್ ಹೋಗಬಹುದು; ಆದರೆ ಅವರ ದ್ವೇಷದ ಸಿದ್ಧಾಂತಕ್ಕೆ ಚ್ಯುತಿಯಿಲ್ಲ. ಆದ್ದರಿಂದ ಇಂದಿನ ಕೃತಕ ಕಲಹ ಕಂಡು ಅದ್ವಾನಿಯ ಪಟ್ಟೆ ಬದಲಾಗುತ್ತಿದೆಯೆಂದಾಗಲಿ, ಭಾಜಪ-ವಿಹಿಂಪ ವಿರಸದಿಂದ ದೂರ ಸರಿಯುತ್ತಿವೆಯೆಂದಾಗಲಿ, ಭಾಜಪ ಒಡೆದು ಹೋಳಾಗಿ ಹೋಗುತ್ತಿದೆಯೆಂದಾಗಲಿ ಭ್ರಮಿಸುವುದು ಬೇಡ. ''ಅಹೋ ರೂಪಂ, ಅಹೋ ಧ್ವನಿಃ'' ಎಂದು ಕತ್ತೆ ಮತ್ತು ಗೂಬೆ ಪರಸ್ಪರರನ್ನು ಹೊಗಳಿ ಸಂತಸಪಡುತ್ತವಂತೆ. ಭಾಜಪ ಮತ್ತು ವಿಹಿಂಪ ನಡುವಣ ಕೃತಕ ಕಲಹದ ಮುಕ್ತಾಯ ಆಗಬೇಕಾದ್ದೇ ಹೀಗೆ : ಎಂತಹ ಸಂಘಟನಾ ನಿಷ್ಠೆ ಎಂದು ಒಬ್ಬರು ಹೊಗಳಿದರೆ, ಎಂತಹ ಚತುರ ಮಾರ್ಗದರ್ಶಿ ಎಂದು ಇನ್ನೊಬ್ಬರು ಪ್ರತಿಕ್ರಿಯಿಸುತ್ತಾರೆ.

ಅದಕ್ಕೆ ಇತ್ತೀಚಿನ ನಿದರ್ಶನ ಮಂಗಳೂರಿನಲ್ಲಿ ದೊರೆತಿದೆ. ಒಂದು ಶವದ ಯಾತ್ರೆಯನ್ನು ಹತ್ತಾರು ಊರುಗಳಿಗೆ ವಿಸ್ತರಿಸಿ ದಾರಿಯುದ್ದಕ್ಕೂ ಮತೀಯ ದುಷ್ಕೃತ್ಯಗಳ ಸರಮಾಲೆ ಸೃಷ್ಟಿಸಿದ್ದು ಸರಕಾರಕ್ಕೆ ತಿಳಿದಿದೆ. ಅದಕ್ಕೆ ಕಾರಣಕರ್ತರು ಯಾರೆಂದೂ ತಿಳಿದಿದೆ. ಒಬ್ಬ ನಿವೃತ್ತ ನ್ಯಾಯಮೂರ್ತಿ ಇತ್ತೀಚೆಗೆ ಹೇಳಿದಂತೆ, ಯಾವುದಕ್ಕಾದರೂ ನ್ಯಾಯಾಂಗ ತನಿಖೆ ಆಗತ್ಯವಿರುವುದಾದರೆ ನಿಜಕ್ಕೂ ಅಗತ್ಯವಿರುವುದು ಈ ಘಟನೆಗೆ. ಘಟನೆಯ ನಂತರ ಸರ್ಕಾರ ಹೇಳುತ್ತದೆ : ಇಂತಹ ಶವ ಮೆರವಣಿಗೆಗೆ ಇನ್ನು ಮುಂದೆ ಅವಕಾಶ ನೀಡುವುದಿಲ್ಲ, ಎಂದು. ಆದರೆ ಈಗ ಆಗಿರುವ ಪಾತಕಕ್ಕೆ ಯಾರು ಹೊಣೆ ? ಅವರಿಗೇನು ಶಿಕ್ಷೆ ?

* * *

ಈ ತಿಂಗಳ ಇನ್ನೊಬ್ಬ ಪಾತಕಿ ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್. ಭಾರತ-ಪಾಕಿಸ್ತಾನ-ಇರಾನ್-ಚೀಣಾ ತೈಲ ಕೊಳವೆಯನ್ನು ಆತ ಸಹಿಸಲಾರನಂತೆ. ಏಕೆಂದರೆ, ಅದರಲ್ಲಿ ದಕ್ಕುವ ಹಣದಿಂದ ಇರಾನ್ ಭಯೋತ್ಪಾದಕತೆಯನ್ನು ಪ್ರಚೋದಿಸುವ ಸಂಭವ ಉಂಟಂತೆ. ಇರಾಕಿನ ಸಂಪತ್ತನ್ನು ಲಪಟಾಯಿಸಿದ್ದಾಯಿತು, ಇರಾನ್ ಸರದಿ ಮತ್ತೆ ಬರುವ ಮುನ್ನ ಎಲ್ಲಿ ಇರಾನ್ ಸಂಪತ್ತು ಕೈತಪ್ಪಿಹೋಗುತ್ತದೋ ಎಂಬ ಭಯ! ತನ್ನ ಭಯೋತ್ಪಾದಕತೆಗಿಂತ ಬೇರೆ ಯಾರದ್ದು ತಾನೆ ಉಗ್ರವಾಗಿರಲು ಸಾಧ್ಯ ಎಂಬುದು ಅಮೆರಿಕಾಕ್ಕೆ ತಿಳಿದಿದೆ. ಪಾಕಿಸ್ತಾನದ ರಾಜಕಾರಣವನ್ನು ನಿರ್ಧರಿಸುವ ಅಮೆರಿಕಾ ಪಟುಗಳು ತನ್ನ ಆರ್ಥಿಕ ನೀತಿಯನ್ನು ಸ್ವತಂತ್ರವಾಗಿ ರೂಪಿಸಿಕೊಳ್ಳಲು ಪಾಕಿಸ್ತಾನಕ್ಕೆ ಅವಕಾಶ ನೀಡಿಯಾರೆ ? ತನ್ನ ಸಾರ್ವಭೌಮತ್ವವನ್ನು ಪಾಕಿಸ್ತಾನವು ರಕ್ಷಿಸಿಕೊಳ್ಳುತ್ತದೆಯೇ ? ಅಥವಾ ಅಮೆರಿಕಾಕ್ಕೆ ಅಂಜಿ ತೈಲ ಕೊಳವೆಯ ಪ್ರಸ್ತಾಪವನ್ನು ಹೂತು ಹಾಕಿಬಿಡಬಹುದೆ ?

# ಭಾರತ ನಿರ್ಮಾಣ, ವ್ಯವಸಾಯದ ವಿಕಾಸ ಮತ್ತು ವಿತ್ತ ನೀತಿಗಳು

ಡಾ|| ಕೆ. ಎಸ್. ಕೃಷ್ಣಸ್ವಾಮಿ

ಸಂಯುಕ್ತ ಪ್ರಗತಿಪರ ಕೂಟದ ಸರ್ಕಾರ ತನ್ನ ಮೊದಲನೇ ವರ್ಷದ ಸಾಧನೆಗಳನ್ನು ಪರಿಶೀಲಿಸುವ ಸಂದರ್ಭದಲ್ಲಿ ಪ್ರಧಾನಿ ಡಾ|| ಮನಮೋಹನ ಸಿಂಗ್‌ರವರು 'ಭಾರತ ನಿರ್ಮಾಣ'ಕ್ಕೆ ಮಾಡಬೇಕಾದ ಕೆಲಸಗಳಿನ್ನೂ ಬಹಳವಾಗಿ ಉಳಿದಿವೆಯೆಂದು ಸ್ಪಷ್ಟಪಡಿಸಿದ್ದಾರೆ. ವಿತ್ತ ನೀತಿಯ ವಿಧಿ ವಿಧಾನಗಳನ್ನು ಮಾರ್ಪಾಟು ಮಾಡುವಾಗ ಇರಬೇಕಾದ ಗುರಿ ಜನಸಾಮಾನ್ಯರಿಗೆ ಅದರಿಂದಾಗುವ ಪ್ರಯೋಜನವೇ ಹೊರತು ಸಂಸ್ಥೆಗಳ ಲಾಭ, ರಾಜಕೀಯ ಪಕ್ಷಗಳ ಅನುಕೂಲ ಅಥವಾ ನೌಕರರ ಹಿತರಕ್ಷಣೆಯಲ್ಲ, ಭಾರತದ ಪರಿಸ್ಥಿತಿಯಲ್ಲಿ ಜನತೆಯ ಹೆಚ್ಚು ಭಾಗಕ್ಕೆ ಅನುಕೂಲವಾಗಬೇಕಾದರೆ ಕೃಷಿ ಮತ್ತು ಗ್ರಾಮೀಣ ವಲಯಗಳು ಅಭಿವೃದ್ಧಿ ಹೊಂದಬೇಕು.

ಸಂಯುಕ್ತ ಪ್ರಗತಿಪರ ಕೂಟದ ಸರ್ಕಾರ ತನ್ನ ಮೊದಲನೇ ವರ್ಷದ ಸಾಧನೆಗಳನ್ನು ಪರಿಶೀಲಿಸುವ ಸಂದರ್ಭದಲ್ಲಿ ಪ್ರಧಾನಿ ಡಾ|| ಮನಮೋಹನ ಸಿಂಗ್‌ರವರು 'ಭಾರತ ನಿರ್ಮಾಣ'ಕ್ಕೆ ಮಾಡಬೇಕಾದ ಕೆಲಸಗಳಿನ್ನೂ ಬಹಳವಾಗಿ ಉಳಿದಿವೆಯೆಂದು ಸ್ಪಷ್ಟಪಡಿಸಿದ್ದಾರೆ. ಇವುಗಳ ಪೈಕಿ ಪ್ರಮುಖವಾಗಿ ಹಮ್ಮಿಕೊಳ್ಳಬೇಕಾಗಿರುವುದು ಕೃಷಿ ವಲಯದ ವಿಕಾಸಕ್ಕೆ ಸಂಪನ್ಮೂಲಗಳನ್ನು ದೇಶಾದ್ಯಂತ ಒದಗಿಸುವುದು. ಬಜೆಟ್ ಮುಖಾಂತರ ಸರ್ಕಾರಗಳು ರೈತವರ್ಗಕ್ಕೆ ನೀಡುವ ಧನ ಸಹಾಯವನ್ನು ಮಿತಿಯಿಲ್ಲದೆ ಹೆಚ್ಚಿಸಲಾಗುವುದಿಲ್ಲ. ಅದರಲ್ಲೂ ಸಾಲದ ರೀತಿಯಲ್ಲಿ ಕೊಡಲು ಸರ್ಕಾರಗಳಿಗೆ ಸುಲಭವಲ್ಲ. ಈ ಏರ್ಪಾಟು ವ್ಯವಸ್ಥಿತ ಹಣಕಾಸು ಸಂಸ್ಥೆಗಳಿಂದಾಗಬೇಕು – ಮುಖ್ಯವಾಗಿ ವಾಣಿಜ್ಯ ಮತ್ತು ಸಹಕಾರ ಬ್ಯಾಂಕುಗಳಿಂದ. ೨೦೦೫-೨೦೦೬ರ ಬಜೆಟ್ಟನ್ನು ಮಂಡಿಸುವಾಗ ಕೇಂದ್ರ ಮಂತ್ರಿಗಳು ಬರುವ ವರ್ಷದಲ್ಲಿ ಹಣಕಾಸು ಸಂಸ್ಥೆಗಳಿಂದ ಕೃಷಿವಲಯಕ್ಕೆ ಹೋದ ವರ್ಷಕ್ಕಿಂತ ಶೇಕಡ ೩೦ರಷ್ಟು ಹೆಚ್ಚು ಸಾಲ ನೀಡುವ ಏರ್ಪಾಟು ಮಾಡುವ ಭರವಸೆ ಕೊಟ್ಟಿದ್ದಾರೆ. ಇದಕ್ಕೆ ಅನುಗುಣವಾಗಿ ಏಪ್ರಿಲ್ ತಿಂಗಳ ಕೊನೆಯಲ್ಲಿ ನಡೆದ ಬ್ಯಾಂಕ್ ಅಧ್ಯಕ್ಷರ ಸಭೆಯಲ್ಲಿ ರಿಸರ್ವ್ ಬ್ಯಾಂಕಿನ ಗವರ್ನರ್ ಡಾ|| ವೇಣುಗೋಪಾಲ ರೆಡ್ಡಿಯವರು ಪ್ರಸಕ್ತ ವರ್ಷದ ವಿತ್ತ ಮತ್ತು ಸಾಲನೀತಿಗಳ ಮುಖ್ಯ ಉದ್ದೇಶ ಮತ್ತು ಸಾಧನಗಳನ್ನು ವಿವರಿಸಿದರು.[೧]

ಎಲ್ಲಾ ದೇಶಗಳಂತೆ ಭಾರತದಲ್ಲೂ ವಿತ್ತ ಮತ್ತು ಸಾಲ ನೀತಿಗಳ ಮುಖ್ಯ ಉದ್ದೇಶಗಳು ಎರಡು. ಮೊದಲು ಪ್ರಗತಿಗೆ ಅವಶ್ಯವಾದ ಯೋಜನೆಗಳಲ್ಲಿ ಹೂಡಿಕೆ ಮತ್ತು ಇತರ ಉಪಯೋಗಗಳಿಗೆ ಬೇಕಾದ ಧನಸಹಾಯ ಒದಗಿಸುವುದು. ಮತ್ತು ಈ ಪ್ರಕ್ರಿಯೆಯಲ್ಲಿ ಹಣದ ಚಲಾವಣೆ ವಿಪರೀತವಾಗಿ ಅದರಿಂದ ಬೆಲೆಗಳು ಏರದಂತೆ ನೋಡಿಕೊಳ್ಳುವುದು. ಇವೆರಡನ್ನು ತೃಪ್ತಿಕರವಾಗಿ ಸಾಧಿಸಲು ಬೇಕಾಗುವ ಸಾಧನೆಗಳೆಲ್ಲಾ ಡಾ|| ರೆಡ್ಡಿಯವರ ಸ್ವಾಧೀನದಲ್ಲಿಲ್ಲ. ಉದಾಹರಣೆಗೆ, ರಾಷ್ಟ್ರ ಮತ್ತು ರಾಜ್ಯ ಸರ್ಕಾರಗಳ ಬಜೆಟ್ ಕೊರತೆಗಳಲ್ಲದೆ (budget deficits) ವಿದೇಶೀ ವಿನಿಮಯದ ಶೇಖರಣೆಯಿಂದ ದೇಶದಲ್ಲಿನ ಹಣದುಬ್ಬರವಾಗುವುದು ಅನಿವಾರ್ಯ. ಅಂತೆಯೇ ಮಾರುಕಟ್ಟೆಗೆ ದೇಶೀಯ ಉತ್ಪನ್ನ ಅಥವಾ ವಿದೇಶೀ ವ್ಯಾಪಾರಗಳಿಂದ ಬರುವ ಸರಬರಾಜುಗಳ ಪ್ರಮಾಣಗಳು ಯಾವಾಗಲೂ ಅನಿಶ್ಚಿತ. ಈ ಒತ್ತಡಗಳನ್ನು ಗಮನಿಸಿ ದೇಶದ ಸಮಗ್ರ ಉತ್ಪನ್ನ ತ್ವರಿತವಾಗಿ ಏರಿಸಲು ಬೇಕಾಗುವ ಧನಸಹಾಯವನ್ನು ಕಾಲಕಾಲಕ್ಕೆ ಏರ್ಪಡಿಸುವುದು ಸುಲಭವೇನಲ್ಲ.

ಈವರೆಗಿನ ಸುಧಾರಣೆಗಳಲ್ಲಿ ಖಾಸಗೀಕ್ಷೇತ್ರದ ವಾಣಿಜ್ಯ ಮತ್ತು ಕೈಗಾರಿಕಾ ಕಂಪನಿಗಳಿಗೆ ಆದ್ಯತೆ ಸಿಕ್ಕಿದೆಯೇ ಹೊರತು ಕೃಷಿ ಮತ್ತು ಗ್ರಾಮೀಣ ಪ್ರದೇಶದ ಸಣ್ಣ ಕೈಗಾರಿಕೆಗಳಿಗಲ್ಲ. ಇಂತಹ ಕಂಪನಿಗಳಿಗೆ ಧನಸಹಾಯ ಮಾಡಲು ಬ್ಯಾಂಕುಗಳು ಸದಾ ಸಿದ್ಧವಿರುತ್ತವೆ. ದೊಡ್ಡ ಕಂಪನಿಗಳಿಗೆ ಕೊಟ್ಟ ಸಾಲಗಳಲ್ಲಿ ಬಹುಭಾಗ ಹಾಗೆಯೇ ಮುಂದುವರೆಯುವುದರಿಂದ ಲಾಭದಾಯಕವಾಗಿ ಕಂಡರೂ ಕೆಲವು ಪ್ರಮಾಣದಲ್ಲಿ ಅವು ಬ್ಯಾಂಕುಗಳ ಅನುತ್ಪಾದಕ ಆಸ್ತಿ (non-productive asset)ಯಾಗಿ ಉಳಿಯುತ್ತವೆ. ಠೇವಣಿಗಳ ರೂಪದಲ್ಲಿ ಬ್ಯಾಂಕುಗಳು ಸಂಗ್ರಹಿಸುವ ನಿಧಿಯು ಹೀಗೆ ಬಳಕೆಯಾಗುತ್ತಿರುವುದರಿಂದ ವಿತ್ತ ಮಂತ್ರಿಗಳು ಹೇಳಿರುವಂತೆ ಗ್ರಾಮೀಣ ಕಸುಬುಗಳಿಗೆ ಹಿಂದಿಗಿಂತ ಶೇಕಡ ೩೦ರಷ್ಟು ಹೆಚ್ಚು ಸಾಲವನ್ನು ಬ್ಯಾಂಕುಗಳು ಒದಗಿಸಬೇಕಾದರೆ ಅದಕ್ಕೆ ಪ್ರತ್ಯೇಕ ವಿಧಾನಗಳನ್ನು ಜಾರಿಗೆ ತರಬೇಕು. ಈ ನಿಟ್ಟಿನಲ್ಲಿ ಡಾ|| ರೆಡ್ಡಿಯವರು ಅನುಸರಿಸಲು ಯೋಚಿಸಿರುವ ವಿಧಾನಗಳೇನು, ಅವುಗಳಿಂದ ನಿರೀಕ್ಷಿಸಿದ ಪರಿಣಾಮ ಲಭಿಸುವುದೇ ಮುಂತಾದ ಪ್ರಶ್ನೆಗಳನ್ನು ಗಮನಿಸೋಣ.

ಈ ವರ್ಷದ ವಿತ್ತನೀತಿಯನ್ನು ರೂಪಿಸುವಾಗ ಡಾ|| ರೆಡ್ಡಿಯವರು ಇದೇ ಸಮಯ ಹೋದವರ್ಷ ಇದ್ದ ಪರಿಸ್ಥಿತಿಯನ್ನು ಜ್ಞಾಪಿಸಿದ್ದಾರೆ. ಕಳೆದ ವರ್ಷ ಏಪ್ರಿಲ್‌ನಿಂದ ಆಗಸ್ಟ್‌ವರೆಗಿನ ಅರ್ಧವರ್ಷದಲ್ಲಿ ಸಗಟು ಬೆಲೆಗಳ ಸೂಚ್ಯಾಂಕ (wholesale price index - WPI) ಶೇಕಡ ೮ಕ್ಕೆ ಮೀರಿ ಮುಂದೆ ಹೋಗಿತ್ತು. ಆಗ ಡಾ|| ರೆಡ್ಡಿಯವರು ಬ್ಯಾಂಕುಗಳು ರಿಸರ್ವ್ ಬ್ಯಾಂಕ್‌ನಲ್ಲಿಡಬೇಕಾದ ದೀರ್ಘಾವಧಿ ಠೇವಣಿಯನ್ನು (cash reserve ratio) ಜಾಸ್ತಿ ಮಾಡುವುದಲ್ಲದೆ ಅವರ ತಾತ್ಕಾಲಿಕ ಠೇವಣಿಗಳಿಗೆ ಕೊಡುವ ಬಡ್ಡಿಯನ್ನು (reverse repo rate) ಏರಿಸಿ ನೀಡುವ ಸಾಲವನ್ನು ಹಿಡಿತದಲ್ಲಿಟ್ಟುಕೊಳ್ಳಲು ಸೂಚಿಸಿದ್ದರು. ಈಗಲೂ ಡಾ|| ರೆಡ್ಡಿಯವರು ಅದೇ ರೀತಿ ಎಚ್ಚರಿಕೆ ಕೊಟ್ಟಿದ್ದಾರೆ. ತಾತ್ಕಾಲಿಕ ಠೇವಣಿ ದರವನ್ನು ಪುನಃ ಸಹಸ್ರಾಂಶ ೨೫ರಷ್ಟು (25 basis points) ಹೆಚ್ಚಿಸುವುದಲ್ಲದೆ ಈ ಸೌಲಭ್ಯವನ್ನು ಇತರ ಖಾಸಗೀ ಕಂಪೆನಿಗಳು ಮತ್ತು ನಾಗರಿಕ ಸಹಕಾರಿ ಬ್ಯಾಂಕುಗಳಿಗೆ ವಿಸ್ತರಿಸಿದ್ದಾರೆ. ಇದರ ಉದ್ದೇಶ ಮುಂಗಾರು ಬೆಳೆ ಮಾರುಕಟ್ಟೆಗೆ ಬರುವ ಮೊದಲು ಹಣದ ಚಲಾವಣೆಯ ಪ್ರಮಾಣವನ್ನು ನಿಯಂತ್ರಿಸುವುದು.

ಜೊತೆಗೆ ವಿದೇಶೀ ವಿನಿಯಮದ ಮಾರುಕಟ್ಟೆಯಲ್ಲಿ ರಿಸರ್ವ್ ಬ್ಯಾಂಕಿನ ಪಾತ್ರವನ್ನು ಸ್ವಲ್ಪ ಬದಲಾಯಿಸಿದ್ದಾರೆ. ರಫ್ತುದಾರರ ಅನುಕೂಲಕ್ಕೆ ಇದುವರೆಗೂ ಅಂತರ ರಾಷ್ಟ್ರೀಯ ಮಾರುಕಟ್ಟೆಯಲ್ಲಿ ರೂಪಾಯಿಯ ಮೌಲ್ಯ ಹೆಚ್ಚಾಗದಂತೆ ಸಂದರ್ಭಾನುಸಾರ ಡಾಲರ್‌ಗಳನ್ನು ಕೊಳ್ಳುತ್ತಿದ್ದುದರಿಂದ ದೇಶದೊಳಗೆ ರೂಪಾಯಿಯ ಚಲಾವಣೆ ಏರುತ್ತಿತ್ತು. ಈ ಪದ್ಧತಿಯನ್ನು ಬದಲಾಯಿಸುವುದಲ್ಲದೆ ಆಮದುದಾರರಿಗೆ ವಿದೇಶಿ ವಿನಿಮಯ ಉಪಯೋಗಿಸಲು ಅನುವು ಮಾಡಿದ್ದಾರೆ. ಅಂದರೆ ಹಣದುಬ್ಬರಕ್ಕೆ ಅನುಗುಣವಾಗಿ ಆಮದು ಮಾಡುವ ಸರಕುಗಳ ಸರಬರಾಜನ್ನು ಹೆಚ್ಚಿಸಲು ವಿದೇಶೀ

ವಿನಿಮಯದ ಕೊರತೆಯಾಗದಂತೆ ನೋಡಿಕೊಳ್ಳುವ ಭರವಸೆ ಕೊಟ್ಟಿದ್ದಾರೆ.

ಇವೆಲ್ಲಾ ಹಣದುಬ್ಬರದಿಂದ ಬೆಲೆಗಳು ಏರದಂತೆ ತಡೆಯಲು ರಿಸರ್ವ್ ಬ್ಯಾಂಕ್ ಅನುಸರಿಸಿರುವ ಕ್ರಮಗಳಷ್ಟೇ ಹೊರತು ರಾಷ್ಟ್ರೀಯ ವಿಕಾಸಕ್ಕೆ ತಕ್ಕುದಾದ ಸಕಾರಾತ್ಮಕ ಸಾಧನಗಳಲ್ಲ. ಅದರಲ್ಲೂ 'ಭಾರತ ನಿರ್ಮಾಣ'ದ ಬಹುಮುಖ್ಯ ಭಾಗವಾದ ಗ್ರಾಮೀಣಾಭಿವೃದ್ಧಿಗೆ ಒದಗಿಸುವ ಸೌಕರ್ಯಗಳೇನು ? ಕೃಷಿ ಕ್ಷೇತ್ರ ಮತ್ತು ಇತರ ಮೂಲಭೂತ ಸೌಕರ್ಯಗಳಿಗೆ ಸರ್ಕಾರ ತನ್ನ ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿ (common minimum programme) ಸೂಚಿಸಿರುವ ಆದ್ಯತೆಗೆ ತಕ್ಕಂತೆ ಹಣಕಾಸು ನೀಡಲು ವಾಣಿಜ್ಯ ಬ್ಯಾಂಕುಗಳು ಮತ್ತು ಇತರ ಹಣಕಾಸು ಸಂಸ್ಥೆಗಳಿಗೆ ಕೊಟ್ಟಿರುವ ಆದೇಶ ಮತ್ತು ಬೆಂಬಲಗಳೇನು? ಕೃಷಿಕರ ಹೂಡಿಕೆ ಮತ್ತು ಉತ್ಪಾದನೆಗಳಿಗೆ ಬೇಕಾಗುವ ಸಾಲಗಳನ್ನು ಅಡೆತಡೆಗಳಿಲ್ಲದೆ ಮತ್ತು ಸಮಯಕ್ಕೆ ಸರಿಯಾಗಿ ಒದಗಿಸಿ ಒಟ್ಟು ಸಾಲದಲ್ಲಿ ಅವುಗಳ ಪ್ರಮಾಣವನ್ನು ಹೆಚ್ಚಿಸಲು ಒತ್ತಿ ಹೇಳಿರುವುದಲ್ಲದೆ ಈ ಕಾರ್ಯದಲ್ಲಿ ಬ್ಯಾಂಕುಗಳು ಸ್ವ-ಸಹಾಯ ಗುಂಪುಗಳು ಮತ್ತು ಇತರ ನಾಗರಿಕ ಸೇವಾ ಸಂಸ್ಥೆಗಳನ್ನು ತಮ್ಮ ಏಜೆಂಟುಗಳಾಗಿ ಉಪಯೋಗಿಸಿಕೊಳ್ಳ ಬಹುದೆಂದು ತಿಳಿಸಿದ್ದಾರೆ. ರೈತರಿಗೆ ಕೊಡುವ ಪ್ರತಿ ಸಾಲದ ಪರಿಮಿತಿಯನ್ನು ರೂ. ೫ ಲಕ್ಷದಿಂದ ರೂ. ೧೦ ಲಕ್ಷಕ್ಕೆ ಏರಿಸಿರುವರು. ಬೆಂಬಲವಾಗಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ (National Bank for Agriculture and Rural Development NABARD) ಮತ್ತು ಸಣ್ಣ ಕೈಗಾರಿಕಾ ಅಭಿವೃದ್ಧಿ ಬ್ಯಾಂಕ್ (Small Industries Development Bank - SIDBI) ಗಳಿಗೆ ರಿಸರ್ವ್ ಬ್ಯಾಂಕಿನಿಂದ ದೊರಕುವ ಹಣದ ಜೊತೆಗೆ ವಿದೇಶೀ ಸಾಲ ಪಡೆಯಲು ಹೆಚ್ಚು ಅವಕಾಶ ಕಲ್ಪಿಸಿದ್ದಾರೆ. ಈ ಎಲ್ಲಾ ಸಂಸ್ಥೆಗಳು ಗ್ರಾಮೀಣ ಗಿರಾಕಿಗಳಿಗೆ ಸಮರ್ಥವಾಗಿ ಮತ್ತು ತುರ್ತಾಗಿ ಸಹಾಯ ಮಾಡಲು ಅವುಗಳ ಕಾರ್ಯವೈಖರಿಯಲ್ಲಾಗಬೇಕಾದ ಬದಲಾವಣೆಗಳು ವಿಮರ್ಶೆಯಲ್ಲಿವೆ. ಬ್ಯಾಂಕುಗಳ ಬಲಾಬಲಗಳು, ಸ್ಥಿರತೆ, ಆದ್ಯ ಉದ್ದೇಶಗಳಿಗೆ ಕೊಡುತ್ತಿರುವ ಸಾಲದ ಪ್ರಮಾಣ, ಸಾಮಾನ್ಯ ಪ್ರಜೆಗಳಿಗೆ ನೀಡುತ್ತಿರುವ ಸೌಕರ್ಯಗಳು ಇವನ್ನು ಇನ್ನು ಮುಂದೆ ಪ್ರತಿ ಮೂರು ತಿಂಗಳಿಗೊಮ್ಮೆ ತಾವು ಕೂಲಂಕಷವಾಗಿ ಪರೀಕ್ಷಿಸಲು ಡಾ|| ರೆಡ್ಡಿಯವರು ನಿರ್ಧರಿಸಿದ್ದಾರೆ. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ವ್ಯವಹಾರಗಳನ್ನೂ ಈ ವಿಮರ್ಶೆಯಲ್ಲಿ ಸೇರಿಸುವ ಏರ್ಪಾಟಿದೆ.

ಹೋದ ಶತಮಾನದ ೭೦-೮೦ರ ದಶಕಗಳಲ್ಲಿ ಗ್ರಾಮೀಣಾಭಿವೃದ್ಧಿಯಲ್ಲಿ ಹಣಕಾಸು ಸಂಸ್ಥೆಗಳು ಸಕ್ರಿಯ ಪಾತ್ರ ವಹಿಸಲು ಅನುಕೂಲವಾಗುವಂತೆ ಅನೇಕ ಸುಧಾರಣೆಗಳನ್ನು ರಿಸರ್ವ್ ಬ್ಯಾಂಕ್ ಜಾರಿಗೆ ತಂದಿತ್ತು. ಪ್ರಮುಖವಾಗಿ ಗ್ರಾಮಪ್ರದೇಶಗಳಲ್ಲಿ ಹೆಚ್ಚು ಶಾಖೆಗಳನ್ನು ತೆರೆಯುವುದು, ಕೊಡುವ ಸಾಲಗಳಲ್ಲಿ ಶೇಕಡ ೪೦ರಷ್ಟು ಕೃಷಿ ಮತ್ತು ಇತರ ಆದ್ಯ ಉದ್ದೇಶಗಳಿಗೆ ನೀಡುವುದು, ಅದರಲ್ಲಿ ಸಣ್ಣ ರೈತರಿಗೆ ಕೊಡಬೇಕಾದ ಭಾಗ, ಸರ್ಕಾರೀ ಬ್ಯಾಂಕುಗಳು ಈ ನಿಟ್ಟಿನಲ್ಲಿ ವಹಿಸಬೇಕಾದ ಮುಂದಾಳತ್ವ, ಈ ಸಂಸ್ಥೆಗಳು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಸ್ಥಾಪಿಸುವ ಜವಾಬ್ದಾರಿ ಮುಂತಾದುವನ್ನು ರಿಸರ್ವ್ ಬ್ಯಾಂಕು ನಿಗದಿಪಡಿಸಿತ್ತು. ಅಲ್ಲದೆ ಚರ್ಚಾಸ್ಪದ 'ಸಾಲಮೇಳ'ಗಳನ್ನು ಏರ್ಪಡಿಸಿ ಕೇಂದ್ರ ಸರ್ಕಾರ ಬ್ಯಾಂಕುಗಳ ಮೇಲೆ ಒತ್ತಡ ಹೇರಿತ್ತು. ಈ ಕಾರ್ಯಕ್ರಮಗಳಲ್ಲಿ ಅನೇಕ ನ್ಯೂನತೆಗಳಿದ್ದರೂ ಒಟ್ಟಿನಲ್ಲಿ ಕೃಷಿಕರಿಗೆ ವ್ಯವಸ್ಥಿತ ಸಂಸ್ಥೆಗಳಿಂದ ದೊರೆಯುತ್ತಿದ್ದ ಸಾಲದ ಮೊತ್ತ ಹೆಚ್ಚಾಗಿತ್ತು. ಆದರೆ ರಾಜಕೀಯ ವ್ಯಕ್ತಿಗಳ ಕೈವಾಡ ಮತ್ತು ಅಧಿಕಾರವರ್ಗಗಳ ಧೋರಣೆಯಿಂದ ರೈತರಿಗೆ ದೊರೆತ ಫಲ ಸಾಲದ ಏರಿಕೆಗೆ ಸಮವಾಗಿರಲಿಲ್ಲ. ಈ ಪರಿಸ್ಥಿತಿಯಲ್ಲಿ ಲೇವಾದೇವಿ ಗಾರರಿಂದ ಸಾಲ ಪಡೆಯುವುದನ್ನು ನಿಲ್ಲಿಸಿ ಬ್ಯಾಂಕುಗಳೊಡನೆ ವ್ಯವಹರಿಸಲು ಬಹಳ ಮಂದಿ ರೈತರು ಮುಂದೆ ಬರಲಿಲ್ಲ. ಜೊತೆಗೆ ಅಭಿವೃದ್ಧಿ ಕಾರ್ಯಗಳಲ್ಲಿ ಬ್ಯಾಂಕಿನ ಅಧಿಕಾರಿಗಳಿಗಿದ್ದ ಅನುಭವ ಕಡಿಮೆಯಾಗಿದ್ದು ಅವರಿಗೆ ಕೊಡಬೇಕಾಗಿದ್ದ ಸಲಹೆ ಸೌಕರ್ಯಗಳನ್ನು ಎಲ್ಲಾ ರಾಜ್ಯ ಸರ್ಕಾರಗಳೂ ಸೂಕ್ತ ರೀತಿ ಒದಗಿಸಲಿಲ್ಲ.

ಒಟ್ಟಿನಲ್ಲಿ ಕೃಷಿ ಕ್ಷೇತ್ರಕ್ಕೆ ನಿರೀಕ್ಷಿಸಿದಷ್ಟು ಫಲ ಈ ಸುಧಾರಣೆಗಳಿಂದ ಆಗದಿದ್ದು ದರಿಂದ ೧೯೯೦ರ ದಶಕದಲ್ಲಿ ಅವನ್ನು ಶ್ರೀ ಎಂ. ನರಸಿಂಹಂ ನೇತೃತ್ವದ ಸಮಿತಿಗಳು ಸೂಕ್ಷ್ಮವಾಗಿ ಪರಿಶೀಲಿಸಿದವು.(೨) ಆದರೆ ಈ ಪರಿವೀಕ್ಷಣೆ ನಡೆದುದು ೧೯೯೧ರ ಆರ್ಥಿಕ ಸುಧಾರಣೆಗಳ ಅಂಗವಾಗಿದ್ದ ಕಾರಣ ಸಮಿತಿಗಳ ದೃಷ್ಟಿಕೋನವೇ ಬೇರೆ ಯಾಗಿತ್ತು. ಆರ್ಥಿಕ ವಲಯದಲ್ಲಿ ಖಾಸಗೀಕರಣ ಮತ್ತು ಜಾಗತೀಕರಣಗಳು ಮುಖ್ಯ ಉದ್ದೇಶಗಳಾಗಿದ್ದರಿಂದ ನರಸಿಂಹಂ ಸಮಿತಿಗಳು ಹಿಂದಿನ ದಶಕದ ಸುಧಾರಣೆ ಗಳನ್ನು ಬೆಂಬಲಿಸಲಿಲ್ಲ. ಬದಲಾಗಿ ಗ್ರಾಮೀಣ ಶಾಖೆಗಳಿಗೆ ಒತ್ತು ಕೊಡುವುದನ್ನು ಬಿಟ್ಟು ಅವುಗಳಲ್ಲಿ ಲಾಭದಾಯಕವಲ್ಲದವನ್ನು ಮುಚ್ಚಲು ಸಲಹೆ ಮಾಡಿದವು. ಅಲ್ಲದೆ ಆದ್ಯ ಕ್ಷೇತ್ರಗಳಿಗೆ ಕೊಡಬೇಕಾದ ಸಾಲದ ಪ್ರಮಾಣವನ್ನು ಕಡಿಮೆ ಮಾಡಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಈ ಜವಾಬ್ದಾರಿಯನ್ನು ಹೆಚ್ಚಾಗಿ ವಹಿಸಬೇಕೆಂದು ಸೂಚಿಸಿದವು. ಬ್ಯಾಂಕುಗಳ ಸಾಲ ನೀತಿಯ ಫಲವಾಗಿ ರಫ್ತು ನಿರತ ಉದ್ಯಮ, ಗ್ರಾಹಕರು ಬೇಡುವ ದೀರ್ಘಬಾಳಿಕೆ ವಸ್ತುಗಳ ತಯಾರಿಕೆ, ವ್ಯಾಪಾರ, ಮಾಹಿತಿ ಮತ್ತು ಜೈವಿಕ ತಂತ್ರಜ್ಞಾನ, ಭೋಗ ಸಾಮಗ್ರಿಗಳ ಆಮದು ಇತ್ಯಾದಿಗಳಿಗೆ ದೊರೆತ ಹಣದ ಬೆಂಬಲ ಕೃಷಿ ಮತ್ತು ದೈನಂದಿನ ಬಳಕೆಯ ಪದಾರ್ಥಗಳ ಉತ್ಪನ್ನಕ್ಕೆ ದೊರೆಯಲಿಲ್ಲ. ದೇಶದ ಸಮಗ್ರ ಉತ್ಪನ್ನದ ಏರಿಕೆಯ ಪ್ರಮಾಣವನ್ನು ಹೆಚ್ಚಿಸುವುದರಲ್ಲಿ ಆರ್ಥಿಕ ನೀತಿಗಳು ಕೇಂದ್ರೀಕೃತವಾಗಿ ಅದರ ಪರಿಣಾಮದಿಂದ ಕಷ್ಟಕ್ಕೊಳಗಾದವರು ಕೃಷಿ ಮತ್ತು ಗ್ರಾಮೋದ್ಯೋಗಗಳಲ್ಲಿ ನಿರತರಾಗಿದ್ದ ಜನತೆಯ ಬಹುಸಂಖ್ಯಾತರು! ತಮಗಾದ ಬವಣೆಗೆ ಪ್ರತೀಕಾರವನ್ನು ಅವರು ಕಳೆದ ಚುನಾವಣೆಯಲ್ಲಿ ಪ್ರಶಾಂತೀತವಾಗಿ ಪ್ರದರ್ಶಿಸಿದ್ದಾರೆ.

ಈಗಿರುವ ಕೇಂದ್ರ ಸರ್ಕಾರ ಈ ಕೊರತೆಯನ್ನು ನಿವಾರಿಸುವ ಯತ್ನದಲ್ಲಿದೆ. ತಮ್ಮ ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿ ಕೃಷಿ ಮತ್ತು ಮೂಲಭೂತ ಸೌಕರ್ಯಗಳ ಬೆಳವಣಿಗೆಗೆ ಆದ್ಯತೆ ಕೊಡುವ ಆಶ್ವಾಸನೆ ಕೊಟ್ಟಂತೆ ಸಾಕಷ್ಟು ಶ್ರಮಿಸುತ್ತಿಲ್ಲವೆಂದು ತಜ್ಞರಲ್ಲದೆ ಸಾಮಾನ್ಯ ಜನರ ಅಭಿಪ್ರಾಯ. ಇದು ಒಕ್ಕೂಟ ಸರ್ಕಾರವಾದುದರಿಂದ ಮೊದಲ ವರ್ಷದಲ್ಲಾಗಿರುವ ಪ್ರಗತಿ ನಿಧಾನವಾಗಿರಬಹುದು. ಆದರೆ ಮುಂಬರುವ ವರ್ಷಗಳಲ್ಲಿ ಇದನ್ನು ತ್ವರಿತಗೊಳಿಸಬೇಕಾದರೆ – ಅದರಲ್ಲೂ ಗ್ರಾಮೀಣಾಭಿವೃದ್ಧಿ ಯಾಗಬೇಕಾದರೆ – ಕನಿಷ್ಠವಾಗಿ ಕೆಲವು ಸುಧಾರಣೆಗಳು ಅವಶ್ಯಕ. ಗ್ರಾಮೀಣ ಕ್ಷೇತ್ರ ಗಳಲ್ಲಿ ಧನಸಹಾಯ ಹೆಚ್ಚು ಹೆಚ್ಚಾಗಿ ಒದಗಿಸಲು ಬ್ಯಾಂಕುಗಳು ತಮ್ಮ ಶಾಖೆಗಳನ್ನು ಆ ಪ್ರದೇಶದಲ್ಲಿ ವಿಸ್ತರಿಸಬೇಕು. ಈ ಕಾರ್ಯ ಲಾಭದ ಆಧಾರದ ಮೇಲೆ ನಡೆಸದೆ ಜನತೆಯ ಅನುಕೂಲವನ್ನು ಅವಲಂಬಿಸಿರಬೇಕು. ಇಂತಹ ಶಾಖೆಗಳಿಗೂ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿಗೂ NABARD ಮತ್ತು SIDBIಗಳಿಂದಲ್ಲದೆ ಬ್ಯಾಂಕುಗಳ ಮುಖ್ಯ ಕಚೇರಿಗಳಿಂದ ಧನ ಮತ್ತು ತಾಂತ್ರಿಕ ಬೆಂಬಲಗಳು ಹೆಚ್ಚಬೇಕಾಗಿದೆ. ಎಲ್ಲಾ ಹಣಸಂಸ್ಥೆಗಳೂ ತಮ್ಮ ವಿಧಿವಿಧಾನಗಳನ್ನು ಸರಳೀಕರಿಸಿ ಸಣ್ಣ ಸಾಲ ಬೇಡುವವರಿಗೆ ಸಹಾಯ ಮಾಡುವ ಮನೋಭಾವ ಬೆಳೆಸಿಕೊಳ್ಳುವುದು ಅವಶ್ಯಕ. ನೀಡಬೇಕಾದ ಆಧಾರ ಪತ್ರಗಳು, ಜಾಮೀನು ಮುಂತಾದ ನಿಯಮಗಳನ್ನು ಬದಲಾಯಿಸಿ, ವ್ಯಕ್ತಿ ಮಾತ್ರವಲ್ಲದೆ ಸಾಮೂಹಿಕ ಜವಾಬ್ದಾರಿಯ ಮೇಲೆ ಸಾಲ ಕೊಡಲು ತಯಾರಿರಬೇಕು. ಈ ಸಂಬಂಧ ಸ್ವಾಮ್ಯ ಅಥವಾ ಕ್ರಯಪತ್ರಗಳನ್ನು ಪಡೆಯಲು ಮತ್ತು ನೋಂದಣಿ ಮಾಡಿಸಲು ಇರುವ ಅನುಕೂಲಗಳು, ಕೊಡಬೇಕಾದ ಶುಲ್ಕ ಮುಂತಾದುವನ್ನು ಸರಳೀಕರಿಸುವುದರಲ್ಲಿ ರಾಜ್ಯ ಸರ್ಕಾರಗಳ ಪಾತ್ರ ಮುಖ್ಯ. ರೈತರು ಮತ್ತು ಸಣ್ಣ ಉದ್ಯಮಿಗಳಿಗೆ ತಾಂತ್ರಿಕ ಮತ್ತು ಮಾರಾಟದ ಅನುಕೂಲಗಳನ್ನು ಕಲ್ಪಿಸುವ ಜವಾಬ್ದಾರಿ ಸರ್ಕಾರ ಮತ್ತು ಬ್ಯಾಂಕುಗಳಿಬ್ಬರಿಗೂ ಇದೆ. ಜೊತೆಗೆ ಫಸಲು ಮತ್ತು ಸಾಲಗಳ ವಿಮಾ ಸೌಕರ್ಯವನ್ನು ಕನಿಷ್ಠ ಖರ್ಚಿನಲ್ಲಿ ಒದಗಿಸುವ ಭಾರ ಅವರದು. ಈ ಎಲ್ಲ ದಿಸೆಗಳಲ್ಲಿ ಖಚಿತವಾಗಿ ಮುಂದುವರೆಯಬೇಕಾದರೆ ರಿಸರ್ವ್ ಬ್ಯಾಂಕ್ ಮತ್ತು ಪ್ರಮುಖ ಹಣಕಾಸು ಸಂಸ್ಥೆಗಳಲ್ಲದೆ ರಾಷ್ಟ್ರ ಮತ್ತು ರಾಜ್ಯ ಸರ್ಕಾರಗಳ ಕಾರ್ಯವೈಖರಿ ಕ್ರಾಂತಿಕಾರಕವಾಗಿ ಬದಲಾಯಿಸಬೇಕು.

ವಿತ್ತ ನೀತಿಯ ವಿಧಿ ವಿಧಾನಗಳನ್ನು ಮಾರ್ಪಾಟು ಮಾಡುವಾಗ ಇರಬೇಕಾದ ಗುರಿ ಜನಸಾಮಾನ್ಯರಿಗೆ ಅದರಿಂದಾಗುವ ಪ್ರಯೋಜನವೇ ಹೊರತು ಸಂಸ್ಥೆಗಳ ಲಾಭ, ರಾಜಕೀಯ ಪಕ್ಷಗಳ ಅನುಕೂಲ ಅಥವಾ ನೌಕರರ ಹಿತರಕ್ಷಣೆಯಲ್ಲ. ಭಾರತದ ಪರಿಸ್ಥಿತಿಯಲ್ಲಿ ಜನತೆಯ ಹೆಚ್ಚು ಭಾಗಕ್ಕೆ ಅನುಕೂಲವಾಗಬೇಕಾದರೆ ಕೃಷಿ ಮತ್ತು ಗ್ರಾಮೀಣ ವಲಯಗಳು ಅಭಿವೃದ್ಧಿ ಹೊಂದಬೇಕು. ಬ್ಯಾಂಕಿಂಗ್ ಕ್ಷೇತ್ರದ ಸುಧಾರಣೆಗಳು ಅನೇಕ ರೀತಿಯಲ್ಲಿ ಈ ಉದ್ದೇಶ ಸಾಧನೆಗೆ ಸಹಾಯವಾಗುತ್ತಿಲ್ಲ. ಆಗಿರುವ ಸುಧಾರಣೆಗಳು ನರಸಿಂಹಂ ಸಮಿತಿಗಳ ಶಿಫಾರಸುಗಳನ್ನು ಅನುಸರಿಸಿರುವು ದರಿಂದ ಅವುಗಳ ಪ್ರಯೋಜನ ವ್ಯವಸ್ಥಿತ ಕೈಗಾರಿಕೆಗಳು ಮತ್ತು ವಾಣಿಜ್ಯೋದ್ಯಮ ಗಳಿಗಾಗಿದೆಯೇ ಹೊರತು ಗ್ರಾಮೀಣದ ಜನತೆಗಲ್ಲ. ಇನ್ನು ಮುಂದೆ ಆಗಬೇಕಾಗಿರುವ ಸುಧಾರಣೆಗಳು ಈ ನ್ಯೂನತೆಯನ್ನು ಸರಿಪಡಿಸಬೇಕು.

೨೦೦೪ರಲ್ಲಿ ಸರ್ಕಾರಿ ಸ್ವಾಮ್ಯದ ಬ್ಯಾಂಕುಗಳಿಂದ ಕೃಷಿಕರಿಗೆ ದೊರೆತಿರುವ ಎಲ್ಲಾ ವಿಧದ ಸಾಲಗಳ ಮೊತ್ತ ರೂ. ೮೬,೨೧೦ ಕೋಟಿ ಮಾತ್ರ ಅಥವಾ ಎಲ್ಲಾ ಕ್ಷೇತ್ರ ಗಳಿಗೂ ಕೊಟ್ಟಿರುವ ಸಾಲದ ಶೇಕಡ ೧೫.೫ರಷ್ಟು. ಖಾಸಗೀ ಬ್ಯಾಂಕುಗಳು ಕೊಟ್ಟಿರುವ

ಸಾಲ ಇನ್ನೂ ಕಡಿಮೆ – ಶೇಕಡ ೧೨ ರಷ್ಟು. ಇದೆಲ್ಲವನ್ನೂ ಪರಿಶೀಲಿಸಿದ ಪ್ರೊ॥ ವಿ. ಎಸ್. ವ್ಯಾಸ್ ಸಮಿತಿ ಹೋದ ಜೂನ್ ತಿಂಗಳಲ್ಲಿ ರಿಸರ್ವ್ ಬ್ಯಾಂಕಿಗೆ ಕೊಟ್ಟಿರುವ ವರದಿಯಲ್ಲಿ ಈ ಪ್ರಮಾಣಗಳು ೨೦೦೮ರೊಳಗೆ ಶೇಕಡ ೧೮ರಷ್ಟಾದರೂ ಆಗಬೇಕೆಂದು ತಿಳಿಸಿದ್ದಾರೆ ಮತ್ತು ಈ ಭಾಗದ ಶೇಕಡ ೪೦ ರಷ್ಟು ಸಣ್ಣ ಮತ್ತು ಅತಿ ಸಣ್ಣ ಜಮೀನುಗಳ ರೈತರಿಗೆ ನೇರವಾಗಿ ಸಿಗುವುದಕ್ಕೆ ಬ್ಯಾಂಕುಗಳು ಯತ್ನಿಸಬೇಕು. ಸಾಲದ ಮರುಪಾವತಿ ನಿಗದಿ ಪಡಿಸುವಾಗ ರೈತರ ಹಣಕಾಸು ವ್ಯವಹಾರಗಳಿಗೆ ಅನುಗುಣವಾಗಿದ್ದರೆ ಉಭಯ ಪಕ್ಷಗಳಿಗೂ ತೊಂದರೆ ಇರುವುದಿಲ್ಲ. ಬಡ್ಡಿದರದ ರಿಯಾಯಿತಿಗಿಂತ ಸಾಲ ಪಡೆಯಲು ರೈತರು ಅನುಭವಿಸಬಹುದಾದ ಇತರ ಖರ್ಚುಗಳನ್ನು ಕಡಿಮೆ ಮಾಡಲು ಗಮನಿಸಬೇಕು. ಜೊತೆಗೆ ವ್ಯವಸಾಯಕ್ಕೆ ಅನುಕೂಲವಾಗುವ[೩] ನೀರಾವರಿ ಯೋಜನೆಗಳು, ಗ್ರಾಮೀಣ ರಸ್ತೆ ಮತ್ತು ಸಂಪರ್ಕ, ನಿಯಮಿತ ಮಾರುಕಟ್ಟೆ ಮತ್ತು ಉಗ್ರಾಣಗಳು, ಸಂಶೋಧನೆ ಮೊದಲಾದ ಮೂಲಭೂತ ಸೌಕರ್ಯಗಳಿಗೆ ಬೇಕಾಗುವ ಹೂಡಿಕೆಯನ್ನು ಒದಗಿಸುವುದರಲ್ಲಿ ಸರ್ಕಾರ ಮತ್ತು ಖಾಸಗೀ ವಲಯಗಳೆರಡೂ ಮುಂದೆ ಬರಬೇಕಾಗಿದೆ. ಈ ಕಾರ್ಯಗಳಿಗೆ ಪ್ರತಿ ವರ್ಷ ಸಜ್ಜುಗೊಳಿಸಬೇಕಾದ ಮೊತ್ತವೆಲ್ಲಾ ಬ್ಯಾಂಕುಗಳು ಕೊಡಲಾಗುವುದಿಲ್ಲ; ಸರ್ಕಾರ ಮತ್ತು ಖಾಸಗೀ ಸಂಸ್ಥೆಗಳೆರಡೂ ತಾವು ಶೇಖರಿಸುವ ಉಳಿತಾಯ ವಲ್ಲದೆ ಇತರ ಮೂಲಗಳಿಂದಲೂ ಹಣ ಪಡೆಯುವುದು ಅಗತ್ಯ. ತೆಗೆದಿಟ್ಟ ಉಳಿತಾಯಕ್ಕೆ ಅನುಗುಣವಾಗಿ ಬ್ಯಾಂಕುಗಳಿಂದ ಸಾಲ ಪಡೆಯಲು ಸಾಧ್ಯ. ಕೃಷಿಯ ಅಭಿವೃದ್ಧಿಗೆ ಬೆಂಬಲವೆಲ್ಲಾ ಹಣಕಾಸು ಸಂಸ್ಥೆಗಳಿಂದ ದೊರಕುವುದೆಂದು ನಿರೀಕ್ಷಿಸುವುದು ಸಾಧುವಲ್ಲ.

## ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ ಉದ್ಘಾಟನೆ



ಕಾರ್ಮಿಕ ವರ್ಗದ ಮುಂದಾಳು, ಭಾರತ ಕಮ್ಯುನಿಸ್ಟ್ ಪಕ್ಷದ ಅದ್ವಿತೀಯ ನಾಯಕ ಹಾಗೂ ನಾಲ್ಕು ಬಾರಿ ರಾಜ್ಯ ವಿಧಾನಸಭೆಯ ಸದಸ್ಯರಾಗಿ ನಿಸ್ವಾರ್ಥ ಸೇವೆ ಸಲ್ಲಿಸಿದ ದಿ॥ ಎಂ. ಎಸ್. ಕೃಷ್ಣನ್ ಅವರ ಆಶಯ, ಕನಸುಗಳನ್ನು ಕಾರ್ಯ ರೂಪಕ್ಕೆ ತರಲು ಉದ್ದೇಶಿಸಿರುವ ಎಂ. ಎಸ್. ಕೆ. ಸ್ಮರಣ ಸಂಸ್ಥೆಯ ಉದ್ಘಾಟನೆ ಮತ್ತು ಮೇ ದಿನಾಚರಣೆಯನ್ನು ಕಳೆದ ಮೇ ೧ರಂದು ಶ್ರೀ ಜಗದ್ಗುರು ರೇಣುಕಾಚಾರ್ಯ ಕಾಲೇಜು, ಬೆಂಗಳೂರು, ಇಲ್ಲಿ ಏರ್ಪಡಿಸಲಾಗಿತ್ತು. ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ ಮತ್ತು ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್, ಬೆಂಗಳೂರು, ಇವರ ಜಂಟಿ ಆಶ್ರಯದಲ್ಲಿ ಜರುಗಿದ ಈ ಅರ್ಥಪೂರ್ಣ ಕಾರ್ಯಕ್ರಮದಲ್ಲಿ ಕಾರ್ಮಿಕರು, ಎಂ. ಎಸ್. ಕೃಷ್ಣನ್ ಅವರ ಸಂಗಾತಿಗಳು, ಅಭಿಮಾನಿಗಳು ಅಪಾರ ಸಂಖ್ಯೆಯಲ್ಲಿ ಭಾಗವಹಿಸಿದ್ದರು.

ರಾಜ್ಯದ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಎನ್. ಧರಂಸಿಂಗ್ ಅವರು ಉದ್ಘಾಟಿಸಿದ ಈ ವಿಶೇಷ ಸಮಾರಂಭದಲ್ಲಿ, ಮಾಜಿ ಪ್ರಧಾನಮಂತ್ರಿ ಮತ್ತು ಲೋಕಸಭಾ ಸದಸ್ಯರಾದ ಮಾನ್ಯ ಶ್ರೀ ಎಚ್. ಡಿ. ದೇವೇಗೌಡ, ಎ.ಐ.ಟಿ.ಯು.ಸಿ. ರಾಜ್ಯ ಮಂಡಳಿ ಅಧ್ಯಕ್ಷರಾದ ಎಂ. ಸಿ. ನರಸಿಂಹನ್, ರಾಜ್ಯ ಎ.ಐ.ಟಿ.ಯು.ಸಿ. ಪ್ರಧಾನ ಕಾರ್ಯದರ್ಶಿ ಶ್ರೀ ಎಚ್. ವಿ. ಅನಂತಸುಬ್ಬರಾವ್ ಮತ್ತು ಭಾರತ ಕಮ್ಯುನಿಸ್ಟ್ ಪಕ್ಷದ ರಾಜ್ಯ ಕಾರ್ಯದರ್ಶಿ ಡಾ॥ ಸಿದ್ದನಗೌಡ ಪಾಟೀಲ, ಲೋಕಸಭಾ ಸದಸ್ಯ ಶ್ರೀ ಎಸ್. ಸುಧಾಕರ ರೆಡ್ಡಿ ಅವರು ಭಾಗವಹಿಸಿ ಮೇ ದಿನದ ಶುಭಾಶಯಗಳೊಂದಿಗೆ ಸ್ಮರಣ ಸಂಸ್ಥೆಗೆ ಶುಭ ಕೋರಿದರು. ಶ್ರೀ ಕೋ. ಚೆನ್ನಬಸಪ್ಪ, ಅಧ್ಯಕ್ಷರು, ಎಂ.ಎಸ್.ಕೆ. ಸ್ಮರಣ ಸಂಸ್ಥೆ, ಅಧ್ಯಕ್ಷತೆ ವಹಿಸಿ ಕಾರ್ಯಕಲಾಪಗಳನ್ನು ನಡೆಸಿಕೊಟ್ಟರು.

ವ್ಯವಸ್ಥಿತ ಹಣಕಾಸು ಸಂಸ್ಥೆಗಳಿಂದ ಸಾಕಷ್ಟು ದೊರಕದೆ ರೈತರು ಲೇವಾದೇವಿಗಾರರಿಂದ ಸಾಲ ಪಡೆದು ನಾನಾ ರೀತಿಯ ತೊಂದರೆಗಳಿಗೆ ಗುರಿಯಾಗುವುದು ಹೊಸತೇನಲ್ಲ. ಇಂತಹ ಅವಲಂಬನೆಯನ್ನು ನಿವಾರಿಸದಿದ್ದರೆ ರೈತಾಪಿ ಜನರ ಬಡತನ ಮತ್ತು ಇತರ ಕೋಟಲೆಗಳನ್ನು ನಿರ್ಮೂಲ ಮಾಡುವುದು ಅಸಾಧ್ಯ. ದೇಶದ ಸಮಗ್ರ ಉತ್ಪನ್ನವನ್ನು ತ್ವರಿತವಾಗಿ ಏರಿಸದೆ ಬಡತನ, ನಿರುದ್ಯೋಗ ಮೊದಲಾದ ಸಮಸ್ಯೆಗಳನ್ನು ಪರಿಹರಿಸುವುದು ಸುಲಭವಲ್ಲ. ಆದರೆ ಉತ್ಪನ್ನದ ಏರಿಕೆಯಿಂದ ಮಾತ್ರ – ಅದು ಹೇಗಾಗಿದ್ದರೂ – ಗ್ರಾಮೀಣ ಭಾರತದ ಬಡತನದ ನಿವಾರಣೆಯಾಗುವುದೆಂದು ಭಾವಿಸುವುದು ತಪ್ಪು. ಉತ್ಪನ್ನದ ಏರಿಕೆ ಕೃಷಿ ಮತ್ತು ಗ್ರಾಮೋದ್ಯೋಗಗಳಲ್ಲಿ ಕಂಡುಬಂದು, ಅದರ ಬಹುಭಾಗ ಅವುಗಳಲ್ಲಿನ ಕಾರ್ಮಿಕರಿಗೆ ಸಿಕ್ಕುವ ತನಕ ದೇಶದ ಹೆಚ್ಚು ಸಂಖ್ಯೆಯ ಜನತೆಗೆ ಅನುಕೂಲವಾಗುವುದಿಲ್ಲ. ಅಂದರೆ, ಕೈಗಾರಿಕಾ ವಲಯದಲ್ಲಿರುವ ದೊಡ್ಡ ಕಂಪನಿಗಳನ್ನೂ, ವಾಣಿಜ್ಯ ಮತ್ತು ಇತರ ವಲಯಗಳನ್ನೂ ಕಡೆಗಣಿಸಬೇಕೆಂದಲ್ಲ. ಆರ್ಥಿಕ ಸುಧಾರಣಾ ಕಾರ್ಯಕ್ರಮದಲ್ಲಿ ಅವುಗಳ ಏಳಿಗೆಗೂ ಅವಕಾಶವಿರಬೇಕು. ಆದರೆ ಈವರೆಗೆ ಕೃಷಿಯೇತರ ಕ್ಷೇತ್ರಗಳಿಗೆ ಕೊಟ್ಟಿರುವ ಆದ್ಯತೆಯಿಂದ ಲಾಭವಾಗಿರುವುದು ಕೆಲವು ಉನ್ನತ ಅಥವಾ ಮಧ್ಯಮ ವರ್ಗದವರಿಗೆ ಮಾತ್ರ. ರೈತರು, ಅಶಿಕ್ಷಿತ ಕಾರ್ಮಿಕರು, ದಿನಗೂಲಿಗಳು, ಮಹಿಳೆಯರು ಮುಂತಾದವರಿಗೆ ಲಭಿಸಿರುವ ಪ್ರಯೋಜನ ಬಹಳ ಕಡಿಮೆ. ಕೆಲವು ಆರ್ಥಿಕ ತಜ್ಞರು ದೇಶದಲ್ಲಿ ಬಡತನದ ಪ್ರಮಾಣ ೧೯೯೧ರಿಂದೀಚೆಗೆ ಬಹಳ ಕಡಿಮೆಯಾಗಿದೆಯೆಂದು ವಾದಿಸಿದ್ದರೂ ಕೋಟ್ಯಂತರ ಸಂಸಾರಗಳು ಇನ್ನೂ ಬಡತನದ ರೇಖೆಯ ಕೆಳಗೇ ಇವೆ. ಕೇಂದ್ರ ಸರ್ಕಾರ 'ಭಾರತ ನಿರ್ಮಾಣ'ದ ಘೋಷಣೆಗಳನ್ನು ಕಾಲಕಾಲಕ್ಕೆ ಮಾಡುತ್ತಿದ್ದರೂ ಖಚಿತವಾಗಿ ಕೈಗೆತ್ತಿಕೊಂಡಿರುವ ಕೆಲಸಗಳು ಬೆರಳೆಣಿಕೆಯಷ್ಟು. ಸಂಯುಕ್ತ ಪ್ರಗತಿಪರ ಕೂಟದ ಸರ್ಕಾರ ತನ್ನ ಮೊದಲ ವರ್ಷದಲ್ಲಿ ಸಾಮಾನ್ಯ ವರ್ಗಗಳಿಗೆ ಹೆಮ್ಮೆಪಡುವಂತಹ ಸೌಕರ್ಯಗಳನ್ನೇನೂ ಒದಗಿಸಿಲ್ಲವೆಂಬ ವಾಮಪಕ್ಷಗಳ ಟೀಕೆ, ಅಸಮಾಧಾನಗಳು ಸೂಕ್ತವಾಗಿಯೇ ಇವೆ.

ಎಲ್ಲಕ್ಕಿಂತ ಹೆಚ್ಚಾಗಿ ಗ್ರಾಮೀಣ ಭಾರತದ ಜನ ಉದ್ಯೋಗವನ್ನು ಅರಸಿ ನಗರ ಪ್ರದೇಶಗಳಿಗೆ ವಲಸೆ ಹೋಗುವುದನ್ನು ತಪ್ಪಿಸಬೇಕಾದರೆ ತ್ವರಿತವಾಗಿ ವ್ಯವಸಾಯ ಮತ್ತು ಸಣ್ಣ ಉದ್ಯಮಗಳಲ್ಲಿ ಉದ್ಯೋಗಾವಕಾಶ ಮತ್ತು ವರಮಾನಗಳು ವೃದ್ಧಿಸುವುದು ಅಗತ್ಯ. ಉದ್ಯೋಗ ಖಾತರಿ ಯೋಜನೆ (employment guarantee scheme or EGS)ಯ ಅಂಗವಾಗಿ ರಸ್ತೆ ಇತ್ಯಾದಿಗಳ ನಿರ್ಮಾಣಗಳನ್ನು ಕೈಗೆತ್ತಿಕೊಳ್ಳುವುದು ಮಾಮೂಲು. ಇಷ್ಟು ಮಾತ್ರ ಮಾಡಿದರೆ ಸಾಲದು. ಕಾರ್ಮಿಕರು ತರಬೇತು ಪಡೆಯಲು ಅವಕಾಶಗಳನ್ನು ಕಲ್ಪಿಸಿ ಅವರ ಕಾರ್ಯ ನಿಪುಣತೆ ಬೆಳೆದು ಎಲ್ಲಾ ಉದ್ಯಮಗಳಲ್ಲೂ ಉತ್ಪಾದಕತೆ ಹೆಚ್ಚುವಂತಾದರೆ ದೇಶದ ಅಭ್ಯುದಯವಲ್ಲದೆ ಬಡತನ ನಿವಾರಣೆಯೂ ಸಾಧ್ಯವಾದೀತು. ಕೈಗಾರಿಕಾ ಮತ್ತು ವಾಣಿಜ್ಯ ವಲಯಗಳಲ್ಲಿ ಉತ್ಪಾದನಾ ತಂತ್ರಜ್ಞಾನದ ಮುನ್ನಡೆಯಿಂದ ತಯಾರಿಕೆಯ ಪ್ರಮಾಣ ಹೆಚ್ಚಿದರೂ ಅದಕ್ಕೆ ಅನುಗುಣವಾಗಿ ಉದ್ಯೋಗಾವಕಾಶಗಳು ಬೆಳೆಯದೆ ಇರುವ ಅನುಭವ ಭಾರತಕ್ಕೂ ಆಗಿದೆ. ಉದ್ಯೋಗಾವಕಾಶಗಳು ಹೆಚ್ಚುತ್ತಿರುವುದು ಪ್ರಸ್ತುತ ಸೇವಾ ವಲಯ (services sector)ದಲ್ಲಿ ಮಾತ್ರ. ಈ ಕ್ಷೇತ್ರದಲ್ಲಿ ಕುಶಲ ಕರ್ಮಿಗಳಿಗೆ ದೊರಕುವ ವರಮಾನ ಸೌಲಭ್ಯಗಳು ಇತರರಿಗೆ ಸಿಗುವುದಿಲ್ಲ. ಜೊತೆಗೆ ಗ್ರಾಮೀಣ ಪ್ರದೇಶಗಳಲ್ಲಿ ಸಣ್ಣ ಅಥವಾ ಮಧ್ಯಮ ವರ್ಗದ ಕೈಗಾರಿಕೆಗಳನ್ನು ಸ್ಥಾಪಿಸಲು ಅನುಕೂಲ ಮಾಡಿಕೊಟ್ಟರೂ ಕುಶಲತೆ ಇಲ್ಲದೆ ಕೆಲಸಗಾರರಿಗೆ ಹೆಚ್ಚು ಅವಕಾಶವಿರುವುದು ಅಸಂಭವ. ಹಾಗಾಗಿ ಗ್ರಾಮೀಣ ಜನತೆಗೆ ಇತರ ಸೌಲಭ್ಯಗಳ ಜೊತೆ ವಿಶಿಷ್ಟ

ರೀತಿಯ ತರಬೇತುಗಳಿಗೂ ಏರ್ಪಾಟು ಮಾಡುವುದು ಮುಖ್ಯ. ಈ ದಿಸೆಯಲ್ಲಿ ಕೇಂದ್ರ ಮತ್ತು ರಾಜ್ಯಸರ್ಕಾರಗಳೆರಡೂ ಕಾರ್ಯನಿರತವಾಗಬೇಕು.

ಸ್ವಾತಂತ್ರ್ಯಾನಂತರ ಕೈಗೆತ್ತಿಕೊಂಡ ಮೊದಲ ಕಾರ್ಯಕ್ರಮಗಳಲ್ಲಿ ಭೂ ಸುಧಾರಣೆಗಳಿಗೆ ವಿಶೇಷ ಆದ್ಯತೆಯಿತ್ತು. ಜಮೀನುಗಳಲ್ಲಿ ಶ್ರಮಿಸುವ ರೈತ ಸಂಸಾರಗಳಿಗೆ ಹಣಕಾಸುಗಳ ಅಭಾವವಲ್ಲದೆ ಬೆಳೆದ ಫಸಲಿನಲ್ಲಿ ದೊರಕುತ್ತಿದ್ದ ಭಾಗ ಸಾಕು ಸಾಲದಷ್ಟು ಮಾತ್ರ. ಭೂ ಮಾಲೀಕರಿಗೆ ಕೊಡಬೇಕಾಗಿದ್ದ ಗೇಣಿಯ ಜೊತೆ ಒಕ್ಕಲುತನದ ಹೊರೆಗಳು ವಿಪರೀತವಾಗಿದ್ದುವಲ್ಲದೆ ಜಮೀನು ಅಥವಾ ಫಸಲಿನ ಆಧಾರದ ಮೇಲೆ ವಾಣಿಜ್ಯ ಅಥವಾ ಸಹಕಾರ ಬ್ಯಾಂಕುಗಳಿಂದ ಸಾಲ ಪಡೆಯಲು ಕಷ್ಟವಾಗುತ್ತಿತ್ತು. ಈ ಪದ್ಧತಿಯನ್ನು ಬದಲಾಯಿಸಲು ಜಮೀನುದಾರರ ಒಡೆತನವನ್ನು ರದ್ದುಪಡಿಸಿ ವ್ಯವಸಾಯ ನಿರತ ರೈತರಿಗೆ ಭೂಮಿಯನ್ನು ವರ್ಗಾಯಿಸಲು ಎಲ್ಲ ರಾಜ್ಯಗಳೂ ಹೊಸ ಶಾಸನಗಳನ್ನು ಜಾರಿಗೆ ತಂದಿದ್ದವು. ಆದರೆ ಅವನ್ನು ಕಾರ್ಯಗತ ಮಾಡಲು ಪ್ರಯತ್ನಿಸದಿದ್ದುದರಿಂದ ಈಗಲೂ ಹಳೆಯ ಪದ್ಧತಿಗಳೇ ಚಾಲನೆಯಲ್ಲಿವೆ. ಕೃಷಿ ವರ್ಗದಲ್ಲಿ ಕಾಣುವ ಬಡತನಕ್ಕೆ ಮುಖ್ಯ ಕಾರಣಗಳಲ್ಲಿ ಇದೂ ಒಂದು. ಸಾಲ ಸೌಕರ್ಯ, ಗೊಬ್ಬರ ಮತ್ತು ಉತ್ತಮ ಬೀಜಗಳ ಸರಬರಾಜು, ನೀರಾವರಿ, ವೈಜ್ಞಾನಿಕ ಬೆಂಬಲ ಮುಂತಾದುವನ್ನು ಒದಗಿಸಿದರೂ ಉಳುವ ಭೂಮಿಯ ಸ್ವಾಮ್ಯವಿರದಿದ್ದರೆ ರೈತರಿಗೆ ದೊರಕುವ ಪ್ರಯೋಜನವೇನೆಂದು ಅನೇಕ ಸಮಾಜ ಶಾಸ್ತ್ರಜ್ಞರು ಮತ್ತು ವಾಮ ಪಂಥೀಯರು ವಾದಿಸಿದ್ದಾರೆ. ಈ ವಿಚಾರದಲ್ಲಿ ಇದುವರೆಗೆ ಸಂಯುಕ್ತ ಪ್ರಗತಿಪರ ಕೂಟ ಯಾವ ನಿರ್ಧಾರವನ್ನೂ ತೆಗೆದುಕೊಳ್ಳದೆ ಇರುವುದರಿಂದ ಕೃಷಿಕ್ಷೇತ್ರದ ಅಭಿವೃದ್ಧಿಗೆ ಆದ್ಯತೆ ನೀಡುತ್ತಿದ್ದೇವೆಂದು ಹೇಳುವುದು ಅರ್ಥವಿಲ್ಲದಂತೆ ಆಗಿದೆ.

ರಾಷ್ಟ್ರ ಮತ್ತು ರಾಜ್ಯ ಸರ್ಕಾರಗಳು ಗ್ರಾಮೀಣಾಭಿವೃದ್ಧಿಗೆ ಬಜೆಟ್ ಅಥವಾ ಬ್ಯಾಂಕುಗಳ ಮೂಲಕ ಒದಗಿಸುವ ಹಣದ ಮೊತ್ತವೇನೆಂದು ಹೇಳುವಾಗ ಅವನ್ನು ರೈತರಿಗೆ ಸೋರಿಕೆಯಿಲ್ಲದೆ ತಲುಪಿಸುವ ವಿಧಾನವನ್ನು ವಿವರಿಸಿಲ್ಲ. ಈ ಕಾರ್ಯ ರಾಷ್ಟ್ರೀಯ ಯೋಜನಾ ಆಯೋಗದ ಮುಖಾಂತರ ಆಗಬೇಕಾಗಿದೆ. ಆಯೋಗ ತನ್ನ ಮಧ್ಯಂತರ ವರದಿ (Mid-term Appraisal)ಯಲ್ಲಿ ಅಭಿವೃದ್ಧಿ ಕಾರ್ಯದ ವಿಕೇಂದ್ರೀಕರಣಕ್ಕೆ ಒತ್ತು ಕೊಟ್ಟು ಕೃಷಿ ಮತ್ತು ಗುಡಿ ಕೈಗಾರಿಕೆಗಳಿಗೆ ಹಣ ಮತ್ತು ಇತರ ಸೌಲಭ್ಯಗಳನ್ನು ಪಂಚಾಯತಿ ಸಂಸ್ಥೆಗಳ ಮುಖಾಂತರ ನೀಡುವುದು ಸೂಕ್ತವೆಂದು ಅಭಿಪ್ರಾಯಪಟ್ಟಿದೆ. ಆದರೆ ರಾಜ್ಯಗಳ ವಿಧಾನಮಂಡಲಗಳು ಪಂಚಾಯತಿಗಳ ಜವಾಬ್ದಾರಿ ಮತ್ತು ಅಧಿಕಾರಗಳನ್ನು ಕಡಿಮೆ ಮಾಡುತ್ತಿವೆಯೇ ಹೊರತು ಹೆಚ್ಚಿಸುತ್ತಿಲ್ಲ. ಗ್ರಾಮೀಣ ಸಮಾಜದ ನ್ಯೂನತೆಗಳು, ಪಂಚಾಯತಿ ಸಂಸ್ಥೆಗಳ ಒಳಜಗಳ ಮತ್ತು ಅಸಮರ್ಥತೆ, ಕಾನೂನಿನ ದೌರ್ಬಲ್ಯಗಳು, ಅಧಿಕಾರಿಗಳ ಲಂಚಕೋರತನ ಇತ್ಯಾದಿ ನೆಪಗಳನ್ನು ಒಡ್ಡಿ ರಾಜ್ಯ ಸರ್ಕಾರಗಳು ಪಂಚಾಯಿತ ಸಂಸ್ಥೆಗಳಿಗೆ ಹಣ, ಅಧಿಕಾರ ಮತ್ತು ಜನಸಹಾಯವನ್ನು ನಿರಾಕರಿಸುತ್ತಿವೆ. ಇಂತಹ ಸನ್ನಿವೇಶದಲ್ಲಿ ರಾಷ್ಟ್ರಸರ್ಕಾರದ ಮಂತ್ರಾಲಯಗಳು ಜಿಲ್ಲಾ ಮತ್ತು ಗ್ರಾಮ ಪಂಚಾಯತಿಗಳೊಡನೆ ನೇರ ಸಂಪರ್ಕವಿಟ್ಟುಕೊಳ್ಳಲು ಪ್ರಯತ್ನಿಸುತ್ತಿರುವುದು ಇನ್ನೊಂದು ಅಪಾಯ. ತೋರಿಕೆಗೆ ಇದು ಸೂಕ್ತವೆಂದು ಕಂಡರೂ ಕಡೆಗೆ ಇದರಿಂದ ವಿಕೇಂದ್ರೀಕರಣಕ್ಕೆ ಧಕ್ಕೆಯಾಗುವುದೇ ಹೊರತು ಪ್ರಯೋಜನವಾಗುವುದಿಲ್ಲ. ಹಣ ಅಥವಾ ತಾಂತ್ರಿಕ ಸಹಾಯವನ್ನು ನೇರವಾಗಿ ಒದಗಿಸುವ ಮೊದಲು ಸಂವಿಧಾನದ ೭೩ ಮತ್ತು ೭೪ನೇ ತಿದ್ದುಪಡಿಗಳಲ್ಲಿರುವ ಲೋಪಗಳನ್ನು ಸರಿಪಡಿಸಿ ಜಿಲ್ಲಾ ಮತ್ತು ಗ್ರಾಮ ಪಂಚಾಯತಿಗಳ ಸ್ವಾತಂತ್ರ್ಯವನ್ನು ಬಲಪಡಿಸುವುದು ಅಗತ್ಯ. ರಾಜ್ಯ ಮತ್ತು ಪಂಚಾಯತಿ ಸರ್ಕಾರಗಳ ಕಾರ್ಯ ಕ್ಷೇತ್ರಗಳನ್ನು ಖಚಿತವಾಗಿ ವಿಂಗಡಿಸುವುದಲ್ಲದೇ ಪಂಚಾಯತಿಗಳು ಸಂಪನ್ಮೂಲಗಳನ್ನು ತಮ್ಮ ಸ್ಥಳೀಯ ಆದ್ಯತೆಗಳಿಗೆ ಅನುಗುಣವಾಗಿ ಉಪಯೋಗಿಸುವುದಕ್ಕೆ ಉನ್ನತ ಸರ್ಕಾರಗಳಿಂದ ಯಾವ ರೀತಿಯ ಅಡಚಣೆಯೂ ಇರಕೂಡದು. ಭಾರತ ನಿರ್ಮಾಣಕ್ಕೂ ವಿಕೇಂದ್ರೀಕರಣಕ್ಕೂ ನಿಕಟ ಸಂಬಂಧವಿರುವುದನ್ನು ರಾಜಕೀಯ ಪಕ್ಷಗಳಲ್ಲದೆ ಅಧಿಕಾರವರ್ಗ, ಸಮಾಜ ಸೇವಕರು ಮತ್ತು ಸಾಮಾನ್ಯ ಜನತೆಯೂ ಅರ್ಥಮಾಡಿಕೊಳ್ಳಬೇಕಾಗಿದೆ.

ಒಟ್ಟಾರೆ ಕೃಷಿವಲಯದ ಅಭ್ಯುದಯದಲ್ಲಿ ವ್ಯವಸ್ಥಿತ ಹಣಕಾಸು ಸಂಸ್ಥೆಗಳು ವಹಿಸಬೇಕಾದ ಪಾತ್ರ ಗೌಣವಲ್ಲದಿದ್ದರೂ ಈಗಿನ ಪರಿಸ್ಥಿತಿಯಲ್ಲಿ ರಾಷ್ಟ್ರ ಮತ್ತು ರಾಜ್ಯ ಸರ್ಕಾರಗಳು ಮಾಡಬೇಕಾದ ಸಹಾಯಕ ಕಾರ್ಯಗಳಾಗದೆ ರೈತವರ್ಗಕ್ಕೆ – ಅದರಲ್ಲೂ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ – ಹಣ ಸಹಾಯ ಹೆಚ್ಚಿಸುವುದರಿಂದ ಉದ್ದೇಶಿತ ಪ್ರಯೋಜನವಾಗುವುದು ಅನುಮಾನ. ರಿಸರ್ವ್ ಬ್ಯಾಂಕ್ ಮತ್ತು ಅದರ ಗವರ್ನರ್ ಡಾ|| ರೆಡ್ಡಿಯವರು ಇದನ್ನು ಬಲ್ಲರು. ಆದರೆ ಅವರು ಸರ್ಕಾರಗಳಿಗೆ ಎಂತಹ ಸನ್ನಿವೇಶದಲ್ಲಿ ತಾವು ಮಾಡುವ ಸುಧಾರಣೆಗಳಿಂದ ಕೃಷಿಕರಿಗೆ ಅನುಕೂಲವಾದೀತೆಂದು ತಿಳಿಸಬಹುದೇ ಹೊರತು ಆಗಬೇಕಾಗಿರುವ ಇತರ ಬದಲಾವಣೆಗಳನ್ನು ಮಾಡಲು ಅಸಮರ್ಥರು. ಅವರು ತಮ್ಮ ಸಲಹೆಗಳಿಗೆ ಸರ್ಕಾರಗಳು ಮನ್ನಣೆ ಕೊಡಬಹುದೆಂದು ಅಪೇಕ್ಷಿಸಬಹುದಷ್ಟೆ.

**ಆಕರಗಳು**

೧. ಗವರ್ನರ್ ಡಾ|| ರೆಡ್ಡಿಯವರ ಹೇಳಿಕೆಗಳು. ಏಪ್ರಿಲ್ ೨೯ನೇ ತಾರೀಖಿನ Business Standard ಪತ್ರಿಕೆಯ RBI Annual Policy 2005-2006 ಪುರವಣಿಯ ಆಧಾರದ ಮೇಲೆ.

೨. ಆರ್ಥಿಕ ತಜ್ಞ ಶ್ರೀ ಎಂ. ನರಸಿಂಹಂರವರು ೧೯೭೦-೮೦ರ ದಶಕದಲ್ಲಿ ಕೇಂದ್ರ ಸರ್ಕಾರದ ವಿತ್ತ ಮಂತ್ರಿಮಂಡಲದಲ್ಲಿ ಕಾರ್ಯದರ್ಶಿಯಾಗಿ ಹಾಗೂ ಕೆಲವು ಕಾಲ ರಿಸರ್ವ್ ಬ್ಯಾಂಕ್ ಗವರ್ನರ್ ಆಗಿದ್ದರು. ಆ ಸಮಯದಲ್ಲಿ ಬ್ಯಾಂಕಿಂಗ್ ವಲಯದಲ್ಲಿ ಆಗಿದ್ದ ಸುಧಾರಣೆಗಳಿಗೆ ಬೆಂಬಲ ಕೊಟ್ಟಿದ್ದರು. ಆದರೆ ೧೯೯೧ರಲ್ಲಾದ ಆರ್ಥಿಕ ಸುಧಾರಣೆಗೆ ಅನುಗುಣವಾಗಿ ತಮ್ಮ ನಿಲುವನ್ನು ಸಂಪೂರ್ಣವಾಗಿ ಬದಲಾಯಿಸಿಬಿಟ್ಟರು.

೩. Reserve Bank of India: Annual Report 2003-2004: pp. 135-137.

**ಡಾ|| ಕೆ. ಎಸ್. ಕೃಷ್ಣಸ್ವಾಮಿ**
೩-೬೧೧, 'ಆದರ್ಶ ಗಾರ್ಡನ್ಸ್', ೪೭ನೇ ಕ್ರಾಸ್, ೨ನೇ ಮುಖ್ಯರಸ್ತೆ
ಜಯನಗರ ೮ನೇ ಬ್ಲಾಕ್, ಬೆಂಗಳೂರು - ೫೬೦ ೦೮೨




## 'ಹೊಸತು' ಓದುಗರ ಗಮನಕ್ಕೆ !

**'ಹೊಸತು' ಪ್ರಾರಂಭವಾದಂದಿನಿಂದ ಇಲ್ಲಿಯವರೆಗೆ ಚಂದಾದರಗಳಲ್ಲಿ ಹೆಚ್ಚಳವಾಗಿಲ್ಲದೆ ಇರುವುದನ್ನು ನೀವು ಗಮನಿಸಿರುತ್ತೀರಿ. ಅನಿವಾರ್ಯ ಕಾರಣಗಳಿಂದ ೨೦೦೫ರ ಆಗಸ್ಟ್ ಸಂಚಿಕೆಯಿಂದ ಬಿಡಿ ಸಂಚಿಕೆಯ ಬೆಲೆಯನ್ನು ರೂ. ೧೦ರಿಂದ ರೂ. ೧೨ಕ್ಕೆ ಹೆಚ್ಚಿಸಬೇಕಾಗಿದೆ ಎಂಬುದನ್ನು ದಯವಿಟ್ಟು ಗಮನಿಸಿರಿ.**

**ಅಂತೆಯೇ 'ಹೊಸತು' ಏಳನೇ ವರ್ಷಾರಂಭದಿಂದ (ಆಗಸ್ಟ್ ೨೦೦೫) ವಾರ್ಷಿಕ ಚಂದಾ ರೂ. ೧೨೫ ಆಗುತ್ತದೆ. ಮೂರು ವರ್ಷಗಳಿಗೆ ರೂ. ೩೦೦ ಆಗುತ್ತದೆ.**

**ಚಂದಾ ನವೀಕರಿಸುವವರು ೨೦೦೫ರ ಜುಲೈ ೧೫ರವರೆಗೂ ಹಳೆಯ ದರದಲ್ಲೇ (ವಾರ್ಷಿಕ ರೂ. ೧೦೦; ಮೂರು ವರ್ಷಕ್ಕೆ ರೂ. ೨೫೦) ನವೀಕರಿಸಬಹುದಾಗಿದೆ !**

**ಈ ವರ್ಷಾಂತ್ಯದೊಳಗಾಗಿ ಚಂದಾ ನವೀಕರಿಸಬೇಕಾದವರು ಕೂಡ ೧೫-೦೭-೨೦೦೫ರೊಳಗಾಗಿ ಹಣ ಪಾವತಿಸಿ ಈಗಿನ ದರದಲ್ಲೇ ನವೀಕರಿಸಬಹುದು.**

**ಚಂದಾದಾರರಿಗೆ 'ಹೊಸತು' ವಾರ್ಷಿಕ ವಿಶೇಷಾಂಕವನ್ನು ಉಚಿತವಾಗಿ ನೀಡುವ ಸಂಪ್ರದಾಯ ಮುಂದುವರಿಯುತ್ತದೆ.**

**ಮೂರು ವರ್ಷದ ಚಂದಾದಾರರಿಗೆ ಪುಸ್ತಕಗಳ ಉಡುಗೊರೆ ಹಾಗೂ ನಮ್ಮ ಪ್ರಕಟಣೆಗಳ ಮೇಲೆ ಶೇ. ೨೦ರ ರಿಯಾಯಿತಿ - ಮುಂತಾದ ಅವಕಾಶಗಳೂ ಮುಂದುವರಿಯುತ್ತವೆ.**

ವ್ಯವಸ್ಥಾಪಕ



# ನಮ್ಮ ಮೇಷ್ಟ್ರು ರಾಮಚಂದ್ರ ಶರ್ಮ

ರಾಮಚಂದ್ರ ಶರ್ಮರು ತೀರಿಕೊಳ್ಳುವುದಕ್ಕೆ ಎರಡು ವಾರಗಳ ಮುಂಚೆ ಗೆಳೆಯ ಕೆ. ರಾಮದಾಸ್ ಅವರೊಂದಿಗೆ ಅವರನ್ನು ಭೇಟಿಯಾಗಿದ್ದೆ. ಅದೇ ಲವಲವಿಕೆ, ಅದೇ ನಗು, ಅದೇ ಜೀವನೋತ್ಸಾಹ. ತಮ್ಮ ರೋಗ, ಸಾವು ಕದ ತಟ್ಟುತ್ತಿದೆ ಎಂಬ ಭಯ ಆತಂಕ ಇವುಗಳ ಬಗ್ಗೆ ಲವಲೇಶವೂ ಮಾತನಾಡದೆ ನಮ್ಮ ಬಗ್ಗೆಯೇ ಮಾತನಾಡಿದರು. ಬದುಕು ಸಾವಿಗಿಂತ ಎಷ್ಟು ಮುಖ್ಯ, ಎಷ್ಟು ಆಕರ್ಷಕ, ಎಷ್ಟು ಕುತೂಹಲಕಾರಿ ಎಂಬುದನ್ನು ಆ ಗಳಿಗೆಯಲ್ಲೂ ನಮಗೆ ಕಲಿಸಿಕೊಟ್ಟರು. ಇಂಥ ಒಬ್ಬರನ್ನು ನನ್ನ ಆ ಎಳೆವಯಸ್ಸಿನಲ್ಲಿ ಅಧ್ಯಾಪಕನಾಗಿ ಪಡೆದದ್ದು ನನ್ನ ಭಾಗ್ಯ. ನಂತರ ಅವರು ನನ್ನನ್ನು ಸ್ನೇಹಿತನನ್ನಾಗಿ ಕಂಡರೂ, ನಾನು ಮಾತ್ರ ಅವರನ್ನು ನನ್ನ ಮೇಷ್ಟ್ರೆಂದೇ ಕಂಡಿದ್ದೇನೆ.

■

ಪ್ರೊ॥ ಜಿ. ಕೆ. ಗೋವಿಂದ ರಾವ್

**ಬೆಂ**ಗಳೂರು ಹೈಸ್ಕೂಲಿಗೆ ನಾನು ಸೇರುವುದಕ್ಕೆ ಮುಂಚೆಯೇ ರಾಮಚಂದ್ರ ಶರ್ಮರ ಹೆಸರು ನನ್ನ ಕಿವಿಗೆ ಬಿದ್ದಿತ್ತು ಹಾಗೂ ಆ ಮನುಷ್ಯನ ಬಗ್ಗೆ ಅಚ್ಚರಿ ಕೂಡಿದ ಕುತೂಹಲವೂ ಬೆಳೆದಿತ್ತು. ಇದಕ್ಕೆ ಕಾರಣವೆಂದರೆ ನನಗಿಂತ ಮುಂಚೆ ಈ ಶಾಲೆಗೆ ಸೇರಿದ್ದ ನನ್ನ ಸೋದರ ಬಂಧುಗಳು ಶರ್ಮರ ಬಗ್ಗೆ ಮನೆಯಲ್ಲಿ ಮಾತನಾಡಿಕೊಳ್ಳುತ್ತಿದ್ದುದನ್ನು ಕೇಳಿದುದು. ಒಂದು ದಿನ ತರಗತಿಗೆ ಬಂದು ಕಪ್ಪು ಹಲಗೆಯ ಮೇಲೆ ''ಈ ರಾಮಚಂದ್ರಶರ್ಮನೆಂಬ ಮಹಾನ್ ವ್ಯಕ್ತಿಯ ಬಗ್ಗೆ ನಿಮಗೆ ಏನೇನು ಗೊತ್ತೊ ಅದನ್ನು ಒಂದು ಪುಟದಷ್ಟು ಲೇಖನ ಬರೆಯಿರಿ'' ಎಂದು ಹೇಳಿ ಕುರ್ಚಿಯಲ್ಲಿ ಕೂತುಬಿಟ್ಟರಂತೆ. ನನಗೆ ಈ ಶರ್ಮ ಎಂಬ ವಿಚಿತ್ರ ವ್ಯಕ್ತಿಯನ್ನು ಎಷ್ಟು ಬೇಗ ನೋಡುತ್ತೇನೋ ಎಂಬ ಕಾತುರ. ಅಂತೂ ನೋಡಿದೆ. ೧೯೪೯ರಲ್ಲಿ ನಾನು ಶಾಲೆಗೆ ಸೇರಿದ್ದು. ನನಗೆ ಹನ್ನೆರಡು ವರ್ಷ, ಶರ್ಮರಿಗೆ ಇಪ್ಪತ್ತನಾಲ್ಕು ವರ್ಷ. ಸ್ವಾತಂತ್ರ್ಯ ಬಂದು ಎರಡು ವರ್ಷಗಳಾಗಿದ್ದವು ಮತ್ತು ಗಾಂಧೀಜಿ ಅವರ ಕೊಲೆಯಾಗಿ ಒಂದು ವರ್ಷವಷ್ಟೇ ಕಳೆದಿತ್ತು. ಅನೇಕ ರೀತಿಗಳಲ್ಲಿ ಈ ಸಂಗತಿ ಮುಖ್ಯವಾದದ್ದು ಎಂಬುದು ನಮಗೆ ಶಾಲೆ ಸೇರಿದ ದಿನದಿಂದ ಅರ್ಥವಾಗುತ್ತ ಬಂತು. ವಿಶೇಷವಾಗಿ ಶರ್ಮರಂಥ ಮೇಷ್ಟರುಗಳು ಇದ್ದದ್ದರಿಂದ. ಶರ್ಮರು ಒಬ್ಬ ಸಮರ್ಥ ಅಧ್ಯಾಪಕರೆಂಬುವುದರ ಬಗ್ಗೆ ನಾನು ವಿವರಿಸಲೇಬೇಕಿಲ್ಲ. ಗಣಿತವಾಗಲಿ, ಭೌತಶಾಸ್ತ್ರವಾಗಲಿ, ಇಂಗ್ಲಿಷ್ ಪಠ್ಯವಾಗಲಿ ಏನನ್ನೇ ಪಾಠ ಮಾಡಿದರೂ ಅತ್ಯಂತ ಆಕರ್ಷಕವಾಗಿ, ಮನೋಜ್ಞವಾಗಿ ಪಾಠ ಮಾಡುತ್ತಿದ್ದರು. ಆದರೆ ನಾನು ಇಂದು ಶರ್ಮರನ್ನು ನೆನೆಸಿಕೊಳ್ಳುವುದು ಅವರು ಪಾಠ ಮಾಡಿದ ಕೌಶಲಕ್ಕಾಗಿಯಲ್ಲ. ಅವರನ್ನು ನಾನು ನೆನಪಿಸಿಕೊಳ್ಳುವುದು ಒಬ್ಬ ಮನುಷ್ಯನನ್ನಾಗಿ, ಅವರ ಮಾನವೀಯತೆಗಾಗಿ, ವಿದ್ಯಾರ್ಥಿಗಳ ಕುರಿತಾದ ಅವರ ಅಕ್ಕರೆ, ಕಳಕಳಿ ಹಾಗೂ ಅವರುಗಳ ಬಗ್ಗೆ ಅವರು ಸದಾ ಉಳಿಸಿಕೊಂಡಿದ್ದ ಆಸಕ್ತಿಗಾಗಿ. ಬಹುಶಃ ಒಳ್ಳೆಯ ಅಧ್ಯಾಪಕ ಎಂದರೆ ಈ ಲಕ್ಷಣಗಳನ್ನೇ ಪ್ರಧಾನವಾಗಿ ಉಳ್ಳವನು ಎಂದೇ ಇರಬಹುದು. ಆ ದಿನಗಳನ್ನು ನೆನೆಸಿಕೊಂಡಾಗ ನಾವುಗಳು ಇನ್ನೂ ಹುಡುಗರು ಎಂಬ ಲೆಕ್ಕವೇ ಇಲ್ಲದೆ ನಮ್ಮೊಡನೆ ಸರಿಸಮಾನರಂತೆ ಮಾತನಾಡುತ್ತಿದ್ದುದು, ಚರ್ಚಿಸುತ್ತಿದ್ದುದು, ಜಗಳವೂ ಆಡುತ್ತಿದ್ದುದು, ಇವುಗಳನ್ನೆಲ್ಲಾ ಮಾಡುತ್ತಿದ್ದ ಶರ್ಮರ ಕುರಿತಾಗಿ ಈಗ ಅತ್ಯಂತ ಗೌರವವೂ, ಕೃತಜ್ಞತೆಯೂ ಪ್ರೀತಿಯೂ ಹುಟ್ಟುತ್ತದೆ. ನನಗೆ ಚೆನ್ನಾಗಿ ಜ್ಞಾಪಕವಿದೆ. ನಾವಿನ್ನೂ ಮೊದಲ ವರ್ಷದಲ್ಲಿ ಇದ್ದಾಗಲೇ ಒಂದು ದಿವಸ ತರಗತಿಗೆ ಬಂದು ಶರ್ಮರು ಅದೇ ತಾನೇ ಬೆಳಿಗ್ಗೆ ತಮಗೆ ಸತ್ಯಗೋಚರವಾದವರ ಹಾಗೆ 'ದೇವರಿಲ್ಲ ಕಣ್ರಯ್ಯ' ಎಂದು ಘೋಷಿಸಿ ನಮ್ಮಂಥ ಸಂಪ್ರದಾಯಸ್ಥ ಕುಟುಂಬಗಳ ಮಕ್ಕಳಿಗೆ ಮೈಯಲ್ಲಿ ಛಳಕು ಹುಟ್ಟುವಂತೆ ಮಾಡಿಬಿಟ್ಟರು. ಹಾಗೆ ಹೇಳಿ ಸುಮ್ಮನಾಗದೆ ವಾದಕ್ಕೂ ಸಿದ್ಧರಾದರು. ನಮ್ಮಲ್ಲೊಬ್ಬ ಹುಡುಗನಿದ್ದ, ನಮ್ಮ ಸಹಪಾಠಿ; ಮಹದೇವನ್ ಅಂತ. ಅವನು ಇಂಗ್ಲಿಷ್ ಮೀಡಿಯಂ ಶಾಲೆಯಿಂದ ಬಂದವನು. ಬಹುಶಃ ಅದಕ್ಕೇ ಇರಬಹುದು ಆತ್ಮವಿಶ್ವಾಸ ಜಾಸ್ತಿ! ಘನಘೋರವಾಗಿ ತನ್ನ ವಾದಗಳನ್ನು ದೇವರು ಇದ್ದಾನೆ ಎಂದು ಸಾಧಿಸಲು – ಮಂಡಿಸಿದ. ನಾವೆಲ್ಲ ಸ್ತಂಭೀಭೂತರಾಗಿ ಕೂತು ಈ ಜಟಾಪಟಿಯನ್ನು ವೀಕ್ಷಿಸುತ್ತ – ಭಯಂಕರ ಗೊಂದಲದಲ್ಲಿ – ಕಣ್ಣುಕಣ್ಣು ಬಿಡುವುದಷ್ಟೇ ಸಾಧ್ಯವಾಯಿತು. ನಲವತ್ತೈದು ನಿಮಿಷದ ಅಂದಿನ ಪಾಠ ದೇವರು ಇದ್ದಾನೋ ಇಲ್ಲವೋ ಎಂಬ ಚರ್ಚೆಯಲ್ಲಿ ಕಳೆದುಹೋಯಿತು. ಮತ್ತೆ ನಮ್ಮ ತರಗತಿಯಲ್ಲಿ ಕಟ್ಟಾ ಆರ್.ಎಸ್.ಎಸ್. ಹುಡುಗರು ಒಂದಷ್ಟು ಇದ್ದರು. ಶರ್ಮರಿಗೆ ಅದು ಹೇಗೆ ಪತ್ತೆಯಾಯಿತೋ ಗೊತ್ತಿಲ್ಲ. ನನಗೆ ನೆನಪಿದ್ದಂತೆ ಮೊದಲ ದಿನದಿಂದಲೂ ಆ ಹುಡುಗರನ್ನು ಛೇಡಿಸುವುದು, ವಾದಕ್ಕೆ ಬರುವಂತೆ ಪ್ರಚೋದನಾತ್ಮಕವಾಗಿ ಮಾತನಾಡುವುದು, ಅವರನ್ನು ಕುರಿತು ಲಘುವಾಗಿ ಹಾಸ್ಯ ಮಾಡುವುದು, ಅವರ 'ಗುರೂಜಿ'ಯನ್ನು ಕುರಿತು ತಮ್ಮ ವಿಮರ್ಶಾತ್ಮಕ ಟೀಕೆ ಹರಿಬಿಡುವುದು ಎಲ್ಲವನ್ನೂ ಎಗ್ಗಿಲ್ಲದೆ ನಡೆಸುತ್ತಿದ್ದರು. ಆದರೆ ಎಂದೂ ಆ ಹುಡುಗರನ್ನು ತಿರಸ್ಕಾರದಿಂದಾಗಲೀ ಅಥವಾ ವ್ಯಂಗ್ಯಗಳಿಂದಾಗಲೀ ಚುಚ್ಚುತ್ತಿರಲಿಲ್ಲ. ತಮ್ಮ ವಿರೋಧವನ್ನು ಅತ್ಯಂತ ಸ್ಪಷ್ಟವಾಗಿ, ಅವರುಗಳ ಪ್ರತಿಕ್ರಿಯೆಗೂ ಅವಕಾಶ ಮಾಡಿಕೊಡುವಂತೆ ಮಾಡುತ್ತಿದ್ದರು. ೧೯೪೯ರಲ್ಲಿ ಆರ್.ಎಸ್.ಎಸ್. ಕುರಿತಾದ ಭಾವನೆಗಳು ಜನಸಾಮಾನ್ಯರಲ್ಲಿ ಹೇಗಿತ್ತು ಎಂದು ನಾನು ವರ್ಣಿಸಬೇಕಿಲ್ಲ. ಒಂದು ಕಡೆ ದ್ವೇಷ, ಇನ್ನೊಂದು ಕಡೆ ಭಯ. ಭಯ ಏಕೆಂದರೆ ಆರ್.ಎಸ್.ಎಸ್. ಆಗಲೆ ನಿಷೇಧಗೊಂಡಿದ್ದ ಸಂಘಟನೆ. ಅಂಥವುಗಳ ಬಗ್ಗೆ ಮಾನಾಡುವುದು ಎಂದರೆ ಕೊಂಚ ಆತಂಕ, ನಡುಕ. ಅಂತಹುದರಲ್ಲಿ ಶರ್ಮರು ನಿರಾತಂಕವಾಗಿ ಆ ಸಂಘಟನೆಯನ್ನು, ಅದರ ವಿಚಾರಧಾರೆಯನ್ನು, ಕೋಮುವಾದೀ ಸಿದ್ಧಾಂತವನ್ನು ನವಿರಾಗಿ, ಆದರೆ ಸಮರ್ಥವಾಗಿ ಖಂಡಿಸುತ್ತಿದ್ದರು. ಆ ಆರ್.ಎಸ್.ಎಸ್. ಹುಡುಗರೇನು ಕಡಿಮೆ ಇರಲಿಲ್ಲ. ಅವರೂ ಜಗಳಕ್ಕೆ ಇಳಿಯುತ್ತಿದ್ದರು. ಆಲ್ಜೀಬ್ರಾ ಪಾಠ ಹೇಳಬೇಕಾದ ವೇಳೆಯಲ್ಲಿ ಶರ್ಮರು ನಮಗೆ ಒಂದಷ್ಟು ನಡುಕ, ಒಂದಷ್ಟು

ಗೊಂದಲಗಳನ್ನು ಸೃಷ್ಟಿಮಾಡುತ್ತಲೇ ಸ್ವತಂತ್ರ ನಾಡಿನಲ್ಲಿ ಜಾತ್ಯತೀತ ತತ್ವದ ಮಹತ್ವದ ಕುರಿತಾಗಿ ಪಾಠ ಹೇಳುತ್ತಿದ್ದರು. ನನ್ನ ಪ್ರಜ್ಞೆಯಾಳದಲ್ಲಿ ಈ ಮೌಲ್ಯಗಳ ಬೀಜಗಳನ್ನು ಬಹು ಸಮರ್ಥವಾಗಿ ನೆಟ್ಟವರು ಶರ್ಮರು. ಮನುಷ್ಯ ಮನುಷ್ಯನಷ್ಟೇ; ಅವನು ಕೇವಲ ಜಾತಿಯಲ್ಲ, ಧರ್ಮವಲ್ಲ, ಭಾಷೆಯಲ್ಲ ಎಂಬ ಮೂಲಭೂತ ಸತ್ಯ ಬಹು ಸ್ಪಷ್ಟವಾಗಿ ಆಗಲೇ ಅರ್ಥವಾಗಿಬಿಟ್ಟಿತು ಎಂದು ನಾನು ಹೇಳುವುದಕ್ಕಾಗುವುದಿಲ್ಲ – ನಮಗೆ ದೂರದ ಮಿಂಚುಗಳ ಹಾಗೆ ಅವು ಹೊಳೆಯುವಂತೆ ಮಾಡಿದವರು ಅವರು.

ಇಲ್ಲಿ ಇನ್ನೊಂದು ವಿಷಯವನ್ನು ನಾನು ಹೇಳಲೇಬೇಕು. ಆ ಶಾಲೆ ಮತ್ತು ವಿಜಯ ಕಾಲೇಜು ಇವುಗಳ ಸಂಸ್ಥಾಪಕರೂ ಹಾಗೂ ಕಾಲೇಜಿನ ಅಂದಿನ ಪ್ರಿನ್ಸಿಪಾಲರೂ ಆಗಿದ್ದವರು ನಮ್ಮ ತಾತ ಅಂದಿನ ದಿನಗಳಲ್ಲಿ ಖ್ಯಾತನಾಮರಾಗಿದ್ದ ರಾವ್ ಬಹದ್ದೂರ್ ಪ್ರೊ|| ಬಿ. ವೆಂಕಟೇಶಾಚಾರ್ಯರು. ಅವರ ಮೊಮ್ಮಗನಾದ ನಾನು ತರಗತಿಯಲ್ಲಿ ಕೂತಿದ್ದೇನೆ ಎಂಬುದೂ ಶರ್ಮರಿಗೆ ತಿಳಿದಿತ್ತು. ಆದರೂ ಒಂದಿಷ್ಟೂ ಅದನ್ನು ತಲೆಗೆ ಹಚ್ಚಿಕೊಳ್ಳದೆ ಒಂದಿಷ್ಟೂ ಅಳುಕದೆ ತರಗತಿಯಲ್ಲಿ ದೇವರು, ದೇಶ, ಧರ್ಮ ಎಂಬುದನ್ನೆಲ್ಲ ನೇರವಾಗಿ, ವಿವಾದಾತ್ಮಕವಾಗಿ, ಅಸಾಂಪ್ರದಾಯಿಕವಾಗಿ ಮಾತನಾಡುವ ಅವರ ರೀತಿಯನ್ನೇನೂ ಅವರು ಬದಲಿಸಿಕೊಳ್ಳುತ್ತಿರಲಿಲ್ಲ. ಇಷ್ಟು ವರ್ಷಗಳ ಮೇಲೆ ಆ ಕುರಿತು ಯೋಚಿಸಿದಾಗ ನನಗೆ ಅವರ ಬಗ್ಗೆ ಮತ್ತು ಅಷ್ಟು ಮೆಚ್ಚುಗೆ, ಗೌರವಗಳು ಹುಟ್ಟುತ್ತವೆ.

ಒಂದು ಬಾರಿ ಪರೀಕ್ಷೆ ನಡೆದು ಉತ್ತರ ಪತ್ರಿಕೆಗಳನ್ನು ವಿದ್ಯಾರ್ಥಿಗಳಿಗೆ ಹಿಂದಿರುಗಿಸುತ್ತಿದ್ದರು. ಅಂಕಗಳು ತೆಗೆದುಕೊಂಡ ರೀತಿಯನ್ನು ಅವಲಂಬಿಸಿ ಟೀಕಿಸುವುದು, ಬೈಯುವುದು ಎಲ್ಲ ಮಾಡುತ್ತಿದ್ದರು. ಆದರೆ ಒಂದು ಉತ್ತರ ಪತ್ರಿಕೆಯನ್ನು ಮಾತ್ರ ಎರಡು ಗಳಿಗೆ ದಿಟ್ಟಿಸಿ ವೇದಿಕೆಯಿಂದ ದಡದಡ ಇಳಿದು ಬಂದು ನಮ್ಮ ಆರ್.ಎಸ್.ಎಸ್. ಸಹಪಾಠಿ ಕುಳಿತಿದ್ದ ಜಾಗಕ್ಕೆ ಬಂದು ಅವನ ಕೈ ಹಿಡಿದೆತ್ತಿ ''ಆರ್.ಎಸ್.ಎಸ್-ಲ್ಲಿ'' ಎಂದು ದೊಡ್ಡ ಗಂಟಲಲ್ಲಿ ಘೋಷಿಸಿ ವೇದಿಕೆಗೆ ಹಿಂತಿರುಗಿದರು. ಮೂರು ನಾಲ್ಕು ಪತ್ರಿಕೆಗಳ ನಂತರ ನನ್ನ ಪತ್ರಿಕೆ. ಹತ್ತಿರ ಕರೆದರು. ಕಿವಿಯಲ್ಲಿ ಉಸಿರಿದರು : ''ಹೇಳ್ಲಾ ನಿಮ್ಮ ತಾತಂಗೆ ?'' ಅಂದರು. ನನಗೆ ಇಪ್ಪತ್ತೋ ಇಪ್ಪತ್ತೈದೋ ಬಂದಂತೆ ನೆನಪು. ಅಲ್ಲಿ ಕಿಟಕಿಯಾಚೆ ನೋಡಿದರೆ ನಮ್ಮ ತಾತ ಕಾಲೇಜಿನ ಭೌತಶಾಸ್ತ್ರ ಪ್ರಯೋಗಾಲಯದ ಮುಂದೆ ಠಳಾಯಿಸುತ್ತಿದ್ದರು. ನನಗೆ ಎದೆ ಝಲ್ ಎಂದಿತು. ಸುಮ್ಮನೆ ನಿಂತುಬಿಟ್ಟೆ. ಪೇಪರ್ ಕೈಗೆ ಕೊಟ್ಟು ಕಳಿಸಿದರು. ಈ ಘಟನೆ ನೆನಪಾದ ಹಾಗೆಲ್ಲ ''ನೀವು ತರಗತಿಯಲ್ಲಿ ಮಾಡುವುದನ್ನೆಲ್ಲ ನಾನು ಹೇಳಲಾ ?'' ಎಂದು ಕೇಳಿ ಅವರ ಎದೆ ಝಲ್ ಎನ್ನಿಸಬೇಕಿತ್ತು ಎಂದು ಈಗ ಅನ್ನಿಸುತ್ತದೆ. ಆದರೆ ಆಗ ಮೈನಡುಕ ಮಾತ್ರ ಸಾಧ್ಯವಾಗಿದ್ದು.

ಇದ್ದಕ್ಕಿದ್ದಹಾಗೆ ನಾವು ಎರಡನೇ ವರ್ಷದಲ್ಲಿದ್ದಾಗ ಬೆಳಿಗ್ಗೆ ಶಾಲೆಗೆ ಹೋದರೆ ''ಶರ್ಮರು ಹೋಗಿಬಿಟ್ಟರಂತೆ'' ಎಂಬ ಸುದ್ದಿ ಹಬ್ಬಿಬಿಟ್ಟಿದೆ. ಅಂದಿನ ದಿನವೂ ಮೋಡಗಟ್ಟಿ ಮಂಕಾಗಿ ಕಾಣುತ್ತಿತ್ತು. ಸುತ್ತಲೂ ನೋಡಿದರೆ ಎಲ್ಲರೂ ಮಂಕಾಗಿ ಕಾಣುತ್ತಿದ್ದರು. ಆದರೂ ಶಾಲೆ ಬೆಲ್ಲಾಯಿತು. ಮೊದಲ ಪೀರಿಯಡ್ ಮೇಷ್ಟರು ಬಂದರು. ಅವರೂ ನಮಗೆ ಮಂಕಾಗಿ ಕಂಡರು. ಪಾಠ ಆರಂಭಿಸಿದರು. ಇನ್ನೇನು ಈ ಕ್ಷಣ, ಮರುಕ್ಷಣ ಶರ್ಮರ ವಿಷಯ ಮೇಲೆ ಬರುತ್ತದೆ ಎಂದು ಭಾರವಾದ ಹೃದಯಗಳಿಂದ ಕಾಯುತ್ತ ಇದ್ದೆವು ನಾವು. ಮೇಷ್ಟರು ನನ್ನನ್ನು ಕರೆದು ''ಹೋಗಿ ಒಂದೆರಡು ಚಾಕ್ ಪೀಸ್ ತೆಗೆದುಕೊಂಡು ಬಾ'' ಎಂದು ಕಳಿಸಿದರು. ನಾನು ಭಾರವಾದ ಹೆಜ್ಜೆಗಳನ್ನಿಡುತ್ತ ಆಫೀಸ್ ರೂಮಿಗೆ ನಡೆದೆ. ಅಲ್ಲಿ ನೋಡಿದರೆ ಇಡೀ ಒಂದು ಮೇಜಿನ ಹಿಂದೆ ಕುರ್ಚಿಯಲ್ಲಿ ವಿರಾಜಮಾನರಾಗಿ ಗಂಭೀರವಾಗಿ, ಏಕಾಗ್ರಚಿತ್ತದಿಂದ ಏನನ್ನೋ ಬರೆಯುತ್ತಿದ್ದಾರೆ ನಮ್ಮ 'ದಿವಂಗತ' ಶರ್ಮರು ! ನಾನು ಒಳಗೆ ಕಾಲಿರಿಸುತ್ತಿದ್ದಂತೆ ತಲೆ ಎತ್ತಿ ''ಏನೋ ನಿನಗೂ ಗೊತ್ತಾಗಿತ್ತಾ ನಾನು ಸತ್ತುಹೋಗಿದ್ದೆ!'' ಅಂತ ಎಂದು ವಿಚಾರಿಸಿದರು. ತಬ್ಬಿಬ್ಬಾಗಿಹೋಗಿ ಪೆಚ್ಚುಪೆಚ್ಚಾಗಿ ನಕ್ಕು – ಇಡೀ ಪ್ರಸಂಗ ಹೀಗೆ ಧಸಕ್ಕೆಂದು ಕುಸಿದದ್ದಕ್ಕೆ ಒಳಗೆ ನಿರಾಶೆಯೂ ಆಯಿತೊ ಏನೋ - ಮರಳಿದೆ. ''ಶರ್ಮರು ಸತ್ತಿಲ್ಲ, ಇನ್ನೂ ಜೀವಂತ ಇದ್ದಾರೆ'' ಎಂದು ಸತ್ಯ ಕಂಡುಕೊಂಡ ಮೊದಲಿಗನಾಗಿ ತರಗತಿಯಲ್ಲಿ ಪಿಸುಪಿಸು ದನಿಗಳಲ್ಲಿ ಇಡೀ ತರಗತಿಗೆ ಪ್ರಸಾರ ಮಾಡಿದೆ.

ಮೂರನೇ ಮತ್ತು ಕೊನೆಯ ವರ್ಷದಲ್ಲಿದ್ದಾಗ ನಮಗೆ ಜಾಮೆಟ್ರಿ ಹೇಳಿಕೊಡುತ್ತಿದ್ದರು. ಒಂದು ದಿನ ತರಗತಿಗೆ ಬಂದು ಕಪ್ಪು ಹಲಗೆಯ ಮೇಲೆ 'ಪಿಂಡಗಳ ಚರಿತ್ರೆ' ಎಂದು ಬರೆದು ನಮ್ಮತ್ತ ನೋಡಿದರು. ನಮಗೇನು ನಗಬೇಕೋ, ಸುಮ್ಮನೆ ಗಂಭೀರವಾಗಿ ಕೂತಿರಬೇಕೋ ಗೊತ್ತಾಗದೇ ಕೊಂಚ ಮಿಸುಕಾಡಿದೆವು. ಅತ್ಯಂತ ಕಠೋರ ಸಂಪ್ರದಾಯಸ್ಥ ಬ್ರಾಹ್ಮಣ ಮನೆಗೆ ಸೇರಿದ ನಮ್ಮಂಥವರಿಗೆ ಅನುಭವದ ಮೂಲಕವೇ ಗೊತ್ತಿತ್ತು – ಪಿಂಡ, ವಡೆ, ರವೆಪಾಯಸ ಅಂತೆಲ್ಲ ಬಾಯಿತಪ್ಪಿ ಉಸುರಿಬಿಟ್ಟರೆ ಅಂದು ನಮಗೆ ತಿಥಿ ಖಂಡಿತ ಎಂದು. ಅಂತಹುದರಲ್ಲಿ ಈ ಮನುಷ್ಯ 'ಪಿಂಡಗಳ ಚರಿತ್ರೆ'ಯನ್ನೇ ಬಿಡಿಸಿ ಹೇಳುವವರಿದ್ದಾರೆ ಎಂದು ನನಗಂತೂ ಭಯಂಕರ ಗೊಂದಲ ಕೈಕೊಟ್ಟುಕೊಂಡಿತು. ಹಾಗೆ ಬರೆದು ಕೆಳಗೆ ಎರಡು ಸರ್ಕಲ್‌ಗಳನ್ನೂ ಬಿಡಿಸಿದರು. 'ಇವೇ ಪಿಂಡಗಳು' ಎಂದಂದು ಪಾಠ ಆರಂಭಿಸಿದರು ! ಒಂದು ದಿನ ತರಗತಿಗೆ ಬಂದು ಹಾಜರಾತಿ ತೆಗೆದುಕೊಂಡು 'I think I had given a couple of problems' ಅಂದರು. ನಾನು ಅತ್ಯುತ್ಸಾಹದಿಂದ 'ಎರಡೇ ಸಾರ್' ಅಂದೆ. ಸುತ್ತಮುತ್ತ ಕಿಸಿಕಿಸಿ ನಕ್ಕ ಹಾಗೆ ಕಂಡಿತು. 'ಹೊಟ್ಟೆಯುರಿ ಮುಂಡೇಗಂಡರಿಗೆ' ಅಂತಂದುಕೊಂಡು ಮೇಷ್ಟರ ಕಡೆ ತಿರುಗಿದರೆ ನನ್ನ ಜನ್ಮದಲ್ಲೇ ಅವರ ಮುಖದ ಮೇಲೆ ನೋಡಿರದಂಥ ಮರುಕದ, ಅನುಕಂಪದ ಭಾವ ಕಂಡು ಗಲಿಬಿಲಿಗೊಂಡೆ. ಒಂದು ಅರೆಕ್ಷಣದ ನಂತರ ಮೇಷ್ಟರು ತಮ್ಮ ಎರಡು ಬೆರಳುಗಳನ್ನೂ ಎತ್ತಿ ಹಿಡಿದು 'couple means two' ಎಂದ ರೀತಿಯಲ್ಲಿ ''ನೀನು ಉದ್ಧಾರವಾಗುವುದು ಬಹಳ ಅನುಮಾನಾಸ್ಪದ''ಎಂಬ ತಮ್ಮ ಒಳದನಿಯನ್ನು ಸೇರಿಸಿದ ಹಾಗೆ ಕಂಡಿತು. ನಮ್ಮ ಮನೆಯಲ್ಲಿ ಮಧ್ವಸಿದ್ಧಾಂತವನ್ನು ಪ್ರಚಾರ ಮಾಡಲು ಮಧ್ವಾಚಾರ್ಯರು ಪಟದಲ್ಲಿ ಎತ್ತಿಹಿಡಿದ ಎರಡು ಕೈಬೆರಳುಗಳನ್ನು ಕಂಡ ಮೇಲೆ ಶರ್ಮರು 'couple means two' ಎಂದು ಸ್ಪಷ್ಟವಾಗಿ ನನ್ನ ತಲೆಗೆ ಹೋಗಲೆಂದು ಎರಡು ಕೈಬೆರಳುಗಳನ್ನು ಎತ್ತಿಹಿಡಿದಾಗಲೇ ಮತ್ತೆ ಕಂಡಿದ್ದು. ಮಧ್ವ ಸಿದ್ಧಾಂತವಂತೂ ತಲೆಗೆ ಹೋಗಲಿಲ್ಲ ಆದರೆ couple means two ಮಾತ್ರ ಉಳಿ ತೆಗೆದುಕೊಂಡು ಕೆತ್ತಿದ ಹಾಗೆ ಮನಸ್ಸಿನಲ್ಲಿ ಉಳಿದುಬಿಟ್ಟಿದೆ.

ನಮ್ಮ ಮನೆಗಳಲ್ಲಿ ಯಾವ ಯಾವುದನ್ನು ಶಿಸ್ತು, ಸನ್ನಡತೆ, ಆಚಾರ, ಸಂಪ್ರದಾಯ ಎಂದು ಕಲಿಸಿದ್ದರೋ ಅವಕ್ಕೆಲ್ಲ ತದ್ವಿರುದ್ಧವಾಗಿ ಶರ್ಮರು ನಡೆದುಕೊಳ್ಳುತ್ತಿದ್ದರು. ಶಾಲೆಯ ಹೊರಗಿನ ಪ್ರಾಂಗಣದಲ್ಲಿ ನಿಂತು ಸಿಗರೇಟು ಸೇದುತ್ತಿದ್ದರು. ತರಗತಿಯಲ್ಲಿ ಲೆಕ್ಕ ಮಾಡಲು ನಮಗೆ ಹೇಳಿ ತಾವು ಕಿಟಕಿಯ ಬಳಿ ನಿಂತು ಒಂದು ಕಾಲು ಬೆಂಚಿನ ಮೇಲೆ ಇಟ್ಟು ಸಣ್ಣದಾಗಿ ಸಿಳ್ಳೆ ಹಾಕುತ್ತ, ಬೆಟ್ಟು ಕಚ್ಚುತ್ತಾ ಹೊರಗೆ ಹೋಗಿ ಬರುವವರನ್ನೆಲ್ಲ ನೋಡುತ್ತ ನಿಂತಿರುತ್ತಿದ್ದರು. ಬಹುಶಃ ಅವರ ಈ 'ಹಾದಿ ತಪ್ಪಿದ' ನಡತೆಗಳಿಗಾಗಿಯೇ ನನಗೆ ಅವರು ಗುಟ್ಟಾಗಿ ಆಪ್ತರೂ, ಆಕರ್ಷಕರೂ ಆಗಿ ಬರಬರುತ್ತ ಒಂದು ಬಗೆಯ ಹೀರೋ ಕೂಡ ಆಗಿಬಿಟ್ಟರು. ಈ ಶರ್ಮರು ಆಕರ್ಷಕರಾಗಿದ್ದು ಈ ಕಾರಣಗಳಿಗಾಗಿ ಮಾತ್ರವಲ್ಲ, ಅವರು ತರಗತಿಯಲ್ಲಿ ಇದ್ದಕ್ಕಿದ್ದಂತೆ ಹೇಳುತ್ತಿದ್ದ ಯಾವುದಾದರೂ ಸಂಗತಿ, ಪರಿಚಯಿಸುತ್ತಿದ್ದ ಲೇಖಕ, ಅತ್ಯಂತ ಕಳಕಳಿಯಿಂದ ಮಾತನಾಡುತ್ತಿದ್ದ ಸಾಮಾಜಿಕ ಸ್ಥಿತಿಗತಿಗಳು ಇವುಗಳು ನಮ್ಮನ್ನು ಅವರ ವ್ಯಕ್ತಿತ್ವದತ್ತ ಸೆಳೆದುಬಿಡುತ್ತಿತ್ತು. ಒಮ್ಮೆ ನಮ್ಮ ಶಾಲೆಯ ಮುಸ್ಲಿಂ ಹುಡುಗರು ಅವರ ಧರ್ಮದ ಸಂಬಂಧವಾದ ಒಂದು ಸಮಾರಂಭ ಏರ್ಪಡಿಸಿದ್ದರು. ಶರ್ಮರೂ ಒಬ್ಬ ಭಾಷಣಕಾರರು. ನಾವುಗಳೆಲ್ಲ ಏನೋ ತಮಾಷೆಯಾಗಿ ನಾಲ್ಕು ಮಾತನಾಡಿ ಎಲ್ಲರನ್ನೂ ನಗಿಸುತ್ತಾರೆ ಎಂದು ಕಾದಿದ್ದೆವು. ಅಂದು ಅವರು ಧರಿಸಿದ್ದ ಉಡುಪೂ ಕೂಡ ನನಗೆ ನೆನಪಿದೆ. ನಿತ್ಯದ ಉಡುಪುಗಳಲ್ಲದ ಬಿಳಿ ಪೈಜಾಮಾ, ಬಿಳೀ ಷರಟು ಮತ್ತು ಕ್ರಿಕೆಟ್ ಆಟಗಾರರು ಬಳಸುವ ಬಿಳಿ ಸ್ವೆಟರ್. ವೇದಿಕೆಗೆ ಬಂದು ಅತ್ಯಂತ ಗಂಭೀರವಾಗಿ ಹತ್ತು ಹದಿನೈದು ನಿಮಿಷ ಮಾತನಾಡಿದರು. ಇಸ್ಲಾಂ ಧರ್ಮದ ಬಗ್ಗೆ, ಮನುಷ್ಯ ಕುಲದ ಬಗ್ಗೆ, ನೀತಿ, ಸಹಿಷ್ಣುತೆಗಳ ಬಗ್ಗೆ, ಭಾರತ ಹೇಗೆ ಅತ್ಯಂತ ವಿಶಿಷ್ಟ ನಾಗರಿಕತೆ, ಸಂಸ್ಕೃತಿಗಳ ನಾಡು ಎಂಬುದರ ಬಗ್ಗೆ. ಮಾತನಾಡಿ 'ಇಂಥವುಗಳನ್ನೇ ಕಲಿಸಿದ ಅನೇಕ ಮಹಾನ್ ಪುರುಷರಲ್ಲಿ ಒಬ್ಬರಾದ ಮಹಮದ್ ಪೈಗಂಬರನಿಗೆ ನನ್ನ ಗೌರವ ಪೂರ್ವಕ ನಮಸ್ಕಾರಗಳು' ಎಂದು ಮುಕ್ತಾಯ ಮಾಡಿದರು. ಇಡೀ ಸಭೆ ಸ್ತಬ್ಧವಾಗಿ ಅವರ ಮಾತುಗಳನ್ನು ಕೇಳಿತು.

ಒಂದು ದಿವಸ ಯಾರೋ ಮೇಷ್ಟರು ರಜಾ ಇದ್ದುದರಿಂದ ಶರ್ಮರು ಎಕ್ಸ್‌ಟ್ರಾ ಕ್ಲಾಸ್ ತೆಗೆದುಕೊಳ್ಳಬೇಕಾಯಿತು. ''ಏನು ಮಾಡೋಣ್ರಯ್ಯ'' ಅಂದರು. ತರಗತಿಯಲ್ಲಿ ಯಾರೋ ಒಬ್ಬ ವಿದ್ಯಾರ್ಥಿ ''ಸಾರ್, ನೀವು ಈಚೆಗೆ ತಾನೆ ಬರೆದು ಮುಗಿಸಿದ ನಾಟಕ 'ಬಾಳಸಂಜೆ' ನಮಗೆ ಓದಿ ಸಾರ್'' ಅಂದ. ಶರ್ಮರು ಸಂತೋಷದಿಂದ ಒಪ್ಪಿಕೊಂಡರು. ೧೮೫೭ರ ಮೊದಲ ಸ್ವಾತಂತ್ರ್ಯ ಸಂಗ್ರಾಮ ಎಂದೇ ಖ್ಯಾತಿ ಪಡೆದ ಸಿಪಾಯಿದಂಗೆಯ ಕುರಿತಾದ ನಾಟಕ, 'ಬಾಳಸಂಜೆ'. ಓದುವುದಕ್ಕೆ ಮುಂಚೆ ಒಂದು ಮಾತು ಹೇಳಿದರು – ವಿಶೇಷವಾಗಿ ಆರ್.ಎಸ್.ಎಸ್. ಹುಡುಗರನ್ನೇ ಉದ್ದೇಶಿಸಿ, ''ಸಾವರ್ಕರ್ ಬಗ್ಗೆ ನನ್ನ ನೂರು ಜಗಳಗಳಿವೆ, ಆದರೆ ಅವರು ಬರೆದ ೧೮೫೭, ದಿ ಫರ್ಸ್ಟ್ ವಾರ್ ಆಫ್ ಇಂಡಿಪೆಂಡೆನ್ಸ್ ಕೃತಿಗಾಗಿ ನಾನು ಕೃತಜ್ಞತೆ ಹೇಳಲೇಬೇಕು. ಈ ನಾಟಕ ಬರೆಯುವುದಕ್ಕೆ ಆ ಪುಸ್ತಕ ತುಂಬ ಸಹಕಾರಿಯಾಯಿತು'' ಎಂದು ಹೇಳಿ

೧೬ನೇ ಪುಟಕ್ಕೆ

# ರಾಷ್ಟ್ರೀಯತೆ-ಪ್ರಾದೇಶಿಕತೆ ಶ್ರಮಿಕರ ಧ್ವನಿ

ರವಿ ರಾ. ಅಂಚನ್

ಅನನ್ಯತೆಯ ನೆಲೆಯಲ್ಲಿ ಪ್ರಾದೇಶಿಕತೆಯ ಒಡಲಿನಿಂದ ರಾಷ್ಟ್ರೀಯತೆ ವಿನ್ಯಾಸಗೊಂಡರೆ ಅದು ಸಂಸ್ಕೃತಿಯ ಒಂದು ಭಾಗವಾಗುತ್ತದೆ. ಇಲ್ಲಿ ಸಂಸ್ಕೃತಿ ಎನ್ನುವಾಗ ಅದರ ಮೂಲನೆಲೆ ಶ್ರಮಿಕರ ಬೆವರು ಮತ್ತು ಬುದ್ಧಿಯನ್ನು ಆವರಿಸಿಕೊಂಡು ಬೆಳೆಯುವ ಸಂಸ್ಕೃತಿ. ಇದು ಕೇವಲ ಬುದ್ಧಿಯ ಕಸರತ್ತಿಗೆ ಸೀಮಿತವಾದ ಹುಸಿ ಸಂಸ್ಕೃತಿಯಲ್ಲ. ಬೆವರು ಮತ್ತು ಬುದ್ಧಿಯ ಬಲದಿಂದ ಬೆಳೆಯುವ ಸಂಸ್ಕೃತಿಯಲ್ಲಿ ಸ್ವಾತಂತ್ರ್ಯ, ಸಮಾನತೆ, ಸಹಬಾಳ್ವೆ ಇತ್ಯಾದಿ ಮಾನವೀಯ ಮೌಲ್ಯಗಳು ಜೊತೆಯಾಗಿ ಸಾಗುತ್ತಿದ್ದು; ಇದೇ ನಮ್ಮ ಆಧುನಿಕ ಪರಿಕಲ್ಪನೆಯಾದ ರಾಷ್ಟ್ರೀಯತೆಯ ಗುರಿ ಮತ್ತು ದಾರಿಯಾಗಿ ಸಮುದಾಯ ಶಕ್ತಿಯನ್ನು ಹೆಚ್ಚಿಸುತ್ತದೆ. ಈ ಸಮುದಾಯ ಶಕ್ತಿಯೇ ಸ್ವಾಭಿಮಾನಿ ರಾಷ್ಟ್ರದ ನಿರ್ಮಾಣಕ್ಕೆ ಪೂರಕವಾಗುತ್ತದೆ. ಸಮುದಾಯಕ್ಕೆ ಶಕ್ತಿ ನೀಡುತ್ತಾ, ಶ್ರಮಿಕರು ಸೃಜನಾತ್ಮಕವಾಗಿ ಕಟ್ಟುವ ಸಂಸ್ಕೃತಿಯಲ್ಲಿ ಪ್ರಗತಿಪರ ಮುನ್ನಡೆ ಸಾಧ್ಯವಾಗುತ್ತದೆ.

ಶ್ರಮವೇ ಸಂಸ್ಕೃತಿ ಎಂಬ ಗ್ರಹಿಕೆಯಲ್ಲಿ 'ಬುದ್ಧಿ' ಶ್ರಮದ ಭಾಗವಾಗುತ್ತದೆಯೇ ವಿನಾ ಅದೇ ಸಂಸ್ಕೃತಿಯಾಗಲಾರದು. ಬುದ್ಧಿಯೇ ಸಂಸ್ಕೃತಿ ಎಂಬ ಭ್ರಮೆ ನಿರ್ಮಾಣವಾಗುವುದು ಪಾಳೆಯಗಾರೀ ಪರಂಪರೆಯ ಊಳಿಗಮಾನ್ಯ ವ್ಯವಸ್ಥೆಯಲ್ಲಿ. ಇಂತಹ ವ್ಯವಸ್ಥೆಯಲ್ಲಿ ಸಮುದಾಯದ ಶ್ರಮ ಕೆಲವರಿಗೆ ಮಾತ್ರ ಅಧಿಕಾರ ಮತ್ತು ಸವಲತ್ತುಗಳನ್ನು ನೀಡುತ್ತದೆ. ಇದರಿಂದ ಆನುವಂಶಿಕ ಅಹಂಕಾರ ಅಧಿಕಾರ ಸ್ತರದಲ್ಲಿ ಜಾಗ್ರತವಾಗಿ ಅವರು ತಮ್ಮ ಅಧಿಕಾರದ ಆನುವಂಶಿಕ ನಿರಂತರತೆಯನ್ನು ಉಳಿಸಿಕೊಳ್ಳಲು ಮಾನವೀಯ ಮೌಲ್ಯಗಳನ್ನೇ ಧಿಕ್ಕರಿಸಿ ಸಮುದಾಯದ ಸ್ವಾತಂತ್ರ್ಯವನ್ನೇ ಕಸಿದುಕೊಳ್ಳುವ ಅಮಾನವೀಯ ಸಂಸ್ಕೃತಿಗೆ ಚಾಲನೆ ನೀಡುತ್ತಾರೆ. ಈ ಅಮಾನವೀಯ ಸಂಸ್ಕೃತಿಯ ವಕ್ತಾರರಿಂದ ಪ್ರತಿಪಾದಿಸಲ್ಪಡುವ ರಾಷ್ಟ್ರೀಯತೆಯಲ್ಲಿ 'ವೈವಿಧ್ಯತೆಯಲ್ಲಿ ಏಕತೆ' ಎನ್ನುವ ಮಾತು ಕೇವಲ 'slogan' ಮಟ್ಟಕ್ಕೆ ಮಾತ್ರ ಸೀಮಿತವಾಗಿರುತ್ತದೆ. 'ಸ್ಲೋಗನ್' ಪರಂಪರೆಯ ಅಂತರಂಗದಲ್ಲಿ ಶ್ರಮಿಕರ ಧ್ವನಿಯನ್ನು ನಿಯಂತ್ರಿಸುವ ಮತ್ತು ಅದರ ಅನನ್ಯತೆಯನ್ನು ರಾಷ್ಟ್ರವಾದದ ಹೆಸರಿನಲ್ಲಿ ನಾಶ ಮಾಡುವ ತಂತ್ರಗಾರಿಕೆ ಇರುತ್ತದೆ. ಮನುಷ್ಯರ ಗುಲಾಮೀಕರಣವೇ ಯಾವತ್ತೂ 'ಬುದ್ಧಿ'ಚಾಲಿತ ಅಮಾನವೀಯ ಸಂಸ್ಕೃತಿಯ ಮನೋಧರ್ಮ. ಕೇವಲ ಬುದ್ಧಿಚಾಲಿತ ಶ್ರಮರಹಿತ ಮನೋಧರ್ಮ ಆನುವಂಶಿಕ ಅಧಿಕಾರ ಮತ್ತು ಸವಲತ್ತಿನ ರಕ್ಷಣೆಗಾಗಿ ಯಾರ ಜೊತೆಯಲ್ಲೂ ಯಾವುದೇ ರೀತಿಯಲ್ಲಿ ಒಡಂಬಡಿಕೆ ಮಾಡಿಕೊಳ್ಳಲು ಮುಜುಗರ ಪಡಲಾರದು; ತನ್ನ ಹಿತಾಸಕ್ತಿಗಾಗಿ ಪ್ರಜಾಪ್ರಭುತ್ವ-ಗಣತಂತ್ರ ವ್ಯವಸ್ಥೆಯ ಬೇರುಗಳನ್ನು ಕಿತ್ತೆಸೆಯಲು ಇದು ಹೇಸದು. ಅಂದಿನ ಭಾರತದ 'ಜನತಾಪಕ್ಷ' ಇಂದಿನ ಎನ್‌ಡಿಎ-ಯುಪಿಎ ಪ್ರಯೋಗಗಳಲ್ಲಿ ಶ್ರಮಸಂಸ್ಕೃತಿಯ ಕಾಳಜಿ - ಅಮಾನವೀಯ ಬುದ್ಧಿಚಾಲಿತ ಸಂಸ್ಕೃತಿಯ ಹಿತಾಸಕ್ತಿಯ ಒತ್ತಾಸೆ ಎರಡಕ್ಕೂ ಸಾಕಷ್ಟು ನಿದರ್ಶನಗಳಿವೆ. ಇದಕ್ಕೆ ಅಯೋಧ್ಯಾ-ಗೋಧ್ರಾ ಪ್ರಕರಣಗಳು ಕೇವಲ ಸ್ಯಾಂಪಲ್ ಮಾತ್ರ. ಇದಕ್ಕೂ ಹೆಚ್ಚಾಗಿ ನಮ್ಮ ಹೆಚ್ಚಿನ ರಾಜಕೀಯ ಪಕ್ಷಗಳು, ಸೇವಾ ಸಂಸ್ಥೆಗಳು ವಂಶವಾದಕ್ಕೆ ಬಲಿಯಾಗುತ್ತಾ ನಮ್ಮ ಪ್ರಜಾಪ್ರಭುತ್ವ-ಗಣತಂತ್ರ ಎರಡನ್ನೂ ಅಪಾಯದ ಅಂಚಿಗೆ ದೂಡುತ್ತಲಿವೆ. ಭಾರತೀಯ ಪ್ರಜಾಪ್ರಭುತ್ವ ಒಂದೆಡೆ ಒಳಗಿನಿಂದ ಆನುವಂಶಿಕತೆಯ ಬಂಧಿಯಾಗುತ್ತಿದ್ದರೆ ಇನ್ನೊಂದೆಡೆ ಜಾಗತೀಕರಣದ ಹೆಸರಿನಲ್ಲಿ ತನ್ನ ವೈವಿಧ್ಯಮಯ ಪ್ರಾದೇಶಿಕತೆ ಹಾಗೂ ರಾಷ್ಟ್ರೀಯತೆಯನ್ನೇ ಅಂತರರಾಷ್ಟ್ರೀಯ ಒತ್ತಡಕ್ಕೆ ಮಣಿದು ದುರ್ಬಲಗೊಳಿಸುತ್ತಿದೆ. ಶ್ರಮಿಕರ ಧ್ವನಿಯನ್ನು ಗುರುತಿಸದ, ಶ್ರಮಸಂಸ್ಕೃತಿಯ ನೆಲೆಗಳನ್ನು ಅರಿಯದ ರಾಷ್ಟ್ರಗಳು ಅತಂತ್ರ ನೆಲೆಗೆ ಹೇಗೆ ಸಾಗಬಲ್ಲವು ಎನ್ನುವುದಕ್ಕೆ ಅಫಘಾನಿಸ್ಥಾನ್-ಇರಾಕ್ ರಾಷ್ಟ್ರಗಳ ಇತ್ತೀಚಿನ ಪರಿಸ್ಥಿತಿ ಗಮನಾರ್ಹ ನಿದರ್ಶನದಂತಿದೆ. ಈ ಹಿನ್ನೆಲೆಯಲ್ಲಿ ಪ್ರಾದೇಶಿಕ ಆಶೋತ್ತರ, ರಾಷ್ಟ್ರೀಯ ಚಿಂತನೆಯನ್ನು ನಡೆಸಬೇಕಾದ ಸಮಯ ಇದಾಗಿದೆ. ಹಾಗೆ ನೋಡಿದರೆ ಸಮುದಾಯ ಚಿಂತನೆಯಲ್ಲಿ ರಾಷ್ಟ್ರೀಯತೆ ಎನ್ನುವ ಪರಿಕಲ್ಪನೆ ಕ್ರಿ.ಶ. ೧೮ನೆಯ ಶತಮಾನದ ಮಧ್ಯಭಾಗದಲ್ಲಿ ಮೊದಲಿಗೆ ಪಾಶ್ಚಿಮಾತ್ಯರ ನಾಡಿನಿಂದ ಧ್ವನಿಯಾಗುತ್ತದೆ. ಮೂಲದಲ್ಲಿ ಇದು ಶ್ರಮಿಕರ ಧ್ವನಿಯೇ ಆಗಿತ್ತು. ಕ್ರಿ.ಶ. ೧೭೮೯ರಲ್ಲಿ ನಡೆದ ಫ್ರೆಂಚ್ ಕ್ರಾಂತಿ ಅಲ್ಲಿಯ ರಾಜರ ದುರಾಡಳಿತಕ್ಕಿಂತಲೂ ಹೆಚ್ಚಾಗಿ ಸಾಮಾಜಿಕ, ಆರ್ಥಿಕ ಅಸಮಾನತೆಯ ವಿರುದ್ಧ ಸಿಡಿದ ಧ್ವನಿಯಾಗಿತ್ತು. ಇದರಲ್ಲಿ 'The nobles fight; the clergy pray; the people pay' ಎನ್ನುವ ಅಸಮಾನತೆಯ ಹಿಂದೆ ಶೋಷಣೆಯ ನೋವಿನಿಂದ ಬಿಡುಗಡೆ ಪಡೆಯುವ ಚಡಪಡಿಕೆಯೇ ಜನತೆಯ ಕ್ರಾಂತಿಯಾಯಿತು. ಅಧಿಕಾರದ ನೆಲೆಯನ್ನೂ, ಮತೀಯ ನೆಲೆಯನ್ನೂ ಧಿಕ್ಕರಿಸಿದ ಫ್ರೆಂಚ್ ಶ್ರಮಿಕರು ನೋವಿನ ನೆಲೆಯಿಂದ ಫ್ರೆಂಚ್ ರಾಷ್ಟ್ರವಾದಕ್ಕೆ ಜೀವ ತುಂಬಿದರು. ಅದೇ ರೀತಿ ಕ್ರಿ.ಶ. ೧೯೧೭ರಲ್ಲಿ ನಡೆದ ರಷ್ಯನ್ ಕ್ರಾಂತಿಯೂ "Long live the revolution of the workers, soldiers and peasants" ಎನ್ನುತ್ತಾ ಶ್ರಮಿಕರ ಧ್ವನಿಯನ್ನು ಎತ್ತಿಹಿಡಿಯಿತು. ಇಲ್ಲಿ ಚಿಗುರಿದ ರಷ್ಯನ್ ರಾಷ್ಟ್ರ ವಾದಕ್ಕೂ ಶೋಷಣೆಯ ನೋವೇ ನೆಲೆಯಾಗಿತ್ತು. ಆದರೆ ಭಾರತೀಯ ರಾಷ್ಟ್ರವಾದಕ್ಕೆ ಮಾತ್ರ ಕ್ರಿ.ಶ. ೧೯೨೦ರವರೆಗೆ ಹೆಚ್ಚಾಗಿ ಇಂತಹ ಹಿನ್ನೆಲೆ ಇರಲಿಲ್ಲ. ಇಲ್ಲಿ ರಾಷ್ಟ್ರವಾದ ಬೆಳೆದದ್ದು ನಗರದ ನೆಲೆಯಿಂದ. ಬ್ರಿಟಿಷ್ ವಸಾಹತುಶಾಹಿ ಪರಂಪರೆಯಲ್ಲಿ ತಮಗೂ ಭಾಗವಹಿಸುವ ಅವಕಾಶ ಬೇಕೆಂದು ಇಂಗ್ಲಿಷ್ ಶಿಕ್ಷಣ ಪಡೆದ ಭಾರತೀಯ ಜನವರ್ಗ ಧ್ವನಿಯೆತ್ತಿತು. ಹೆಚ್ಚಾಗಿ ಆರ್ಥಿಕ-ಸಾಮಾಜಿಕ ಮೇಲ್ಪದರಿನ ಜನವರ್ಗ ಇದಾಗಿತ್ತು. ಇದಕ್ಕೆ ಅಪವಾದವಾಗಿ ಮಹಾರಾಷ್ಟ್ರದ ಪುಣೆಯಿಂದ ಜ್ಯೋತಿಬಾ ಫುಲೆ ಮೊದಲ್ಗೊಂಡು ಕೆಲವರು ಶ್ರಮಿಕರ ಧ್ವನಿಯಾದದ್ದಿದೆ. ಏನಿದ್ದರೂ ನಮ್ಮ ರಾಷ್ಟ್ರೀಯವಾದ ಪ್ರಬಲವಾದದ್ದು ಗಾಂಧೀಜಿ ಇಲ್ಲಿಯ ಹಳ್ಳಿಗಳಲ್ಲಿ ರಾಷ್ಟ್ರೀಯತೆಯ ಶ್ರಮಶಕ್ತಿಯನ್ನು ಗುರುತಿಸಲು ಪ್ರಾರಂಭಿಸಿದಾಗ. ಅವರ ಗ್ರಾಮ ಭಾರತದ ಪರಿಕಲ್ಪನೆಯಲ್ಲಿ ಪ್ರಾದೇಶಿಕ ಅನನ್ಯತೆ-ಸ್ವಾವಲಂಬನೆಗಳ ಚಿಂತನೆ ಎದ್ದುಕಾಣುತ್ತದೆ. ಅವರು ಸಮರ್ಥಿಸಿದ ಪ್ರಾಚೀನ ಧಾರ್ಮಿಕ ಸಂಪ್ರದಾಯಗಳಲ್ಲಿ ವೈರುಧ್ಯ ಮತ್ತು ಪ್ರತಿಗಾಮಿತನಗಳಿದ್ದರೂ, ಆ ಮಿತಿಯಿಂದ ಹೊರಗಿನ ಗಾಂಧಿ ಮಾನವೀಯ ಮೌಲ್ಯಗಳನ್ನು ರಾಷ್ಟ್ರವಾದಕ್ಕೆ ತುಂಬಿ ನಮ್ಮ ಪ್ರಜಾಪ್ರಭುತ್ವ-ಗಣತಂತ್ರ ಎರಡಕ್ಕೂ ಶಕ್ತಿ ತುಂಬಿದ್ದಾರೆ. ಭಾರತಕ್ಕೆ ಸಹಜ ರಾಷ್ಟ್ರವಾದ ಗುರಿ ಮತ್ತು ದಾರಿಯನ್ನು ತೋರಿಸಿದವರಲ್ಲಿ ಗಾಂಧೀಜಿ ಗಮನಾರ್ಹರು ಎಂದು

ಅನನ್ಯತೆಯ ನೆಲೆಯಲ್ಲಿ ಪ್ರಾದೇಶಿಕತೆಯ ಒಡಲಿನಿಂದ ರಾಷ್ಟ್ರೀಯತೆ ವಿನ್ಯಾಸಗೊಂಡರೆ ಅದು ಸಂಸ್ಕೃತಿಯ ಒಂದು ಭಾಗವಾಗುತ್ತದೆ. ಇಲ್ಲಿ ಸಂಸ್ಕೃತಿ ಎನ್ನುವಾಗ ಅದರ ಮೂಲನೆಲೆ ಶ್ರಮಿಕರ ಬೆವರು ಮತ್ತು ಬುದ್ಧಿಯನ್ನು ಆವರಿಸಿಕೊಂಡು ಬೆಳೆಯುವ ಸಂಸ್ಕೃತಿ. ಇದು ಕೇವಲ ಬುದ್ಧಿಯ ಕಸರತ್ತಿಗೆ ಸೀಮಿತವಾದ ಹುಸಿ ಸಂಸ್ಕೃತಿಯಲ್ಲ. ಬೆವರು ಮತ್ತು ಬುದ್ಧಿಯ ಬಲದಿಂದ ಬೆಳೆಯುವ ಸಂಸ್ಕೃತಿಯಲ್ಲಿ ಸ್ವಾತಂತ್ರ್ಯ, ಸಮಾನತೆ, ಸಹಬಾಳ್ವೆ ಇತ್ಯಾದಿ ಮಾನವೀಯ ಮೌಲ್ಯಗಳು ಜೊತೆಯಾಗಿ ಸಾಗುತ್ತಿದ್ದು; ಇದೇ ನಮ್ಮ ಆಧುನಿಕ ಪರಿಕಲ್ಪನೆಯಾದ ರಾಷ್ಟ್ರೀಯತೆಯ ಗುರಿ ಮತ್ತು ದಾರಿಯಾಗಿ ಸಮುದಾಯ ಶಕ್ತಿಯನ್ನು ಹೆಚ್ಚಿಸುತ್ತದೆ.

ಒಪ್ಪದ ಸಂಪ್ರದಾಯನಿಷ್ಠರು, ಯಥಾಸ್ಥಿತಿಯ ಸಮರ್ಥಕರು, ಮೌರ್ಯ-ಗುಪ್ತ-ಶಿವಾಜಿಯರ ಕಾಲದಿಂದಲೂ ಭಾರತದಲ್ಲಿ ರಾಷ್ಟ್ರವಾದವಿತ್ತು ಎನ್ನುವ ವಾದ ಮುಂದಿಡುತ್ತಾರೆ. ಆದರೆ ಇಲ್ಲೊಂದು ಭಿನ್ನತೆಯನ್ನು ನಾವು ಗಮನಿಸುವ ಅನಿವಾರ್ಯತೆ ಇದೆ. ಹಿಂದಿನ ಸಾಮಂತಶಾಹಿ ವ್ಯವಸ್ಥೆ ಇಲ್ಲಿಯ ಬಹುಸಂಖ್ಯಾತ ಶ್ರಮ ಶಕ್ತಿಯನ್ನು ನಿಯಂತ್ರಿಸುತ್ತಾ ಊಳಿಗಮಾನ್ಯ ವ್ಯವಸ್ಥೆಯನ್ನು ಪೋಷಿಸಿದ್ದೇ ಇಲ್ಲಿಯ ಗುಲಾಮೀಕರಣದ ಚರಿತ್ರೆ ಎನ್ನುವುದನ್ನು ನಾವು ಮರೆಯುವಂತಿಲ್ಲ. ಭಾರತೀಯ ಸಾಮಂತಶಾಹಿ ಚರಿತ್ರೆಯ ಉದಾರವಾದಿ ದೊರೆ 'ಪ್ರಿಯದರ್ಶಿನಿ ದೇವನಾಂಪ್ರಿಯ' ಅಶೋಕ ಕಳಿಂಗ ಯುದ್ಧದ ಕಗ್ಗೊಲೆಯಿಂದ ವಿಜಯಿಯಾಗಿಯೇ ಕಣ್ಣೀರು ಸುರಿಸುತ್ತಾನೆ. ಇದರಿಂದ ಮುಂದೆ ಆತನ ಬದುಕು ಹಿಂಸೆಯಿಂದ ಅಹಿಂಸೆಯತ್ತ ತಿರುಗುತ್ತದೆ. ಆದರೆ ಈ ಸಂಕ್ರಮಣ ಕಾಲದಲ್ಲೂ ತಾನು ಗೆದ್ದ ನಾಡಿನಲ್ಲಿ ಸ್ವತಂತ್ರ ಬದುಕು ನಡೆಸುತ್ತಿದ್ದ ಪ್ರಾಚೀನ ಭಾರತದ ಗಣತಂತ್ರ ಪದ್ಧತಿಯ ಒಳಗಿದ್ದ ಬುಡಕಟ್ಟು ಪರಂಪರೆಯ ಸುಮಾರು ೧,೫೦,೦೦೦ ಜನರನ್ನು ತನ್ನ ದಾಸರನ್ನಾಗಿ ಮಾಡಿ ಅವರ ಸ್ವಾತಂತ್ರ್ಯ ಕಸಿದು ಅವರನ್ನು ಶೂದ್ರರನ್ನಾಗಿಸಿದ ಚರಿತ್ರೆ ಹಿಂದಿನ ನಮ್ಮ ರಾಷ್ಟ್ರವಾದದ ಮರುಚಿಂತನೆಗೆ ಒಂದು ಆಕರ ಮಾತ್ರ. ಚರಿತ್ರೆಯ ವೈಭವೀಕರಣದ ಅತೀ ಉತ್ಸಾಹದಲ್ಲಿ ನಮ್ಮ ರಾಷ್ಟ್ರವಾದವನ್ನು ಗುರುತಿಸಿದರೆ ಸಾಮಂತಶಾಹಿ ಊಳಿಗಮಾನ್ಯ ಪದ್ಧತಿಯ ಪಡಿಯಚ್ಚು ನಮ್ಮ ಮುಂದಿನ ಪ್ರಜಾಪ್ರಭುತ್ವ-ಗಣರಾಜ್ಯ ಆಗುವುದು ಮಾತ್ರವಲ್ಲ; ಇದು ಆನುವಂಶಿಕ ಸರ್ವಾಧಿಕಾರಕ್ಕೆ ಮಗದೊಮ್ಮೆ ಮಣೆಹಾಕಿ ಇಲ್ಲಿಯ ಶ್ರಮಿಕರ ಶಕ್ತಿಯನ್ನು ದೆಸೆಗೆಡಿಸಿ ಶ್ರಮಸಂಸ್ಕೃತಿಯ ಪ್ರಾದೇಶಿಕ ಅನನ್ಯತೆ ಮತ್ತು ವೈವಿಧ್ಯತೆಯನ್ನು ನಾಶಮಾಡಿ 'ಏಕಸಂಸ್ಕೃತಿ'ಯ ಸರ್ವಾಧಿಕಾರದತ್ತ ನಮ್ಮನ್ನು ತಳ್ಳಬಹುದು. ಭಾರತದ ಪ್ರಜಾಪ್ರಭುತ್ವ ಮತ್ತು ಗಣರಾಜ್ಯ ಎರಡೂ ಉಳಿಯಬೇಕಾದರೆ ಇಲ್ಲಿಯ ಶ್ರಮಿಕರ ಅನನ್ಯತೆ, ಪ್ರಾದೇಶಿಕ ಆಶೋತ್ತರಕ್ಕೆ ನಮ್ಮ ಕೇಂದ್ರ ಸರಕಾರ ಸ್ಪಂದಿಸಬೇಕು. ನಮ್ಮ ಭಾರತ ಏಕಸಂಸ್ಕೃತಿಯ ವಾಣಿಜ್ಯಪ್ರೇರಿತ ತೋಟವಾಗುವುದು ಬೇಡ. ಹಲವು ವೈವಿಧ್ಯತೆಯ ಉದ್ಯಾನವನವಾಗಬೇಕು. ಈ ಉದ್ಯಾನವನ ಕಾಡನ್ನೂ ನಾಡನ್ನೂ ಬೆಸೆಯುವ ಕೊಂಡಿಯಾಗಬೇಕು. ಇದಕ್ಕೆ ಸ್ವಾತಂತ್ರ್ಯ, ಸಮಾನತೆ, ಸಹಬಾಳ್ವೆಯ ಆಶಯ ಬೆಳಕಾಗಬೇಕು. ಹೀಗಾಗಲು ಇಲ್ಲಿನ ಬಹುರೂಪೀ ಸಂಸ್ಕೃತಿ, ಕುಲ, ಭಾಷೆ, ಮತ, ನಿಸರ್ಗ ಎಲ್ಲವೂ ಅನನ್ಯತೆಯೊಡನೆ ಪ್ರಗತಿಪರ ಪರಿಷ್ಕಾರಕ್ಕೂ ಶ್ರಮಶಕ್ತಿಯೊಡನೆ ಬೆರೆಯುವ ಬುದ್ಧಿಯಾಗಬೇಕು.

**ಭಾಷಾ ವೈವಿಧ್ಯ :** ಭಾರತದಲ್ಲಿ ಸಾವಿರಕ್ಕೂ ಹೆಚ್ಚು ಸಂಸ್ಕೃತಿ ಸಂಪನ್ನ ಭಾಷೆಗಳಿವೆ. ಇಲ್ಲಿಯ ಮಣ್ಣಿನ ಮಕ್ಕಳು ಆಡುವ ಎಲ್ಲಾ ಭಾಷೆಗಳು ರಾಷ್ಟ್ರಭಾಷೆಗಳೇ. ಆದರೆ ಪ್ರಾದೇಶಿಕ ರಾಜ್ಯಗಳ ನೆಲೆಯಲ್ಲಿ ಕೆಲವಕ್ಕೆ ಮಾತ್ರ ರಾಷ್ಟ್ರ ಭಾಷೆಯ ಗೌರವ ನೀಡಲಾಗಿದೆ. ಇವುಗಳಲ್ಲೂ ಕೆಲವನ್ನು 'classical' ಎಂದು ಪರಿಗಣಿಸಿ ವಿಶೇಷ ಸವಲತ್ತು ನೀಡಲಾಗುತ್ತಿದೆ. ಅಧಿಕಾರಸ್ಥ ನೆಲೆಯಿಂದ ದೀರ್ಘಕಾಲ ನಿರ್ಲಕ್ಷಿತ ಭಾಷೆಗಳಿಗೆ ವಿಶೇಷ ಸವಲತ್ತು ನೀಡಿ ಬೆಳೆಸುವುದು ಸರಕಾರದ ಕರ್ತವ್ಯ. ಆದರೆ ಶಾಸನಾತ್ಮಕವಾಗಿ ಬೆಳೆಯುವ ಅವಕಾಶವಿದ್ದ ಭಾಷೆಗಳಿಗೆ ಇನ್ನೂ ಸವಲತ್ತು ನೀಡಿ ಒಂದೆಡೆ ಬೆಳೆಸುವುದು; ಇನ್ನೊಂದೆಡೆ ಸಾವಿರಾರು ಜನಭಾಷೆಗಳನ್ನು ನಿರ್ಲಕ್ಷಿಸುವುದು ದುರ್ಬಲ ರಾಷ್ಟ್ರವಾದಕ್ಕೆ ಅಡಿಗಲ್ಲು ಹಾಕಿದಂತೆ. 'ಮಾತೃ ಭಾಷೆಯಲ್ಲಿ ಶಿಕ್ಷಣ' ಎಂದು ಕೂಗೆಬ್ಬಿಸಿ ಸಮುದಾಯವನ್ನು ಭಾಷಾಗೊಂದಲದಲ್ಲಿ ಕೆಡವುತ್ತಾ ಭಾಷಿಕ ರಾಜಕೀಯ ನಡೆಸುವುದು ನಮ್ಮನ್ನೇ ನಾವು ವಂಚಿಸಿಕೊಂಡಂತೆ. ಮಹಾರಾಷ್ಟ್ರ ರಾಜ್ಯದಲ್ಲಿ ೧೯೯೭ರಲ್ಲಿ ಶಾಲಾ ಶಿಕ್ಷಣದಲ್ಲಿ ಒಂದು ಹೊಸ ನೀತಿಯನ್ನು ಅನುಷ್ಠಾನಗೊಳಿಸಲಾಗಿದೆ. ಪ್ರಾಥಮಿಕ ಹಂತದ ಒಂದು ಮತ್ತು ಎರಡನೆಯ ತರಗತಿಗಳಲ್ಲಿ ಮರಾಠಿ ಮಾಧ್ಯಮದ ವಿದ್ಯಾರ್ಥಿಗಳಿಗೆ ಮರಾಠಿ ಮತ್ತು ಇಂಗ್ಲಿಷ್ ಭಾಷೆಗಳನ್ನು ಕಡ್ಡಾಯವಾಗಿ ಕಲಿಸುವುದು; ಅದೇ ರೀತಿ ಕನ್ನಡ, ಗುಜರಾತಿ, ತಮಿಳು ಮಾಧ್ಯಮದ ಮಕ್ಕಳಿಗೆ ಕ್ರಮವಾಗಿ ಅವರ ಮಾಧ್ಯಮದ ಭಾಷೆಯೊಡನೆ ಇಂಗ್ಲಿಷ್ ಭಾಷೆಗಳನ್ನು ಕಡ್ಡಾಯವಾಗಿ ಕಲಿಸುವುದು, ಅಂತೆಂಯೇ ಇಂಗ್ಲಿಷ್ ಮಾಧ್ಯಮದ ವಿದ್ಯಾರ್ಥಿಗಳಿಗೆ ಅವರ ಮಾಧ್ಯಮದ ಭಾಷೆಯೊಡನೆ ಇನ್ನೊಂದು ಭಾಷೆಯನ್ನು ಕಡ್ಡಾಯವಾಗಿ ಕಲಿಸುವುದು ಜಾರಿಯಾಗಿದೆ. ಇಲ್ಲಿ 'ಇನ್ನೊಂದು ಭಾಷೆ' ಎಂದು ಆಂಗ್ಲ ಮಾಧ್ಯಮದ ಮಕ್ಕಳಿಗೆ ಅವಕಾಶ ನೀಡುವಾಗ ಆ ಪರಿಸರದಲ್ಲಿರುವ ಜನರ ಮಾತೃಭಾಷೆಗೆ ಆದ್ಯತೆ ನೀಡುವ ಕ್ರಮ ಬೆಳೆದರೆ 'ಮಾತೃಭಾಷೆಯಲ್ಲಿ ಶಿಕ್ಷಣ' ಎನ್ನುವ ಮಾತಿಗೆ ಬೆಲೆ ಬರುತ್ತದೆ. ಇಲ್ಲವಾದಲ್ಲಿ ''ನೀನಿಲ್ಲಿರುವುದರಿಂದ ನನ್ನ ಮಾತೃಭಾಷೆಯೇ ನಿನ್ನ ಮಾತೃಭಾಷೆ'' ಎಂಬ ಊಳಿಗಮಾನ್ಯ ಸಿದ್ಧಾಂತಕ್ಕೆ ಚಾಲನೆ ನೀಡಿದಂತಾಗುತ್ತದೆ. ನಮ್ಮಲ್ಲಿ ಆರಾಧನಾ ಕೇಂದ್ರಗಳಿಗೆ ಆನೆ ಸಾಕುವುದು; ಚಿನ್ನ ಮುಚ್ಚಿಸುವುದು ಸಾಧ್ಯವಾಗುತ್ತಿರುವಾಗ ಇಲ್ಲಿಯ ಸರಕಾರಕ್ಕೆ ಕೂಡ ಮಾತೃಭಾಷೆಯ ಶಿಕ್ಷಣ ಪ್ರಬಲ ಇಚ್ಛಾಶಕ್ತಿಯಿದ್ದರೆ ಅಸಾಧ್ಯವಾಗಲಾರದು. ಇದೇ ಮಹಾರಾಷ್ಟ್ರದಲ್ಲಿ ಮೂರನೆಯ ತರಗತಿಯಿಂದ ಇನ್ನೆರಡು ಭಾಷೆಗಳ ಅಧ್ಯಯನ ಪ್ರಾರಂಭವಾಗುತ್ತದೆ. ಅದರಲ್ಲಿ ಮಹಾರಾಷ್ಟ್ರದ ರಾಜ್ಯಭಾಷೆ 'ಮರಾಠಿ' ಮತ್ತು ಭಾರತದ ಪರ್ಯಾಯ ಸಂಪರ್ಕ ಭಾಷೆ 'ಹಿಂದಿ' ಕಡ್ಡಾಯವಾಗುತ್ತದೆ. ಹೀಗೆ ಒಂದು ಮಗು ಮಹಾರಾಷ್ಟ್ರದ ಹೊಸ ಭಾಷಾ ನೀತಿಗನುಸಾರವಾಗಿ ಕ್ರಿ.ಶ. ೨೦೦೭ರಲ್ಲಿ ಎಸ್.ಎಸ್.ಸಿ. ಪರೀಕ್ಷೆಗೆ ಕುಳಿತುಕೊಳ್ಳುವಾಗ ಇಂಗ್ಲಿಷ್, ಮರಾಠಿ, ಹಿಂದಿ ಸೇರಿದಂತೆ ಇನ್ನೊಂದು ಆಯ್ಕೆಯ ಭಾಷೆ ಸೇರಿ ಈ ನಾಲ್ಕು ಭಾಷೆಗಳನ್ನು ಕಡ್ಡಾಯವಾಗಿ ಕಲಿಯಬೇಕಾಗುತ್ತದೆ. ಭಾಷಾ ಕಲಿಕೆಯ ನೆಲೆಯಲ್ಲಿ ಇದೊಂದು ಪ್ರಗತಿಪರ ಕ್ರಾಂತಿ.

ಮಹಾರಾಷ್ಟ್ರದ ಶಿಕ್ಷಣ ನೀತಿಯಲ್ಲಿ ಸುಧಾರಣೆಗೆ ಅವಕಾಶವಿದೆ. ನಮ್ಮ ಪ್ರಾಥಮಿಕ ಶಾಲೆಯ ಒಂದನೇ ತರಗತಿಯಲ್ಲಿ ಇಂಗ್ಲಿಷ್‌ನ ಜೊತೆ ಅವರವರ ಮಾತೃಭಾಷೆ ಕಲಿಯುವ ಅವಕಾಶ ದೊರೆಯಬೇಕು. ಅಂತೆಯೇ ಮೂರನೇ ತರಗತಿಯಿಂದ ಅಲ್ಲಿನ ರಾಜ್ಯಭಾಷೆಯ ಜೊತೆಗೆ ಇನ್ನೊಂದು ಭಾಷೆಯಾಗಿ 'ಹಿಂದಿ' ಭಾಷೆಯ ಸಾಲಿನಲ್ಲಿ ಆಯಾಯ ರಾಜ್ಯದ ಗಡಿರಾಜ್ಯಗಳ ಭಾಷೆಯನ್ನೂ ಸೇರಿಸಿ ಆಯ್ಕೆಯ ಸ್ವಾತಂತ್ರ್ಯವನ್ನು ಮಕ್ಕಳ ಪಾಲಕರಿಗೆ ನೀಡಬೇಕು. ಹೀಗೆ ಭಾಷೆಯ ಪ್ರೀತಿಯನ್ನು ಬೆಳೆಸಿ ನಮ್ಮ ಗಡಿರಾಜ್ಯಗಳ ಬದುಕು-ಸಂಸ್ಕೃತಿಯನ್ನು ಅರಿತುಕೊಂಡರೆ ನಮ್ಮ ರಾಷ್ಟ್ರೀಯತೆ ಸಹಜವಾಗಿ ಬಲಗೊಳ್ಳಬಹುದು.

ನಮ್ಮ ಭಾರತೀಯ ಭಾಷಾ ಚರಿತ್ರೆಯ ನೀತಿ ಹೆಚ್ಚಿನ ಕಾಲಘಟ್ಟದಲ್ಲಿ ಸಾಮಂತಶಾಹಿ ಪರಂಪರೆಯ ಊಳಿಗಮಾನ್ಯ ಪದ್ಧತಿಯನ್ನೇ ಬೆಳೆಸುವ ತಂತ್ರಗಾರಿಕೆ ನಡೆಸಿದೆ. ಇಲ್ಲಿಯ ಬಹುಸಂಖ್ಯಾತರಿಗೆ ಅಕ್ಷರ ಸಂಸ್ಕೃತಿ ದಕ್ಕದಂತೆ ವಿಧಿ-ನಿಷೇಧ ಹೇರಿದ್ದೂ ಈ ತಂತ್ರಗಾರಿಕೆಯ ಭಾಗವೇ ಆಗಿದೆ. ಭಾರತದ ಸತ್ತಾರೂಢರು ಕ್ರಿ.ಶ. ೪ನೆಯ ಶತಮಾನದವರೆಗೆ 'ಪ್ರಾಕೃತ' ಭಾಷೆಯನ್ನು ಬ್ರಾಹ್ಮೀ ಲಿಪಿಯಲ್ಲಿ ಬರೆದು ಏಕಭಾಷೆಯ ಗುತ್ತಿಗೆ ಮೆರೆಸಿದರೆ; ಕ್ರಿ.ಶ. ೪ನೆಯ ಶತಮಾನದಿಂದ ಕ್ರಿ.ಶ. ೮ನೆಯ ಶತಮಾನದವರೆಗೆ 'ಸಂಸ್ಕೃತ' ಭಾಷೆಯನ್ನು 'ನಾಗರೀ' ಲಿಪಿಯಲ್ಲಿ ಪ್ರಸಿದ್ಧಿಪಡಿಸುವ ಪರಂಪರೆ ಬೆಳೆಯಿತು. ಆ ಬಳಿಕ ಕ್ರಿ.ಶ. ೯ನೆಯ ಶತಮಾನದ ಅನಂತರ ಹೆಚ್ಚಾಗಿ ಇಂದು ರಾಷ್ಟ್ರೀಯ ಮಾನ್ಯತೆ ಪಡೆದಿರುವ ಪ್ರಾದೇಶಿಕ ಭಾಷೆಗಳಿಗೆ ಬೆಳೆಯುವ ಅವಕಾಶ ದೊರೆಯಿತು. ಈಗ ದೇಶಕ್ಕೆ ಸ್ವಾತಂತ್ರ್ಯ ಬಂದು ೫೭ ವರ್ಷ ಸಂದರೂ ಇಲ್ಲಿಯ ಮಣ್ಣಿನ ಮಕ್ಕಳ ಮಾತೃಭಾಷೆಯಲ್ಲಿ ಕೇವಲ ಶೇ. ೨ ಭಾಷೆಗಳಿಗೆ ಮಾತ್ರ ಸರಕಾರದ ಮಾನ್ಯತೆ ದೊರೆತಿದೆ ಎನ್ನುವಾಗ ಇಲ್ಲಿಯ ಭಾಷಾರಾಜಕೀಯದ ದುರಂತ ಚಿತ್ರಣ ಸ್ಪಷ್ಟವಾಗುತ್ತದೆ.

**ಮತೀಯ ರಾಜಕೀಯ :** ಭಾರತದಲ್ಲಿ ಕುರಾನ್, ಬೈಬಲ್, ಜೆಂಡ್ ಅವೆಸ್ತಾ, ತ್ರಿಪಿಟಕ ಮೊದಲಾದ ಮತೀಯ ಗ್ರಂಥಗಳಿಗೆ ನಿಷ್ಠೆ ತೋರುವವರನ್ನುಳಿದು, ಮಿಕ್ಕವರೆಲ್ಲಾ 'ಹಿಂದುಗಳು' ಎಂಬ ಪರಿಗಣನೆ ಮಾಡಲಾಗುತ್ತಿದೆ. ಈ ನೆಲೆಯಲ್ಲಿ ಹಿಂದುಗಳು ಇಲ್ಲಿ ಬಹುಸಂಖ್ಯಾತರು. ಮತೀಯ ಅಲ್ಪಸಂಖ್ಯಾತರ ನೆಲೆಯಲ್ಲಿ ಮುಸ್ಲಿಮರು ಅಲ್ಪಸಂಖ್ಯಾತರಲ್ಲಿ ಬಹುಸಂಖ್ಯಾತರು. ವಸಾಹತುಶಾಹಿ ಪರಂಪರೆಯ ವಿರುದ್ಧ ಸ್ವಾತಂತ್ರ್ಯ ಹೋರಾಟದಲ್ಲಿ ರಾಷ್ಟ್ರೀಯ ಪ್ರಜ್ಞೆಯನ್ನು ಜಾಗ್ರತಗೊಳಿಸಲು 'ಗೀತೆ' ಬಂದಾಗ ಅದಕ್ಕೆ ಪ್ರತಿಯಾಗಿ 'ಕುರಾನ್' ಕಾಣಿಸಿಕೊಂಡಿತು. ಒಡೆದು ಆಳುತ್ತಾ ಈ ದೇಶದ ಸಂಪತ್ತನ್ನೂ ಸುಲಿಯುವುದಲ್ಲದೆ, ಇಲ್ಲಿಯ ಶ್ರಮಶಕ್ತಿಯನ್ನು ದೆಸೆಗೆಡಿಸಿ ಶ್ರಮ ಸಂಸ್ಕೃತಿಯನ್ನು ಮುರಿಯುವುದು ಅಂದಿನ ಸತ್ತಾರೂಢ ಬ್ರಿಟಿಷರ ಕಾರ್ಯತಂತ್ರವಾಗಿತ್ತು. ಇದಕ್ಕೆ ನಗರವಾಸಿಗಳಾಗಿದ್ದ, ಮೇಲ್ವರ್ಗದ ಹಿಂದು-ಮುಸ್ಲಿಂ ಬುದ್ಧಿಜೀವಿಗಳು ರಾಷ್ಟ್ರೀಯ ವಿಮೋಚನೆಯ ಹೋರಾಟಕ್ಕೆ ಗೀತೆ-ಕುರಾನ್ ಮತ ಗ್ರಂಥಗಳನ್ನು ತಂದು 'ಹಿಂದೂ ರಾಷ್ಟ್ರ' ಮತ್ತು 'ಮುಸ್ಲಿಂ ರಾಷ್ಟ್ರ' ಎಂಬ ದ್ವಿರಾಷ್ಟ್ರ ಕಲ್ಪನೆಗೆ ರಕ್ತ ನೀಡಿದರು. ದೇಶವನ್ನು ವಿಭಜಿಸಿ ಮತೀಯ ಅತಿರೇಕದ ಅಮಾನುಷ ಕೃತ್ಯ ನಡೆಸಿದರು. ಈಗಲೂ ಗ್ರಾಮ್ಯ ಬದುಕಿನ ಹಿಂದೂ-ಮುಸ್ಲಿಂ ಸಮುದಾಯದಲ್ಲಿ ಮಾನವೀಯತೆ ಇದ್ದರೆ ಇದನ್ನು ನಿಯಂತ್ರಿಸುವ ನಗರಪ್ರಜ್ಞೆಯ ಊಳಿಗಮಾನ್ಯ ಮನೋಧರ್ಮ ಮಾತ್ರ ಈ ಸಹಬಾಳ್ವೆಯ ಪರಿಯನ್ನು ಸಹಿಸದೆ ತಮ್ಮ ರಾಜಕೀಯ-ಮತೀಯ ಏಕಸ್ವಾಮ್ಯಕ್ಕಾಗಿ 'ರಥಯಾತ್ರೆ'–'ಮತಯಾತ್ರೆ' ನಡೆಸಿ ಗ್ರಾಮೀಣ ಸಾಮರಸ್ಯಕ್ಕೆ ಹುಳಿ ಹಿಂಡುತ್ತಿದೆ. ಒಮ್ಮೆ ಮತ

ಸಿದ್ಧಾಂತಗಳು ಮಾನವ ವರ್ಗದ ಬಹುಮಂದಿಗೆ ಅನಿಷ್ಟ ಕಾರಕ ಎಂದು ವಿವೇಕಾನಂದರು ವಾದಿಸುತ್ತಾ ''ನಾವು ಮಾನವ ವರ್ಗವನ್ನು ಎಲ್ಲಿ ವೇದಗಳು, ಬೈಬಲ್, ಕುರಾನ್ ಇಲ್ಲವೋ ಅಲ್ಲಿಗೆ ಕರೆದೊಯ್ಯಬೇಕು'' ಎಂದಿದ್ದಾರೆ. ಈಗ ನಮ್ಮ ಜಾತ್ಯತೀತ ರಾಷ್ಟ್ರದ ಸರಕಾರಿ ಕಚೇರಿಗಳಲ್ಲೇ ನಡೆಯುವ ಮತೀಯ ಆಚರಣೆ-ಉತ್ಸವಗಳು ನಮ್ಮ ರಾಷ್ಟ್ರವಾದವನ್ನು ಇನ್ನಷ್ಟು ದುರ್ಬಲಗೊಳಿಸುವುದರಲ್ಲಿ ಅನುಮಾನವಿಲ್ಲ. ನಮ್ಮ ಮತೀಯ ಆಚರಣೆಗಳನ್ನು ಸಾರ್ವಜನಿಕ ಆಚರಣೆಯಾಗಿಸಿ ಮತೀಯ ಭಯೋತ್ಪಾದನೆ ಬೆಳೆಸುವುದಕ್ಕೆ ಆದಷ್ಟು ಬೇಗನೆ ತೆರೆ ಬೀಳಬೇಕಾಗಿದೆ. ಇಲ್ಲಿಯ ಆರಾಧನಾ ನೆಲೆಗಳು ಭಯೋತ್ಪಾದನೆಯ ಗೂಡುಗಳಾಗದಂತೆ ಎಚ್ಚರ ವಹಿಸಬೇಕಾಗಿದೆ.

**ಜಾತೀಯ ಶ್ರೇಣೀಕರಣ :** ಭಾರತದಲ್ಲಿ ಬಹುಸಂಖ್ಯಾತರೆಂದು ಗುರುತಿಸಿಕೊಳ್ಳುವ 'ಹಿಂದೂ' ಸಮುದಾಯದಲ್ಲಿ ೧೪೦೦೦ಕ್ಕೂ ಹೆಚ್ಚು ಜಾತಿಗಳಿವೆ. ಇದು ಶ್ರಮದ ವಿಭಜನೆಯಲ್ಲ; ಶ್ರಮಿಕರ ವಿಭಜನೆ. ದೇವಾಲಯದ ಗರ್ಭಗುಡಿಯಿಂದ ಪ್ರಾರಂಭವಾದ ಅಸ್ಪೃಶ್ಯತೆಯ ಪರಿಕಲ್ಪನೆ ಇಂದಿಗೂ ತಾತ್ವಿಕವಾಗಿ ಹಿಂದುಗಳಲ್ಲಿ ಸಮಾನತೆ-ಸಹಬಾಳ್ವೆಯನ್ನು ಒಪ್ಪುತ್ತಿಲ್ಲ. ಇಲ್ಲಿ ಹಲವು ಬಾರಿ ನಡೆದ ಜಾತಿ ವಿನಾಶದ ಹೋರಾಟವೆಲ್ಲಾ ಜಾತಿಯ ಕಟು ಅಮಾನವೀಯ ವಾಸ್ತವವನ್ನು ಮುರಿಯುವಲ್ಲಿ ಗೆಲುವು ಪಡೆದಿಲ್ಲ. ಅದಕ್ಕೂ ವಿಪರೀತವೆನ್ನುವಂತೆ ಇತರ ಮತಗಳಿಗೂ ಈ ಪಿಡುಗನ್ನು 'ಸಾಂಕ್ರಾಮಿಕ'ಗೊಳಿಸಿದ್ದು ಎಲ್ಲರೂ ಹುಬ್ಬೇರಿಸುವಂತೆ ಮಾಡಿದೆ.

ಆಸ್ತಿ ಮತ್ತು ಅಧಿಕಾರ ಎರಡನ್ನೂ ಪಡೆದ ಕುಲ ಮೂಲದ ಜಾತಿಗಳು ಇಲ್ಲಿನ ಸಾವಿರಾರು ಬುಡಕಟ್ಟು ಜನಾಂಗಗಳ ಬದುಕುವ ಹಕ್ಕನ್ನೇ ಕಸಿದುಕೊಂಡಿವೆ. ಹಿಂದೊಮ್ಮೆ ಕೃಷಿ ಸಂಸ್ಕೃತಿಯ ಆವಿಷ್ಕಾರಕ್ಕೆ ಕಾರಣರಾದ ಬುಡಕಟ್ಟಿನ ಶ್ರಮಜೀವಿಗಳು ಕಾಡಿನಿಂದ ನಾಡಿನ ಸಂಸ್ಕೃತಿಯನ್ನು ಕಟ್ಟಿದರು. ನಾಡಿನಿಂದ ನಗರವೂ ಇವರದ್ದೇ ದೇಣಿಗೆ. ಮೊಹೆಂಜೋದಾರೊ-ಹರಪ್ಪ ನಗರ ಸಂಸ್ಕೃತಿಯನ್ನು ಕಟ್ಟಿದವರೇ ಆ ಬಳಿಕ ಸಾಂಸ್ಕೃತಿಕ ಹಲ್ಲೆಗೆ ಒಳಗಾಗಿ ನಾಡಿನಿಂದ ಕಾಡಿಗೆ ಅಟ್ಟಲ್ಪಟ್ಟರು. ಈಗ ಅವರನ್ನು ಅಲ್ಲೂ ಬದುಕಗೊಡದೆ ಅತಂತ್ರರಾಗಿಸಿದ ಸಾಕಷ್ಟು ಉದಾಹರಣೆಗಳು ನಮ್ಮಲ್ಲಿವೆ. ಒಂದು ಅಂದಾಜಿನಂತೆ ಹಿಂದೂ ಸಮುದಾಯದಲ್ಲಿ ೮೪ ಪ್ರತಿಶತ ಜನರು ಹುಟ್ಟಿನ ನೆಲೆಯಿಂದ ಜಾತೀಯ ತರತಮ ಭಾವದ ಶ್ರೇಣೀಕರಣಕ್ಕೆ ಒಳಗಾಗಿದ್ದಾರೆ. ಇದು ನಮ್ಮ ಪ್ರಾದೇಶಿಕ ಅನನ್ಯತೆ ಮತ್ತು ರಾಷ್ಟ್ರೀಯ ಏಕತೆಗೆ ಮಾರಕವಾಗುತ್ತಾ ಸಾಗುತ್ತಿದೆ. ಹಿಂದೂ ಧರ್ಮಪೀಠಕ್ಕೆ ಕಾಣಿಕೆ ಸಲ್ಲಿಸುವವರು ಈ ಮಣ್ಣಿನ ಬಹುಸಂಖ್ಯಾತ ಶ್ರಮಿಕರು. ಆದರೆ ಅಲ್ಲಿ ಅಧಿಕಾರ ಪಡೆಯುವವರು ಶ್ರಮರಹಿತ ಬುದ್ಧಿಜೀವಿಗಳು. ಶ್ರಮಜೀವಿಗಳ 'ಭಾವವಾದ' ಬುದ್ಧಿಜೀವಿಗಳ ಹುಂಡಿ ತುಂಬುವ ಸಂಸ್ಕೃತಿಗೆ ಬಂಡವಾಳವಾಗುತ್ತಾ ಸಾಗಿದೆ. ಇದರಿಂದ ಶ್ರಮಜೀವಿಗಳು ಒಂದೆಡೆ ಮೂಢನಂಬಿಕೆ-ಕೀಳರಿಮೆಗಳಿಗೆ ಬಲಿಯಾಗುತ್ತಾ ಗುಲಾಮರಾಗುತ್ತಿದ್ದರೆ ಇನ್ನೊಂದೆಡೆ ಬುದ್ಧಿ ಜೀವಿಗಳು ಶೋಷಣೆಯ ಹೊಸ ಹೊಸ ವಿಧಾನಗಳನ್ನು ಕಂಡುಹಿಡಿಯುತ್ತಿದ್ದಾರೆ. ಪ್ರಾರಂಭದ ಸಂದು ಹೋದ ಹಿರಿಯರ ಆರಾಧನೆ, ನಿಸರ್ಗದ ಆರಾಧನೆಗಳು ಇಂದು 'ಆಲಯದ ಆರಾಧನೆಯಾಗಿ' ಖಾಸಗೀ ನೆಲೆಯಿಂದ ಬಹಿರಂಗ ಆರಾಧನೆಗೆ ತಿರುಗಿದ್ದು ಜಾತೀಯತೆಯನ್ನೇ ವಿಜೃಂಭಿಸುವ ಪ್ರತಿಗಾಮಿತನ ಎನ್ನುವುದು ಸ್ಪಷ್ಟ. ಭಾರತದಲ್ಲಿ ಹಿಂದೂ ಎಂದು ಕರೆಸಿಕೊಳ್ಳುವ ಆನುವಂಶಿಕ ಸತ್ತಾರೂಢರು ತಮ್ಮ ಮತಸ್ಥರಲ್ಲಿ ಅಧಿಕಾರ ಮತ್ತು ಆಸ್ತಿಯನ್ನು ಹಂಚಿಕೊಳ್ಳುವ ಮನೋಧರ್ಮ ತೋರಿದರೆ; ಅದರ 'ಅನ್ನ' ಮತ್ತು 'ವಿವಾಹದ' ನೆಲೆಯಲ್ಲಿ ಜಾತಿ ಅಡ್ಡಗೋಡೆ ಆಗದೆ ಇದ್ದರೆ ಅವರು ಇಲ್ಲಿ ಬಾಳುವ ಎಲ್ಲ ಮತಸ್ಥರಿಗೂ ರಾಷ್ಟ್ರೀಯ ಆದರ್ಶವನ್ನು ಕಲಿಸುವ ಕಸುವು ಪಡೆಯುತ್ತಾರೆ.

**ಪ್ರಾದೇಶಿಕ ಆಶೋತ್ತರ-ನಿಸರ್ಗ ಪ್ರೀತಿ :** ಭಾರತದ ಪ್ರಾದೇಶಿಕತೆಯಲ್ಲಿ ಹಲವು ಸಂಸ್ಕೃತಿಗಳಿವೆ. ಈ ವೈವಿಧ್ಯತೆ ನಮ್ಮ ಆಸಕ್ತಿ-ಅಧ್ಯಯನ-ಅನುಷ್ಠಾನಗಳಿಗೆ ರೂಪಕವಾಗಲಿ. ಇಲ್ಲಿಯ ನೆಲ-ಜಲ ನಮಗೆ ಪ್ರಿಯವಾಗಲಿ. ಇಲ್ಲಿಯ ಪ್ರತಿಯೊಂದು ಸಂಸ್ಕೃತಿಯು ಇನ್ನೊಂದು ಸಂಸ್ಕೃತಿಗೆ ಮುಖಾಮುಖಿ ಆಗುತ್ತಾ ತನ್ನ ಅನನ್ಯತೆಯನ್ನು ಕಾಪಿಟ್ಟು ಪ್ರಗತಿಪರ ನೆಲೆಯಲ್ಲಿ ಪರಿಷ್ಕಾರಗೊಳ್ಳಬೇಕು. ಸತ್ತಾರೂಢರ ಸಂಸ್ಕೃತಿಯನ್ನು ಭಯ, ಅಜ್ಞಾನ, ಆಮಿಷ ಇತ್ಯಾದಿ ನೆಲೆಯಿಂದ ಒಪ್ಪಿ ಅನುಕರಿಸುವ ಮೂಢತೆ-ಮುಗ್ಧತೆ ಎರಡೂ ನಮ್ಮ ಪ್ರಾದೇಶಿಕ ಅನನ್ಯತೆಗೂ, ರಾಷ್ಟ್ರೀಯ ಪರಿಕಲ್ಪನೆಗೂ ಮಾರಕ.

ಭಾರತದ ಪ್ರಜಾಪ್ರಭುತ್ವ-ಗಣತಂತ್ರದಲ್ಲಿ 'ಮತದಾನ' ಒಂದು ಮುಖ್ಯ ಅಸ್ತ್ರ. ನಮ್ಮ ಸ್ಥಗಿತ ಬದುಕಿನ ಪ್ರಗತಿಪರ ಮುನ್ನಡೆಗೆ ಮತದಾನ ಎಂಬ ಅಸ್ತ್ರ ಪರಿಣಾಮಕಾರಿ ಪ್ರಯೋಗ ಆಗಬಲ್ಲುದು. ಆದರೆ ಇಂದು ಇದು ಜಾಗತೀಕರಣದ ಸ್ಪರ್ಧೆಯಲ್ಲಿ ಬಂಡವಾಳಶಾಹಿ ವಿದೇಶಿಯರ ಅಬ್ಬರದ ಪ್ರಚಾರದಲ್ಲಿ ಹಗಲು ಕನಸಿಗೆ ಬಲಿಯಾಗುತ್ತಿದೆ. ತಮ್ಮ ಕಣ್ಣ ಮುಂದೆ ಒಂದೆಡೆ Voluntary Retirement Scheme, Golden Handshake, Contract Labourers ಮುಂತಾದ ನವಸಾಹತುಶಾಹಿ ಧೋರಣೆಗಳಿಗೆ ನಗರದ ಶ್ರಮಿಕರು ಬಲಿಯಾಗಿ ಅತಂತ್ರರಾಗುತ್ತಿದ್ದರೆ, ಇನ್ನೊಂದೆಡೆ ಇಲ್ಲಿಯ ಜಲ-ನೆಲ-ಅರಣ್ಯಗಳು ಒಳಗಿಂದೊಳಗೇನೆ corporate ಉದ್ಯಮದ ಗುತ್ತಿಗೆಗಳಾಗಿ ಇಲ್ಲಿಯ ರೈತಾಪಿ ಜನರನ್ನು, ಕಸುಬುಗಾರರನ್ನು ಮತ್ತು ಬುಡಕಟ್ಟು ಜನಾಂಗಗಳನ್ನು ಅತಂತ್ರಗೊಳಿಸುತ್ತಿದೆ. ಒಟ್ಟಿನಲ್ಲಿ ಮನುಷ್ಯನ ಬದುಕು ಮತ್ತು ಬದುಕುವ ಪರಿಸರ ತನ್ನ ಅನನ್ಯತೆಯನ್ನು ಕಳೆದುಕೊಳ್ಳುತ್ತಾ ಹುಸಿ ರಾಷ್ಟ್ರೀಯತೆಗೆ ಶರಣಾಗುತ್ತಿದೆ.

ರವಿ ರಾ. ಅಂಚನ್
ಬಿ-೮೦೮, ಟ್ವಿನ್ ಟವರ್, ಮನೀಶ್ ಪಾರ್ಕ್, ಪಂಪ್ ಹೌಸ್,
ಅಂಧೇರಿ (ಪೂರ್ವ) ಮುಂಬಯಿ - ೪೦೦ ೦೯೩

---

*೧೩ನೇ ಪುಟದಿಂದ ರಾಮಚಂದ್ರಶರ್ಮ...*

ಓದಲು ಆರಂಭಿಸಿದರು. ನಾಟಕದ ಮಧ್ಯದಲ್ಲಿ ಓದುವುದನ್ನು ಕ್ಷಣ ಕಾಲ ನಿಲ್ಲಿಸಿ ''ಇಲ್ಲಿ ನನ್ನ ಒಂದಷ್ಟು ಕಮ್ಯುನಿಸ್ಟ್ ನಂಬಿಕೆಗಳನ್ನು ಸೇರಿಸಿದ್ದೇನೆ'' ಅಂದರು. ಆಗಿನ ವಯಸ್ಸಿನಲ್ಲಿ ನಾವು ಬೆಳೆದ ಪರಿಸರದಲ್ಲಿ ಕಮ್ಯುನಿಸ್ಟ್ ಎಂಬ ಶಬ್ದ ಕೇಳಿದೊಡನೆ ರೌರವ ನರಕಕ್ಕೆ ಹೋಗುವ ಹೆದರಿಕೆಗಳು ಕಾಡುವಂಥ ಅನುಭವವಾಗುತ್ತಿತ್ತು. ಶರ್ಮರಿಗೆ ಇದು ಗೊತ್ತಿರಲಿಲ್ಲ ಎಂದೂ ಅಲ್ಲ. ನಮ್ಮನ್ನು ಬಹಳಷ್ಟು ಸಲ ಅವರು ಬೆಳೆಸಿದ್ದು ಹೀಗೆ ಅನಿರೀಕ್ಷಿತ ಶಾಕ್‌ಗಳನ್ನು ನೀಡಿಯೇ.

ಅವರ ಕವನ ಸಂಕಲನವೂ ಕೂಡ ಆ ಕಾಲದಲ್ಲಿಯೇ ಪ್ರಕಟಗೊಂಡಿತು. 'ಹೃದಯಗೀತ' ಅವರ ಮೊದಲ ಕವನ ಸಂಕಲನ. ಅದರ ಕೆಲವು ಸಾಲುಗಳು ನನ್ನ ಮೇಲೆ ಅತ್ಯಂತ ಪ್ರಭಾವ ಬೀರಿದವು. 'ನಾನು ನನ್ನ ಎಂಬುದನ್ನು ಪ್ರಥಮದಿಂದ ಸಪ್ತಮಿ ವಿಭಕ್ತಿವರೆಗೂ ಮರೆಯ ಬಯಸಿದೆ' ಎಂಬುದೊಂದು; ಮತ್ತೊಂದು ಅದೇ ತಾನೇ ತೇನ್‌ಸಿಂಗ್ ಎವರೆಸ್ಟ್ ಹತ್ತಿ ವಿಜಯ ಸಾಧಿಸಿದ್ದ ಸುದ್ದಿ ಹಬ್ಬಿದ್ದಿತು. ಆಗ ಶರ್ಮರು ಬರೆದರು 'ನಿನ್ನ ಬಿತ್ತರದಿ ಇಹುದು ಗೌರಿಶಂಕರ, ಗೆಲ್ಲು ಅದನೇರಿ ನಿಲ್ಲು' ಎಂಬ ಸಾಲು. ನವ್ಯ ಕಾವ್ಯದ ಹಾವಳಿಯಲ್ಲಿ ಈ ಸಾಲುಗಳು ರೊಮ್ಯಾಂಟಿಕ್ ಆಗಿ ಕಂಡು ಬಿಡಬಹುದು. ಆದರೆ ಆ ವಯಸ್ಸಿನಲ್ಲಿ ಮನೆ ಮಾಡಿದ ಸಾಲುಗಳು ಇಂದಿಗೂ ಸ್ಫೂರ್ತಿ ನೀಡುತ್ತಿರುತ್ತವೆ ಎಂದು ಒಪ್ಪಿಕೊಂಡರೆ ತಪ್ಪೇನೂ ಇಲ್ಲವಲ್ಲ? 'ಸುಮಕೆ ಸೌರಭ ಬಂದ ಗಳಿಗೆ ಯಾವುದು ಹೇಳು' ಎಂದು ಅಚ್ಚರಿಪಟ್ಟ ಶರ್ಮರು ಆ ಅಚ್ಚರಿಯನ್ನು ಗಾಢ ಅನುಭವವಾಗಿಸಿದರು. ಇಂಥ ನೂರೆಂಟು ನೆನಪುಗಳು ನನ್ನಲ್ಲಿ ತುಂಬಿವೆ. ನಾನು ಶಾಲೆ ಬಿಟ್ಟ ಮೇಲೂ, ಅವರ ಕೊನೆಗಾಲದವರೆವಿಗೂ ನನ್ನನ್ನು ಒಬ್ಬ ಸ್ನೇಹಿತನನ್ನಾಗಿ ಕಂಡರು. ಎಲ್ಲ ವಿದ್ಯಾರ್ಥಿಗಳನ್ನು ಅವರು ಹಾಗೆಯೇ ನಡೆಸಿಕೊಳ್ಳುತ್ತಿದ್ದುದು ಕೂಡ. ಜೀವನದಲ್ಲಿ ಎಂದೂ ಲವಲವಿಕೆ ಕಳೆದುಕೊಳ್ಳದ, ಹಾಸ್ಯಪ್ರಜ್ಞೆ ಉಳಿಸಿಕೊಂಡ, ವಿವೇಕ ಹಾಗೂ ಅತ್ಯಂತ ವಸ್ತುನಿಷ್ಠವಾಗಿ ಸಾಮಾಜಿಕ, ರಾಜಕೀಯ ವಿಷಯಗಳ ಬಗ್ಗೆ ನಿಲುವು ತಾಳುವ ತಮ್ಮ ಶಕ್ತಿಯನ್ನು ಜೀವಂತ ಉಳಿಸಿಕೊಂಡ ಒಬ್ಬ ಸ್ನೇಹಮಯೀ, ಸಹೃದಯ ವ್ಯಕ್ತಿಯಾಗಿ ಬಾಳಿದರು.

ಅವರು ತೀರಿಕೊಳ್ಳುವುದಕ್ಕೆ ಎರಡು ವಾರಗಳ ಮುಂಚೆ ಗೆಳೆಯ ಕೆ. ರಾಮದಾಸ್ ಅವರೊಂದಿಗೆ ಅವರನ್ನು ಭೆಟ್ಟಿಯಾಗಿದ್ದೆ. ಅದೇ ಲವಲವಿಕೆ, ಅದೇ ನಗು, ಅದೇ ಜೀವನೋತ್ಸಾಹ. ತಮ್ಮ ರೋಗ, ಸಾವು ಕದ ತಟ್ಟುತ್ತಿದೆ ಎಂಬ ಭಯ ಆತಂಕ ಇವುಗಳ ಬಗ್ಗೆ ಲವಲೇಶವೂ ಮಾತನಾಡದೆ ನಮ್ಮ ಬಗ್ಗೆಯೇ ಮಾತನಾಡಿದರು. ಬದುಕು ಸಾವಿಗಿಂತ ಎಷ್ಟು ಮುಖ್ಯ, ಎಷ್ಟು ಆಕರ್ಷಕ, ಎಷ್ಟು ಕುತೂಹಲಕಾರಿ ಎಂಬುದನ್ನು ಆ ಗಳಿಗೆಯಲ್ಲೂ ನಮಗೆ ಕಲಿಸಿಕೊಟ್ಟರು. ಇಂಥ ಒಬ್ಬರನ್ನು ನನ್ನ ಆ ಎಳೆವಯಸ್ಸಿನಲ್ಲಿ ಅಧ್ಯಾಪಕನಾಗಿ ಪಡೆದದ್ದು ನನ್ನ ಭಾಗ್ಯ. ನಂತರ ಅವರು ನನ್ನನ್ನು ಸ್ನೇಹಿತನನ್ನಾಗಿ ಕಂಡರೂ, ನಾನು ಮಾತ್ರ ಅವರನ್ನು ನನ್ನ ಮೇಷ್ಟರೆಂದೇ ಕಂಡಿದ್ದೇನೆ. ಮೇಷ್ಟರೆಂದೇ ನನ್ನ ಮನಸ್ಸಿನಲ್ಲಿ ಹಸಿರಾಗಿ ಉಳಿಸಿಕೊಳ್ಳಲು ಯತ್ನಿಸುತ್ತೇನೆ. ಅವರಿಂದ ಕಲಿಯುತ್ತಲೇ ಇರುತ್ತೇನೆ.

ಪ್ರೊ|| ಜಿ. ಕೆ. ಗೋವಿಂದ ರಾವ್
ನಂ. ೧೬೧, ೧ನೇ ಮಹಡಿ, ೩೬ನೇ 'ಎ' ಕ್ರಾಸ್, ೭ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೮೨



# ಸಮಾಜವಾದದ ಹರಿಕಾರ ಡಾ॥ ರಾಮ ಮನೋಹರ ಲೋಹಿಯಾ

ಬಡವ ಹಾಗೂ ಶೋಷಿತ ವರ್ಗಗಳ ವಕ್ತಾರನಾಗಿ ಅವರ ಅಂತರಾಳದ ನೋವಿಗೆ ಧ್ವನಿಯಾಗಿ ಭಾರತದ ಸಾಂಸ್ಕೃತಿಕ ಬದುಕಿನಲ್ಲಿ ಕ್ರಿಯಾಶೀಲ ಬದುಕು, ಬರಹ ಹಾಗೂ ಚಟುವಟಿಕೆಗಳಿಂದ ಜನಪ್ರಿಯರಾಗಿದ್ದ ವಿಶ್ವದ ಕೆಲವೇ ಶ್ರೇಷ್ಠ ಸಮಾಜವಾದಿ ನಾಯಕರಲ್ಲಿ ಒಬ್ಬರೆಂದೇ ರಾಮ ಮನೋಹರ ಲೋಹಿಯಾ ಖ್ಯಾತರಾಗಿದ್ದರು. ಅವರಲ್ಲಿ ಮಾನವೀಯ ಗುಣಗಳು, ಕಂಡದ್ದನ್ನು ಕಂಡಂತೆ ಹೇಳುವ, ಆಡಳಿತ ಹಾಗೂ ರಾಜಕೀಯದಲ್ಲಿ ಅನಗತ್ಯ ಖರ್ಚು ದುಂದುಗಾರಿಕೆಯನ್ನು ಟೀಕಿಸುವ ರೀತಿಯು ಜನರಲ್ಲಿ ಅವರ ಬಗ್ಗೆ ಅಭಿಮಾನ ಮೂಡಿಸಿದ್ದವು.

ಭಾರತವು ಆಂಗ್ಲರ ಕಪಿಮುಷ್ಠಿಯಲ್ಲಿದ್ದ ಕಾಲದಲ್ಲಿ ಉತ್ತರ ಪ್ರದೇಶದ ಫೈಜಾಬಾದ ಜಿಲ್ಲೆಯ ಅಕ್ಬರಪುರದಲ್ಲಿ ತಾ॥ ೨೩-೩-೧೯೧೦ರಂದು ಜನಿಸಿದ ಲೋಹಿಯಾ ತಮಗೆ ತಿಳುವಳಿಕೆ ಬಂದಲಾಗಾಯ್ತು, ಜನಸಮುದಾಯದ ನೋವು, ನಲಿವು ಕಷ್ಟ ನಷ್ಟಗಳ ಮೂಲವನ್ನು ಕೆದುಕಿ ಅದಕ್ಕೆ ಪರಿಹಾರ ಹುಡುಕುವ ಅದಮ್ಯ ಚೇತನವಾಗಿದ್ದರು. ಬಡವ ಬಲ್ಲಿದರ ನಡುವಿನ ಅಂತರ, ಬಲ್ಲಿದರಿಂದ ಆಗುತ್ತಿರುವ ಅನ್ಯಾಯ ಹಾಗೂ ಅಕ್ರಮಗಳನ್ನು ಬುಡಸಹಿತ ನಿರ್ಮೂಲನೆ ಮಾಡುವ ಹಠವನ್ನು ಹೊಂದಿದ್ದ ಲೋಹಿಯಾ ಅವರು ಸರ್ವರಿಗೂ ಸಮ ಬಾಳಿನ ಸಾಮಾಜಿಕ ನೆಲಗಟ್ಟನ್ನು ತೋರಿಸಿಕೊಡುವ ರೀತಿಯಲ್ಲಿ ತಮ್ಮ ಹೋರಾಟವನ್ನು ರೂಪಿಸಿಕೊಂಡಿದ್ದರು.

ನಾಗರಿಕರ ಹಕ್ಕು ಹಾಗೂ ನೈತಿಕ ಜವಾಬ್ದಾರಿಗಳ ಸಮರ್ಪಕ ಜಾರಿಯ ಕುರಿತು ಕೇವಲ ಭಾರತದಲ್ಲಿ ಮಾತ್ರವಲ್ಲ, ವಿದೇಶದಲ್ಲಿಯೂ ಹೋರಾಟ ಮಾಡುತ್ತಿದ್ದರು. ಇದರಿಂದಾಗಿ ಆಡಳಿತಶಾಹಿಗಳ ಕೆಂಗಣ್ಣಿಗೆ ಗುರಿಯಾಗುತ್ತಿದ್ದ ರಾಮ ಮನೋಹರ ಲೋಹಿಯಾ ಮೇಲಿಂದ ಮೇಲೆ ಬಂಧನಕ್ಕೆ ಒಳಗಾಗುತ್ತಿದ್ದರಲ್ಲದೇ ಸೆರೆಮನೆ ವಾಸವನ್ನೂ ಅನುಭವಿಸಬೇಕಾಗಿ ಬಂದಿತು.

ಭಾರತೀಯರಲ್ಲಿ ಮನೆಮಾಡಿದ್ದ ಪುರೋಹಿತಶಾಹಿ, ವರ್ಗ, ವರ್ಣ, ಜಾತಿ, ಪಂಥ, ಲಿಂಗ ಭೇದಗಳ ಅರಿವು ಹೊಂದಿದ್ದು ಲೋಹಿಯಾ ಪ್ರಜಾಪ್ರಭುತ್ವ ವಿಕೇಂದ್ರೀಕರಣ ಹಾಗೂ ಅಹಿಂಸೆಯ ಹಾದಿಯಲ್ಲೇ ಅಸ್ಪೃಶ್ಯತೆ, ಮೌಢ್ಯ, ಕೀಳರಿಮೆಗಳಂತಹ ರಾಷ್ಟ್ರವನ್ನು ಅವನತಿಗೆ ದೂಡಬಹುದಾದ ಭಯಂಕರತೆಯ ವಿರುದ್ಧ ಹಾಗೂ ಮಾನವೀಯ ಮೌಲ್ಯಗಳನ್ನು ಪ್ರತಿಷ್ಠಾಪಿಸಲು ಕೆಚ್ಚಿನಿಂದ ಹೋರಾಡುತ್ತಲೇ ಬಂದರು.

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಕ್ರಿಯಾಶೀಲವಾಗಿ ಭಾಗವಹಿಸಿದ ಲೋಹಿಯಾ ಅವರು ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ ಆದರ್ಶಗಳನ್ನು, ಅಹಿಂಸಾತ್ಮಕ ಹೋರಾಟದ ಹಾದಿಯನ್ನು ಮೆಚ್ಚಿಕೊಂಡು ಗಾಂಧೀಜಿಯವರ ಶಿಷ್ಯರಾಗಿ ಅವರ ಮಾನಸಪುತ್ರರಾಗಿ ಬಿಂಬಿತರಾಗಿದ್ದರು. ಸೃಜನಶೀಲ ಬದುಕು ಬಾಳಿದ ಲೋಹಿಯಾ ಎಲ್ಲ ಸತ್ಯಗಳ ಸಮರ್ಪಕ ತಿಳುವಳಿಕೆ ಹೊಂದುವ ಬಗ್ಗೆ ಹೊಂದಿದ್ದ ಅರಿವು ಹಾಗೂ ಸೂಕ್ಷ್ಮಜ್ಞತೆ ಪ್ರಭಾವಯುತವಾಗಿತ್ತು.

ಸಮಾಜದಲ್ಲಿ ನಡೆಯುವ ಅನ್ಯಾಯ ಹಾಗೂ ಅದರ ವಿರುದ್ಧ ಹೋರಾಡುವ ಮನೋಭಿಲಾಷೆಯು ಉತ್ಕೃಷ್ಟ ಹಾಗೂ ಅದಮ್ಯಶಕ್ತಿಯಾಗಿ ರೂಪಿತಗೊಳ್ಳುತ್ತದೆ ಎಂಬುದನ್ನು ಲೋಹಿಯಾ ಬಲವಾಗಿ ನಂಬಿದ್ದರು. ಆ ದಿಶೆಯಲ್ಲಿ ಅನನ್ಯ ಜೀವನೋತ್ಸಾಹ ಮತ್ತು ಕರ್ತವ್ಯಪ್ರಜ್ಞೆಗಳನ್ನು ಬೆಳೆಸಿಕೊಂಡಿದ್ದರು.

ಸಾಮಾಜಿಕ ಪಿಡುಗುಗಳೆಂದೇ ಹೇಳಬಹುದಾದ ಪುರುಷ ಮಹಿಳೆಯರ ಮಧ್ಯದ ಅಸಮಾನತೆ, ವರ್ಣಭೇದ ನೀತಿ, ಹುಟ್ಟಿನ ಆಧಾರದಿಂದ ಅನುಸರಿಸುವ ಅಸಮಾನತೆ, ವಿದೇಶಿ ದಬ್ಬಾಳಿಕೆ, ವ್ಯಕ್ತಿಗತ ಸಂಪತ್ತಿನಿಂದ ಉದ್ಭವಿಸುವ ಆರ್ಥಿಕ ಅಸಮಾನತೆ, ಕುಲನಾಶಕ ಶಸ್ತ್ರಗಳನ್ನು ಒಡೆಯುವಲ್ಲಿ ಪೈಪೋಟಿ, ಸಾರ್ವಜನಿಕ ಕಾನೂನು ಭಂಗ, ವೈಯಕ್ತಿಕ ಸ್ವಾತಂತ್ರ್ಯದ ಮೇಲಿನ ಅತಿಕ್ರಮಣ – ಇವೇ ಮುಂತಾದವುಗಳ ವಿರುದ್ಧ ಪ್ರಬಲ ಹೋರಾಟ ನಡೆಸಿದ ಲೋಹಿಯಾ ಅವರು ಅವುಗಳನ್ನು ನಿವಾರಿಸುವಲ್ಲಿ ಸಮಾಜವಾದಿಗಳು ಕಟ್ಟೆಚ್ಚರದಿಂದ ಇರಬೇಕಾದ ಅವಶ್ಯಕತೆಯನ್ನು ಮನಗಂಡಿದ್ದರು.

ರಾಮ ಮನೋಹರ ಲೋಹಿಯಾರವರು ತಾವು ನಂಬಿಕೊಂಡು ಬಂದ ತತ್ವಗಳನ್ನು ಅರ್ಥಪೂರ್ಣವಾಗಿ ಅರ್ಥೈಸಿ ಅವುಗಳ ಸಾಧಕ ಬಾಧಕಗಳ ಬಗ್ಗೆ ಸಮಗ್ರ ಚಿಂತನೆ ಮಾಡಿ ಅವುಗಳನ್ನು ಸಮರ್ಪಕವಾಗಿ ಜಾರಿಯಲ್ಲಿ ಬರುವಂತೆ ಮಾಡುವಲ್ಲಿ ಪ್ರಾಮಾಣಿಕ ಹೋರಾಟ ನಡೆಸಿದರು.

ರಾಮ ಮನೋಹರ ಲೋಹಿಯಾ ಸಮಾಜವಾದದ ಹಿನ್ನೆಲೆಯಲ್ಲಿ ಬೆಳೆದು ಬಾಳು ರೂಢಿಸಿಕೊಂಡು ತಮ್ಮ ಅಭಿಪ್ರಾಯಗಳನ್ನು ಜನರಿಗೆ ತಿಳಿಸಿ ಅವರಲ್ಲಿಯ ಸೂಕ್ತ ಪ್ರಜ್ಞೆಯನ್ನು ಬಡಿದೆಬ್ಬಿಸುವ ವಿಚಾರಪೂರ್ಣ ಲೇಖನಗಳನ್ನು ನಾಡಿನ ವಿವಿಧ ಆಂಗ್ಲ ಮತ್ತು ಹಿಂದಿ ಪತ್ರಿಕೆಗಳಲ್ಲಿ ಪ್ರಕಟಣೆಗೆ ಕಳಿಸಿಕೊಡುತ್ತಿದ್ದರು. ದಾಸ್ಯದ ಸಂಕೋಲೆಯಲ್ಲಿದ್ದ ಭಾರತದ ಕೆಲವು ಪತ್ರಿಕೆಗಳು ಅಂತಹ ಲೇಖನಗಳನ್ನು ಪ್ರಕಟಿಸಲು ಮುಂದಾಗದಾಗ ಅವುಗಳನ್ನು ತಾವೇ ಮುದ್ರಿಸಿ ಪ್ರಕಟಿಸುತ್ತಿದ್ದುದನ್ನು ಕಾಣಬಹುದಾಗಿದೆ.

ಐವತ್ತೇಳು ವರ್ಷಗಳ ತುಂಬುಜೀವನ ನಡೆಸಿದ ರಾಮ ಮನೋಹರ ಲೋಹಿಯಾ ಜಾತಿ, ಲಿಂಗಾಧಾರಿತ ಅಸಮತೆಗಳ ವಿರುದ್ಧ ಧ್ವನಿಯೆತ್ತಿ ೧೯೩೫ರಲ್ಲಿ ತಮ್ಮ ಇಪ್ಪತ್ತೈದನೇ ವಯಸ್ಸಿನಲ್ಲಿಯೇ 'ಶೂದ್ರನಿಗೊಂದು ಪತ್ರ'ವೆಂಬ ಲೇಖನದಲ್ಲಿ ದ್ವಿಜ ಮನಃಸ್ಥಿತಿಯ ವಿರುದ್ಧ ಹೋರಾಟ ಮನೋಭಾವ ಹೊಂದಿದ್ದು, ಅವರು ''ಬ್ರಾಹ್ಮಣರು ಶೂದ್ರರನ್ನು, ಶೂದ್ರರು ಬ್ರಾಹ್ಮಣರನ್ನು, ಮೇಲೆತ್ತಬೇಕಾದ ಅನಿವಾರ್ಯತೆ ಇದೆ'' ಎಂದು ಬರೆದು ಬ್ರಾಹ್ಮಣ ಹಾಗೂ ಶೂದ್ರರಲ್ಲಿರುವ ಅಂತರ ಹಾಗೂ ವ್ಯತ್ಯಾಸವನ್ನು ಕಡಿಮೆ ಮಾಡುತ್ತಾ ಅದನ್ನು ತೊಡೆದುಹಾಕುವ ಅವಶ್ಯಕತೆಯನ್ನು ಮಾರ್ಮಿಕವಾಗಿ ಬಿಂಬಿಸುವಲ್ಲಿ ಯಶಸ್ವಿಯಾಗಿದ್ದಾರೆ. ಲೋಹಿಯಾ ಸರ್ವರಲ್ಲಿ ಸಮಾನತೆ ಬಯಸುವ ಮೇಲ್ವರ್ಗದ ಯುವಕರ ಜೊತೆಗೆ ಶೂದ್ರರು ಹಾಗೂ ದುರ್ಬಲ ವರ್ಗಗಳು ಒಂದುಗೂಡಿ ರಾಜಕೀಯ ಸಂಘಟನೆಗೆ ಸಮಾನ ವೇದಿಕೆಯೊಂದನ್ನು ರಚಿಸುವ ಬಯಕೆ ಹೊಂದಿದ್ದರು. ಮೈಬಣ್ಣ ಹಾಗೂ ಜಾತಿ ಮೂಲದ ಕೀಳರಿಮೆಗಳ ಹಿನ್ನೆಲೆಯಲ್ಲಿ ಜಾತಿ ಪದ್ಧತಿಯ ಆಧಾರದ ಮೇಲೆ ಹುಟ್ಟಿದ ಶ್ರೇಷ್ಠತೆಯ ಹಾಗೂ ಮೈಬಣ್ಣವನ್ನಾಧರಿಸಿದ ಸೌಂದರ್ಯ ಕಲ್ಪನೆಗಳು ಒಂದೇ ರೂಪದ ಮನೋ ವಿಕಾರತೆ ಹೊಂದಿದ್ದವು ಎಂಬುದನ್ನು ಲೋಹಿಯಾ ಜಗತ್ತಿನ ಹಲವು ಬಗೆಯ ವಿಚಾರಗಳಿಗೆ ಕಾರಣವಾಗಿರುವುದನ್ನು ಕಂಡುಕೊಂಡಿದ್ದರು.

ಸಮಾಜವಾದಿ ಸಿದ್ಧಾಂತಗಳನ್ನು ನಂಬಿದ್ದ ರಾಮ ಮನೋಹರ ಲೋಹಿಯಾ ಉತ್ತಮ ಸಂಸದೀಯ ಪಟುವಾಗಿದ್ದರು. ಸ್ವಾತಂತ್ರ್ಯೋತ್ತರ ದಿನಗಳಲ್ಲಿ ನೆಹರೂ ಯುಗದ ಕಟು ಟೀಕಾಕಾರರಾಗಿದ್ದ ಲೋಹಿಯಾ ಕಾಂಗ್ರೆಸ್ಸೇತರವಾದದ ತೀವ್ರ ಪ್ರತಿಪಾದಕರಾಗಿದ್ದರು. ಪ್ರಜಾಸಮಾಜವಾದಿ ಪಕ್ಷ ರಚಿಸಿದ ಪ್ರಮುಖರಲ್ಲೊಬ್ಬರಾಗಿದ್ದರು. ೧೯೬೨ರಲ್ಲಿ ನೆಹರೂ ವಿರುದ್ಧ ಲೋಕಸಭೆಗೆ ಸ್ಪರ್ಧಿಸಿ ಸೋತರು. ೧೯೬೩ ಹಾಗೂ ೧೯೬೭ರಲ್ಲಿ ಲೋಕಸಭೆಗೆ ಫರೂಕಾಬಾದ್ ಹಾಗೂ ಕನೌಜ್ ಕ್ಷೇತ್ರಗಳಿಂದ ಆಯ್ಕೆಯಾಗಿದ್ದರು. ಸಂಸತ್ ಸದಸ್ಯರಾಗಿ ಅವರು ಭಾರತೀಯ ಭಾಷೆಗಳ ಸಮರ್ಪಕ ಬಳಕೆಯ ಕುರಿತು ಒತ್ತಾಸೆ ತಂದಿದ್ದರು. ಸಂಸತ್ತಿನಲ್ಲಿ ಸರಕಾರಕ್ಕೆ ಇರುಸು

ಬಸವರಾಜ ಹುಡೇದಗಡ್ಡಿ

ಮುರುಸಾಗುವ ಸತ್ಯಸಂಗತಿಗಳನ್ನಾಧರಿಸಿದ ಪ್ರಶ್ನೆಗಳನ್ನು ಕೇಳುವ ಮೂಲಕ ಪ್ರಬಲ ಪ್ರಧಾನಿ ಎಂದೇ ಹೆಸರಾಗಿದ್ದ ಪಂಡಿತ್ ಜವಾಹರ್‌ಲಾಲ್ ನೆಹರು ಅವರನ್ನು ಇಕ್ಕಟ್ಟಿಗೆ ಸಿಗಿಸುತ್ತಿದ್ದರು. ನಮ್ಮ ನಾಡಿನ ನೇತಾರಾಗಿದ್ದವರ ದೈನಂದಿನ ವೆಚ್ಚಗಳ ಬಗ್ಗೆ ಪ್ರಶ್ನಿಸುವ ಮೂಲಕ ಅಧಿಕಾರ ಶಾಹಿಗಳ ಹಾಗೂ ಮೇಲ್ವರ್ಗದವರ ಖರ್ಚು, ಸಾರ್ವಜನಿಕ ಹಾಗೂ ಖಾಸಗಿ ವಲಯದಲ್ಲಿ ಆಗುತ್ತಿದ್ದ ಅನವಶ್ಯಕ ಹಾಗೂ ಅಸಂಬದ್ಧ ವೆಚ್ಚಗಳನ್ನು ತಗ್ಗಿಸಿ ನಾಡನ್ನು ಅಭಿವೃದ್ಧಿ ಪಥದಲ್ಲಿ ಒಯ್ಯುವ ಉತ್ತಮ ಯೋಜನಾ ನೀತಿ, ಸಮರ್ಪಕ ತೆರಿಗೆ ನೀತಿ ಹಾಗೂ ದಿನಸಿಗಳಿಗೆ ನ್ಯಾಯಬದ್ಧ ಬೆಲೆಯನ್ನು ನಿಗದಿಪಡಿಸುವಂತೆ ಅವರು ಸರಕಾರದ ಮೇಲೆ ಒತ್ತಡ ತರಲು ಪ್ರಾಮಾಣಿಕ ಪ್ರಯತ್ನ ಮಾಡಿದರು.

ಆಂಗ್ಲ ಭಾಷೆಯ 'ಮ್ಯಾನ್‌ಕೈಂಡ್' ಹಾಗೂ ಹಿಂದಿ ಭಾಷೆಯ 'ಚೌಕಂಬಾ' ದೈನಿಕಗಳ ಸಂಪಾದಕರಾಗಿ ಉತ್ತಮ ಲೇಖನಗಳನ್ನು ಬರೆದು ಉತ್ಕೃಷ್ಟ ಪತ್ರಕರ್ತರಾಗಿದ್ದರು. ಆಂಗ್ಲ ಮತ್ತು ಹಿಂದಿ ಭಾಷೆಗಳ ಮೇಲೆ ಪ್ರಭುತ್ವ ಹೊಂದಿದ್ದ ಲೋಹಿಯಾ ಅವರು 'ದಿ ಕಾಸ್ಟ್ ಸಿಸ್ಟಮ್', 'ಮಾರ್ಕ್ಸ್ ಗಾಂಧಿ ಆ್ಯಂಡ್ ಸೋಷಿಯಲಿಸಂ', 'ಗಿಲ್ಟಿ ಮೆನ್ ಆಫ್ ಇಂಡಿಯಾಸ್ ಪಾರ್ಟಿಷನ್', 'ಇಂಟರವಲ್ ಡ್ಯೂರಿಂಗ್ ಪಾಲಿಟಿಕ್ಸ್', 'ಲ್ಯಾಂಗ್ವೇಜ್' – ಮುಂತಾದ ಕೃತಿಗಳನ್ನು ಆಂಗ್ಲ ಭಾಷೆಯಲ್ಲಿ, ಹಿಂದಿ ಭಾಷೆಯಲ್ಲಿ 'ಸಮಾಜವಾದಿ ಆಂದೋಲನ ಕಾ ಇತಿಹಾಸ್', 'ಹಿಂದೂ ಮುಸಲ್ಮಾನ್', 'ಅನ್ನ ಸಮಸ್ಯ' ಮುಂತಾದ ಜನಪ್ರಿಯ ಲೇಖನಗಳನ್ನು ಬರೆದಿದ್ದಾರೆ.

ತಾವು ನಂಬಿಕೊಂಡು ಬಂದಿದ್ದ ಸಮಾಜವಾದದ ಬದುಕಿನ ಕನಸು ನನಸಾಗದಿರುವುದನ್ನು ಕಂಡು ನೊಂದಿದ್ದ ಲೋಹಿಯಾ ಅವರು ತಮ್ಮ ದೇಹ, ಮನಸ್ಸು ಹಾಗೂ ದೇಶಗಳು ಕೆಡುತ್ತಿರುವ ಬಗ್ಗೆ ಆತ್ಮಾವಲೋಕನ ಮಾಡಿಕೊಳ್ಳುತ್ತಾ ''ನನ್ನ ಮನಸ್ಸು ಕೆಟ್ಟುಹೋಗಿದೆ ಎಂದು ನನಗನ್ನಿಸುತ್ತಿದೆ. ಈಗದನ್ನು ಸರಿಪಡಿಸಲು ಸಾಧ್ಯವಾಗಲಾರದು. ಬಹುಶಃ ದೇಶ ಸುಧಾರಿಸತೊಡಗಿದಾಗ ಅದು ಸರಿಯಾಗ ಬಹುದೇನೋ. ಇದು ನನ್ನ ಜೀವನದಲ್ಲಿ ಅಸಾಧ್ಯವೆಂದು ಕಾಣುತ್ತದೆ'' ಎಂದು ಹತಾಶೆಯ ಮಾತುಗಳನ್ನಾಡಿದ್ದರು.

ಲೋಹಿಯಾ ಅವರ ಕಣ್ಣುಮುಂದಿನ ಹೊಲಸು ರಾಜಕೀಯದ ಕುರಿತು ಅವರು ''ತಿಮಿಂಗಿಲುಗಳು, ಹೆಗ್ಗಣಗಳು ಹಾಗೂ ಆಮೆಗಳು ಮಾತ್ರ ರಾಜಕಾರಣಕ್ಕೆ ಸೂಕ್ತವಾದವು ಎಂಬುದು ನನಗೆ ಹೆಚ್ಚು ಕಡಿಮೆ ಖಾತ್ರಿಯಾಗಿದೆ'' ಎಂದು ಅಭಿಪ್ರಾಯ ವ್ಯಕ್ತಪಡಿಸಿದರೂ, ಅಂತಿಮವಾಗಿ ''ರಾಜಕಾರಣ ಎನ್ನುವುದು ಅಲ್ಪಾವಧಿಯ ಧರ್ಮ ಹಾಗೂ ಧರ್ಮವೆನ್ನುವುದು ದೀರ್ಘಾವಧಿಯ ರಾಜಕಾರಣ ಇವೆರಡೂ – ಮಾನವ ಕುಲದ ಉದಾತ್ತ ಮೌಲ್ಯಗಳು'' ಎಂದು ಬಲವಾಗಿ ನಂಬಿರುವುದು ಕಂಡುಬರುತ್ತದೆ. ಸಾಮಾನ್ಯ ಜನರ ಬದುಕನ್ನು ಸುಧಾರಿಸುವ ಮೂಲಕ ಸಾಮಾಜಿಕ ನ್ಯಾಯಕ್ಕೆ ಹೋರಾಟದ ಹಾದಿಯಲ್ಲಿ ಮುನ್ನಡೆದ ಮಹಾನ್ ಸಮಾಜವಾದಿ ರಾಮ ಮನೋಹರ ಲೋಹಿಯಾ ೧೯೬೭ರ ಅಕ್ಟೋಬರ್ ೧೨ರಂದು ಕಾಲವಶವಾದರು.


ಬಸವರಾಜ ಹುಡೇದಗಡ್ಡಿ
ಸಹಾಯಕ ಅಭಿಯೋಗ ನಿರ್ದೇಶಕರು
ನ್ಯಾಯಾಲಯಗಳ ಆವರಣ, ಹಾವೇರಿ - ೫೮೧ ೧೧೦




# ಮನೆ ಮುಂದೆ ಮಳೆ

ಬಾನೊಡಲಿನ ಬೆಳ್ಳಿ
ಎಳೆ ಎಳೆಯಾಗಿ ಇಳೆಗಿಳಿದಂತೆ
ಮುತ್ತುಮಳೆ ಮುದ್ದುಮಳೆ
ಮಾತಿಲ್ಲದೆ ಮೈಕೊಟ್ಟು ನೆನೆದಿದೆ ಮುತ್ತೈದೆ ತಿರೆ
ತಾನಾಗಿ ವರವಾಗಿ ಸುರಿದಿದೆ ಹರ್ಷವರ್ಷಧಾರೆ
ಜಳಕ ಪುಳಕಿತ ಪ್ರಕೃತಿ ಕಾಂತ ವಿಕ್ರಾಂತ
ತೊಳೆದು ಹೊಳೆದ ಜಗದೆಲ್ಲ ಸೌಂದರ್ಯ
ಬಿಚ್ಚಿಟ್ಟ ಸ್ಪಷ್ಟ ಚಿತ್ರ
ಮುಗಿಲ ಹೊಸ ಕೂಸಂತೆ ಚಿಮ್ಮಿ ತೇಲಿದ ಕಾಮನಬಿಲ್ಲು
ಬಾನೆದೆಯ ಕನಸುಗಳ ಬಣ್ಣದ ಸೊಲ್ಲು
ಹಸಿರು ಪೊದೆಗಳ ಮೇಲಿನ ಕ್ಷಣಮುಂಚಿನ ಪಕ್ಷಿಗಾನ
ಇದೀಗ ರೆಕ್ಕೆ ಮುದುಡಿದ ಶೀತಲಮೌನ

ಅತ್ತ ಮಂಜುತೆರೆಯ ಹಿಂದಿನ ಸುಭಗೆ ಶಿವಗಂಗೆ
ಅವಕುಂಠನದ ಮರೆಯ ಧ್ಯಾನಸ್ಥ ಮುನಿ ಕನ್ಯೆ
ಇತ್ತ ಬಂಗಾರದ ಬೆಡಗಿನ ಸ್ತಬ್ಧ ಸಾವನದುರ್ಗ
ಕ್ಷೀರಾಭಿಷಿಕ್ತ ಪವಿತ್ರ ಶಿವಲಿಂಗ

ಮಳೆಮೋಡ ಮಿಂಚು–ಸಂಚುಗಳ ಈ ವಿಹಂಗಮ
ಜಗದ ಜಗುಲಿಯ ಸ್ನಾನ ಸಂಭ್ರಮ
ಧರೆಯೆಲ್ಲ ತೊಳೆದು ಒಳಗೆಲ್ಲ ಹೊಳೆದು
ಸಾವಿರ ಸವಿಪುಳಕ
ಅಂತರಂಗ ಶ್ರುತಿ ಮಾಡಿಟ್ಟ ನೂರು ವೀಣೆ

ಮನಸೇ ಮೆಲ್ಲಗೆ ಹಾಡು
ಕದಲದಿರಲಿ ಈ ಮೌನ ಈ ಪುಳಕ
ಈ ಶ್ರುತಿ ಈ ಸಮಾಧಿಸ್ಥಿತಿ.


ಭಾರತೀ ಕಾಸರಗೋಡು
ನಂ. ೭೩೬, ೧೪ನೇ ಅಡ್ಡರಸ್ತೆ, ಭರತ್‌ನಗರ ೧ನೇ ಘಟ್ಟ, ಬಿ.ಇ.ಎಲ್. ಬಡಾವಣೆ, ಮಾಗಡಿ ರಸ್ತೆ, ಬೆಂಗಳೂರು - ೫೬೦ ೦೯೧

# ರಾತ್ರಿಯ ಆ ಪಯಣ

ಬ. ನಾ. ರಘುರಾಮ



**ಶೇ**ರ್‌ಸಿಂಗ್‌ನ ತಮ್ಮ ಮಗು ಕುಂವರ್ ಗುಡಿಸಿಲಲ್ಲಿ ಹೊಟ್ಟೆ ನೋವು ಅತೀವವಾಗಿ ಸಂಕಟದಿಂದ ಮುಲುಗುತ್ತ ಮಲಗಿತ್ತು. ಶೇರ್‌ಸಿಂಗನೂ ಸಣ್ಣವನೇ. ಹನ್ನೆರಡು ತುಂಬಿರಲಿಲ್ಲ, ಸುತ್ತಲಿನ ಅಡವಿಯಲ್ಲಿ ಆಡಿಕೊಂಡು ಮನೆಯ ದನ ಮೇಯಿಸಿಕೊಂಡು ಖುಷಿಯಿಂದ ಬೆಳೆಯುತ್ತಿದ್ದವನು. ಈ ತಮ್ಮ ಅವನಿಗಿಂತ ಬಹಳ ಚಿಕ್ಕವನು. ಶೇರ್‌ಗೆ ಇತರ ಅಣ್ಣತಂಗಿಯರೂ ಇದ್ದರು, ಆದರೆ ಈಗ ಯಾರೂ ಉಳಿದಿರಲಿಲ್ಲ. ಕಾಲರಾ ಇನ್‌ಫ್ಲುಯೆಂಜಾ ಅವರನ್ನು ನುಂಗಿದ್ದವು.

ತಾಯಿ ಹೇಳಿದಳು, ''ಆ ಅರಿವಿ ತುಂಡುಗಳನ್ನು ಈ ಕಡಿ ತಾ ! ಕುದಿಯೋ ನೀರಿನಾಗೆ ಅದ್ದಿ ಹಿಂಡಿ ನಿನ್ನ ತಮ್ಮನ ಹೊಟ್ಟೀಗೆ ಕಾವು ಕೊಡ್ತೀನಂತೆ. ಸೂಲಿ ಕಮ್ಮಿ ಆದೀತು.'' ಆಕೆ ಈ ಗುಡಿಸಿಲಿಗೆ ಹೆಂಡತಿಯಾಗಿ ಬಂದಾಗಿನಿಂದ ಬೇಕಾದಷ್ಟು ಕಷ್ಟ ಕಂಡವಳು. ಯಾವುದಕ್ಕೆಂದು ಅಳುವುದು ? ಅಳು ಬತ್ತಿಹೋಗಿತ್ತು.

ಅವಳ ಚಿಕಿತ್ಸೆಯಿಂದ ಪರಿಣಾಮವೇನಾಗಲಿಲ್ಲ. ನಿಟ್ಟುಸಿರುಬಿಡುತ್ತ ಹೇಳಿದಳು, ''ಕಾಲಾಘಾಟ್‌ನ ದವಾಖಾನೀಗೆ ಇವನ್ನ ಒಯ್ಯಬೇಕಾದೀತೇನೋ ಹೆಂಗಾದರೂ,'' ಶೇರ್‌ಸಿಂಗ್‌ಗೆ ಈಗ ಅರ್ಥವಾಯಿತು ತಮ್ಮ ಸಾಯಿತಾನೆ ಇಷ್ಟರಲ್ಲಿಯೇ ಎಂದು. ದವಾಖಾನೆ ಎಂದರೆ ಸಾಯುವ ಜಾಗ, ಎಲ್ಲ ಆ ಗುಡ್ಡಗಾಡು ಜನರಿಗೂ ಅದು ಜೀವದ ಕೊನೆಯ, ಕಣ್ಮುಚ್ಚುವ ಜಾಗವೇ ಎಂದು ಖಾತರಿ.

''ಅಮ್ಮಾ, ಓಡಿಹೋಗಿ ಅಪ್ಪನ್ನ ಕರಕೋಂಡ್ ಬರ್ತೀನಿ'' ಎಂದು ಶೇರ್‌ಸಿಂಗ್ ಎದ್ದ. ''ನಿಮ್ಮಪ್ಪನ್ನ ಎಲ್ಲೀಂತ ಹುಡುಕ್ತೀಯೋ ? ಅವ ನಿಂಗೆ ಸಿಗ್ಲಿಕ್ಕೆ ಭಾಳಾ ದಿವಸ ಬೇಕಾದೀತು. ಎಲ್ಲಿರ್ತಾನೋ ದೇವ್ರಿಗೇ ಗೊತ್ತಷ್ಟೆ'' ತಾಯಿ ಬೇಸರದಿಂದ ಹೇಳಿ, ತಡೆದಳು.

ಶೇರ್‌ಸಿಂಗ್‌ನ ತಂದೆ ಸುತ್ತಮುತ್ತಲಿನಲ್ಲಿ 'ಶೇರ್‌ಸಿಂಗ್ ಬಹದ್ದೂರ'ನೆಂದು ಬಹಳ ಹೆಸರುವಾಸಿ ಮನುಷ್ಯ, ಮಹಾ ಧೈರ್ಯಶಾಲಿ, ಗುರಿತಪ್ಪದ ಬೇಟೆಗಾರ ಎಂದು ಪ್ರಸಿದ್ಧ. 'ಬಹದ್ದೂರ್' ಎಂಬ ಅನ್ವರ್ಥನಾಮ ಅವನ ಎದೆಯ ಮೇಲೆ ಬಂಗಾರದ ಮೆಡಲ್‌ನಂತಿತ್ತು. ಆ ಲಾಲ್‌ದ್ವಾಣಿ ಹಳ್ಳಿಯಲ್ಲಿ ತನ್ನ ಆಕಳು-ಮೇಕೆಗಳನ್ನು ಮೇಯಿಸಿಕೊಂಡು, ಇದ್ದ ಚೋಟು ಹೊಲದಲ್ಲಿ ಮನೆಗೆ ಕಾಳು-ಕಡಿ ಬೆಳೆದುಕೊಂಡು ಸಂಸಾರ ಸಾಗಿಸುತ್ತಿದ್ದ. ಎಂದಾದರೂ ಅಂಗ್ರೇಜಿ ಸಾಹೇಬರು ದೊಡ್ಡ ಬೇಟೆಗೆಂದು ಈ ಕಡೆ ಕಾಡಿಗೆ ಬಂದರೆ ಈ ವೀರ ಬಹದ್ದೂರನಿಗೆ ಹೇಳಿಕಳಿಸುವರು. ಹಳ್ಳಿಯ ಇತರರು ತಮಟೆ ಬಾರಿಸಲಿಕ್ಕೆ ಜೊತೆಗೆ ಹೋಗುವರು. ಯಾರಾದರೂ ಹುಲಿಗಿಲಿ ಬಾಯಿಗೆ ಸಿಕ್ಕಿದರೆ ಇವನೇ ಹೇಗಾದರೂ ಬಿಡಿಸುತ್ತಿದ್ದ, ಅವು ಪರಚಿ ಖಂಡ, ಮಾಂಸ, ಗೋರಿ, ಎಲುಬು ಕಾಣುವಂತೆ ಮಾಡಿದ್ದ ಗುರುತುಗಳು ಮೈಮೇಲೆಲ್ಲ. ಇವತ್ತು ತನ್ನ ಪುಟ್ಟ ಮಗ ಗುಡಿಸಿಲಲ್ಲಿ ಸಾಯುತ್ತ ಬಿದ್ದಿರುವಾಗ ಕಾಡಿನೊಳಗೆ ಎಲ್ಲಿಯೋ ಬೇಟೆಗುಂಪಿನೊಡನೆ ಇದ್ದ. ಹಳ್ಳಿಯಲ್ಲಿ ಯಾರೊಬ್ಬರೂ ಗಂಡಸರಿರಲಿಲ್ಲ.

ಮಣ್ಣಿನ ಅರ್ಧಗೋಡೆ, ತಡಿಕೆ ಹುಲ್ಲು ಛಾವಣಿಯ ಆ ಗುಡಿಸಿಲಿನ ಹಸಿಮಣ್ಣಿನ ನೆಲದ ಮೇಲೆ ಹೊಟ್ಟೆ ನೋವಿನಿಂದ ನರಳುತ್ತ ಮಗು ಕುಂವರ ಮಲಗಿತ್ತು. ಮೈಮೇಲೆ ಪ್ರಜ್ಞೆ ಇದ್ದಂತಿರಲಿಲ್ಲ. ತಮ್ಮನ ತೇಲುಗಣ್ಣು ನೋಡಿದ ಶೇರ್‌ಸಿಂಗ್‌ಗೆ ಅದು ಇಷ್ಟರಲ್ಲಿಯೇ ಸಾಯುತ್ತೆ ಎನಿಸಿತು. ''ಅಮ್ಮಾ, ಹಳ್ಳ್ಯಾಗೆ ಯಾರೊಬ್ಬ ಹಿರಿಯನೂ ಇಲ್ಲ. ನಾನೇ ತಮ್ಮನ್ನ ಎತ್ತಿಕೊಂಡು ಹ್ಯಂಗಾದರೂ ಕಾಲಾಘಾಟ್ ದವಾಖಾನೀಗೆ ಒಯ್ತೀನಿ.'' ಪಾಪ, ತಾಯಿ ಜೊತೆಗೆ ಬರುವ ಹಾಗಿರಲಿಲ್ಲ. ದನ ನೋಡಿಕೊಂಡು ಹೊಲ ಮಾಡಿಕೊಂಡು ಇದ್ದರೆ ಮಾತ್ರ ಒಂದಿಷ್ಟು ಉಂಡುಕೊಂಡು ಬದುಕಬಹುದು, ಇಲ್ಲವಾದರೆ ಹಸಿವೆಯಿಂದ ಎಲ್ಲರೂ ಸಾಯಬೇಕಷ್ಟೆ. ಶೇರ್‌ಸಿಂಗ್ ಹೇಳಿದ್ದು ಕೇಳಿಯೂ ಆಕೆ ಮಾತನಾಡಲಿಲ್ಲ. ಅವಳ ಮೌನವೇ ಸಮ್ಮತಿ ಎಂದು ತಿಳಿದುಕೊಂಡ. ತಾಯಿ ತನ್ನ ಎರಡು ಹರಕು ಸೀರೆಗಳಲ್ಲಿ ಒಂದನ್ನು ಜೋಳಿಗೆಯಂತೆ ಮಾಡಿ, ಕುಂವರನನ್ನು ಎತ್ತಿ ಅದರಲ್ಲಿ ಮಲಗಿಸಿದಳು.

ತಾಯಿ ಜೋಳಿಗೆಯನ್ನು ತನ್ನ ಬೆನ್ನಿಗೇರಿಸಿದಾಗ ತಮ್ಮನ ಭಯಂಕರ ಸುಡುತ್ತಿದ್ದ ಮೈಕಾವು ಶೇರ್‌ನ ಅಂಗಿ ದಾಟಿ ಚರ್ಮಕ್ಕೆ ಬಡಿಯಿತು. ತಮ್ಮನ ಭಾರ ಸಹ ಸ್ವಲ್ಪ ಹೆಚ್ಚೆಂದೇ ಅನ್ನಿಸಿತು ಹೊರಲು. ಅಷ್ಟು ದೂರ ಹೇಗೆ ತಲುಪುವೆನೋ ಎಂಬ ಆತಂಕ ಹುಡುಗನಿಗೆ. ''ಶೇರ್ ಬೇಟಾ, ಈ ಭಾರ ಹೊತ್ಕೊಂಡ್ ಆ ದವಾಖಾನಿ ನೀ ಮುಟ್ಟೋದು ಹ್ಯಾಂಗಪ್ಪ? ಅಡವಿ ಹಾದಿ ಬ್ಯಾರೆ.'' ದಿಕ್ಕು ತೋಚದೆ ತಾಯಿ ಬಿಕ್ಕಿದಳು. ಶೇರ್‌ಸಿಂಗ್ ಏನೂ ಹೇಳಲಿಲ್ಲ. ಸೂರ್ಯ ಮುಳುಗುತ್ತಿದ್ದ, ಆ ಕೆಂಬೆಳಕಿನಲ್ಲಿ ತಮ್ಮನಿದ್ದ ಜೋಳಿಗೆಯನ್ನು ಬೆನ್ನಿಗೇರಿಸಿ ಕಾಲಾಘಾಟ್‌ಗೆ ಹೊರಟೇಬಿಟ್ಟ.

ಲಾಲ್‌ದ್ವಾಣಿಯಿಂದ ಕಾಲಾಘಾಟ್‌ಗೆ ಎಂಬತ್ತು ಕಿಲೋಮೀಟರ್‌ನಷ್ಟು ದೂರ. ''ಮಧ್ಯದ ದಟ್ಟಡವಿ ತರುವಾಯ ಎರಡು ಹಳ್ಳಗಳನ್ನು ಹೇಗಾದರೂ ದಾಟಿದೆ ನೆಂದರೆ ಮುಂದಕ್ಕೆ ಪಕ್ಕಾರಸ್ತೆ ಅದೆ. ಕಾಲಾಘಾಟ್ ಕಡೆಗೆ ಹೋಗುವ ಯಾವುದಾದರೂ ಎತ್ತಿನಬಂಡಿಯೋ, ಆಮೇಲೆ ಮುರುಕಲು ಟ್ರಕ್ಕೋ ಸಿಕ್ಕೀತು'' ಎಂದು ಆಸೆ ಹಚ್ಚಿಕೊಂಡು ನಡೆದಿದ್ದ. ಕಾಡಿನ ಕಡೆಯ ಬಳಸು ಕಾಲುದಾರಿ ಸವೆಸಿ ಕಾಡಿನ ಅಂಚು ತಲುಪಿದಾಗ ಮುಚ್ಚಂಜೆಯ ಮಬ್ಬು ಕತ್ತಲಾಗಿತ್ತು. ಒಂಟಿ ಹುಡುಗ, ಜೊತೆಗೆ ಯಾರಿರದಿದ್ದರೂ, ತಾನು ಕಾಡಿನಲ್ಲಿ ಓಡಿಯಾಡಿದವನು, ನಿಬಿಡವಾಗಿ ತುಂಬಿದ ಮರಗಿಡಗಳು, ಜಿಂಕೆ ಕಡವೆಗಳಂತೂ ಇರುತ್ತವಲ್ಲ ಎಂದು ತುಸು ಧೈರ್ಯ. ಅದು ಹಿಮಾಲಯದ ತಪ್ಪಲಿನ ಪುರಾತನ ಕಾಡು. ಲಕ್ಷಾಂತರ ವರ್ಷಗಳಿಂದ ತನ್ನಲ್ಲಿ ನಾನಾ ಬಗೆಯ ಜೀವ ಜಂತುಗಳನ್ನು ತುಂಬಿಕೊಂಡಿತ್ತು. ಆದರೇನು, ಜನ ಬೇಟೆ ಆಡಿ ಆಡಿ ಮೃಗಗಳ ಸಂತತಿಯನ್ನು ನಾಶಮಾಡುತ್ತ, ಗಿಡ-ಮರಗಳನ್ನು ಕಡಿದುರುಳಿಸುತ್ತ ನಡೆದಿದ್ದರಿಂದ ಅಲ್ಲಲ್ಲಿ ತುಸು ಬಯಲು. ತಮಗೆ ಬೇಟೆ ಸಿಗದೆ ಹುಲಿ ಚಿರತೆಗಳು

ಆಗಾಗ ಅಂಚಿನ ಹಳ್ಳಿಗಳನ್ನು ಹೊಕ್ಕು ದನಕರುಗಳನ್ನು ಒಯ್ಯುವುದಿತ್ತು, ಆಗಾಗ ಮಕ್ಕಳು ಮರಿ, ಹಿರಿಯರನ್ನೂ.

ರಾತ್ರಿ ದಟ್ಟವಾಗತೊಡಗಿತು. ಆದರೆ ಆಕಾಶ ಶುಭ್ರವಾಗಿದ್ದು ಹೊಳೆವ ನಕ್ಷತ್ರಗಳ ಬೆಳಕಿತ್ತು. ಸ್ವಲ್ಪ ಹೊತ್ತಿನಲ್ಲಿ ಹುಣ್ಣಿಮೆ ಚಂದ್ರ ಹುಟ್ಟಿದ. ಶೇರ್‌ಸಿಂಗ್‌ಗೆ ಕಾಲುಹಾದಿ ಸ್ಪಷ್ಟವಾಗಿ ಕಾಣತೊಡಗಿತು. ಕರಡಿ ಹೆಜ್ಜೆ ಗುರುತು ಕಾಣಿಸಿ ಅಂಜಿಕೆಯಿಂದ ಆಕಡೆ-ಈಕಡೆ ದೃಷ್ಟಿ ಹಾಯಿಸಿದ. ಒಮ್ಮೆ ಕರಡಿ ತನ್ನ ಹಳ್ಳಿಯವನೊಬ್ಬನ ಮೇಲೆರಗಿ ಮೈಯೆಲ್ಲ ಪರಚಿಹಾಕಿ, ಮುಖ ಮೂಗು ಕಿತ್ತಿಹಾಕಿಬಿಟ್ಟಿದ್ದನ್ನು ನೋಡಿದ್ದ. ಚುರುಕಾಗಿ ಹೆಜ್ಜೆ ಹಾಕಿದ. ಮೊದಲನೆಯ ಹಳ್ಳದ ಈಚೆಯ ಕಡಿದಾದ ದಿಬ್ಬ ಏರುವಾಗ ವಿಪರೀತ ಆಯಾಸವಾಯಿತು. ಇನ್ನು ಮುಂದಕ್ಕೆ ನಡೆಯಲು ಅಸಾಧ್ಯವೆನ್ನಿಸಿತು. ಹಳ್ಳದ ಕಡೆಗೆ ದಿಬ್ಬ ಇಳಿದು ಹಳ್ಳದ ಅಂಚಿನಲ್ಲಿ ಮೆಲ್ಲಗೆ ತಮ್ಮನಿದ್ದ ಜೋಳಿಗೆ ಕೆಳಕ್ಕಿಳಿಸಿದ. ಬೆನ್ನ ಭಾರ ಮಾಯವಾದೊಡನೆ ಮೈಯೆಲ್ಲ ವಿಚಿತ್ರ ಜುಮುಜುಮು ಗುಟ್ಟಿ ಹೇಳಲಿಕ್ಕಾಗದ ಮೈಕೈ ನೋವುಣ್ಣುತ್ತ ಅಲ್ಲಿಯೇ ಇದ್ದ ಮರದ ಬೊಡ್ಡೆಗೆ ಒರಗಿಕೊಂಡು ಕಣ್ಮುಚ್ಚಿ ಕುಳಿತ, ದಣಿವಾರಿಸಿಕೊಳ್ಳಲು.

ಜೊಂಪು ಹತ್ತಿತ್ತು, ಏನೋ ಸದ್ದು ಕೇಳಿಸಿದಂತಾಗಿ ಎಚ್ಚರವಾಯಿತು. ಹಳ್ಳದ ಆಚೆಯ ದಡದಗುಂಟ ಆನೆಗಳ ಹಿಂಡು ಹೊರಟಿತ್ತು. ಹೆಣ್ಣುಗಳು, ಮರಿಗಳು ಮತ್ತು ಒಂದು ಹಿರಿಯ ನೀಳ ದಂತಗಳಿದ್ದ ಗಂಡಾನೆ, ಅವುಗಳ ಹೆಜ್ಜೆ ಸದ್ದು, ಆಗಾಗ ಘೀಂಕಾರ ಕೇಳಿಸುತ್ತಿತ್ತು. ಹಳ್ಳ ಮೊಳಕಾಲಮಟ್ಟ ನೀರಿನದು, ಅಷ್ಟೆ. ಶೇರ್‌ಸಿಂಗ್ ಅಂಜಿದ. ಅಷ್ಟರಲ್ಲಿ ಗಂಡಾನೆ ಸೊಂಡಿಲನ್ನು ಓಲಾಡಿಸುತ್ತ ಸುಳಿ ಗಾಳಿಯಲ್ಲಿ ವಾಸನೆ ಹಿಡಿಯಲು ಯತ್ನಿಸುತ್ತಿತ್ತು. ಹೆಜ್ಜೆ ಹಿಂತೆಗೆದು ನಿಂತು ಇವರಿದ್ದ ಕಡೆಗೆ ಸೊಂಡಿಲಾಡಿಸಿತು. ಶೇರ್‌ಸಿಂಗ್‌ಗೆ ಜೋಳಿಗೆ ಹೊತ್ತಿಕೊಂಡು ದಿಬ್ಬ ಮತ್ತೆ ಏರಿ ಆ ಕಡೆಗೆ ಹೋಗಬೇಕೆನ್ನಿಸಿತು, ಭಯದಿಂದ. ಆದರೆ ಏಳಲೂ ಅಸಾಧ್ಯ ವಾಯಿತು. ತನ್ನ ಗುಡಿಸಲು ಗೂಡಿನ ದೇವರನ್ನು ನೆನೆದು ನಡುಗುತ್ತಿದ್ದ ಕೈಗಳನ್ನು ಮುಗಿದು ಮನಸ್ಸಿನಲ್ಲಿ ಬೇಡಿಕೊಂಡ. ಆ ಗಂಡಾನೆ ಘೀಳಿಟ್ಟು ತಲೆ-ಸೊಂಡಿಲುಗಳನ್ನು ಒದರಾಡಿತು. ಮನುಷ್ಯ ವಾಸನೆ ತಟ್ಟಿ ತಾಗಿ ದಾಪುಗಾಲಿಡುತ್ತ ಹಿಂಡಿನ ಸಮೇತ ಸಾಗಿ ಕತ್ತಲಲ್ಲಿ ಮಾಯವಾಯಿತು. ಶೇರ್‌ಸಿಂಗ್ ಬಚಾವಾದೆನೆಂದು ನಿಟ್ಟುಸಿರುಬಿಟ್ಟ.

ಶೇರ್‌ಸಿಂಗ್ ಮತ್ತೊಮ್ಮೆ ದೈವಕ್ಕೆ ಕೈಮುಗಿದು ಎದ್ದ. ಜೋಳಿಗೆ ಬೆನ್ನಿಗೇರಿಸಿಕೊಂಡು ಹಳ್ಳಕ್ಕೆ ಇಳಿದ. ನೀರು ಟೊಂಕಮಟ್ಟ ಇತ್ತು. ಆದರೆ ಕೆಳಗೆ ಕಲ್ಲು ಕೆಸರು ತುಂಬಿದ್ದು ಎಚ್ಚರದಿಂದ ನಿಧಾನವಾಗಿ ಹೆಜ್ಜೆ ಇಡಬೇಕಾಯಿತು. ಆ ಎರಡನೆಯ ಹಳ್ಳ ದೊಡ್ಡದು, ಪುಣ್ಯಕ್ಕೆ ಸೇತುವೆ ಇದೆಯಪ್ಪಾ ಎಂದುಕೊಂಡು ನಡೆದ. ಆದರೆ ಅದೆಂಥ ಸೇತುವೆಯೋ! ಪಕ್ಕಾ ಸೇತುವೆ ಏನಿಲ್ಲ. ದುಂಡುಕಲ್ಲುಗಳನ್ನು ಪೇರಿಸಿ ಮೇಲೆ ಜೊಂಡು-ಹುಲ್ಲು ಹೊಚ್ಚಿ ಬಗಲುಗಳಲ್ಲಿ ಬೊಂಬುಗಳನ್ನು ಆಳಕ್ಕೆ ಹುಗಿದು ಕಟ್ಟಿತ್ತು. ಏನೇ ಆದರೂ ಅದೊಂದು ಸೇತುವೆ ತಾನೆ ?

ಹಳ್ಳ ದಾಟಿ ಆಚೆಯ ದಿಬ್ಬ ಏರುವಾಗ ಹಾಕಿಕೊಂಡಿದ್ದ ಚಡ್ಡಿ ತೊಪ್ಪೆ-ತೊಯ್ದಿದ್ದು ನೀರು ಇಳಿದು ಕೆಳಗಿನ ಉಸುಕಿನಲ್ಲಿ ಬಿದ್ದು ಇಂಗುತ್ತಿತ್ತು. ದಿಬ್ಬ ಏರಿ ಎರಡು ಹೆಜ್ಜೆ ಮುಂದಿರಿಸಿದ್ದ, ಅದೇ ಮುಂದೆ ಹೋಗಿದ್ದ ಇನ್ನೂ ಹಸಿಯಿದ್ದ ಹುಲಿಯ ಹೆಜ್ಜೆಗಳು ಚಂದ್ರನ ಬೆಳಕಿನಲ್ಲಿ ಹೊಳೆಯುತ್ತಿರುವುದು ಕಂಡು ಹುಡುಗ ಬೆಚ್ಚಿ ನಿಂತ. ಆನೆ ಹಿಂಡು ಹೊರಟು ಹೋದ ಕೂಡಲೆ ಹುಲಿಯೊಂದು ತನಗಿಂತಲೂ ಮೊದಲು ಹಳ್ಳದಾಟಿ ಹೊರಟಂತಿತ್ತು. ತನ್ನ ಅದೃಷ್ಟ ಏನಿದೆಯೋ ಆಗಲಿ ಎಂದುಕೊಂಡು ಶೇರ್‌ಸಿಂಗ್ ನಡೆದ.

ಸುಮಾರು ಸರಿರಾತ್ರಿ ಹೊತ್ತಿಗೆ ದೂರದಿಂದಲೇ ಎರಡನೆಯ ಹಳ್ಳದ ಆರ್ಭಟ ಕೇಳಿಸತೊಡಗಿತು. ಅದರ ದಡ ತಲುಪಿದಾಗ ಹುಡುಗನ ಎದೆಯೊಡೆಯಿತು. ಎರಡೂ ದಡ ಮುಟ್ಟಿ ಭೋರ್ಗರೆಯುತ್ತ ಹಳ್ಳ ಪ್ರವಾಹ ತುಂಬಿ ಹರಿಯುತ್ತಿರುವುದು



ಕಾಣಿಸಿತು. ಹಿಂದಿನ ದಿನ ಬೆಟ್ಟದ ಮೇಲಣ ಹಿಮರಾಶಿ ಕರಗಿ ಪ್ರವಾಹ ಬಂದಿತ್ತು. ಸೇತುವೆಗಾಗಿ ಹುಡುಕಿದ. ಎಲ್ಲೂ ಕಾಣಿಸಲಿಲ್ಲ. ಆಮೇಲೆ ಅದಿರುವ ಜಾಗದಲ್ಲಿ ಹುಡುಕಿದಾಗ ನೀರಿನಲ್ಲಿ ಅರ್ಧ ಮುಳುಗಿಕೊಂಡ ಆ ಸೇತುವೆ ಅಸ್ಪಷ್ಟವಾಗಿ ಕಾಣಿಸಿತು. ಅದಿದ್ದ ಜಾಗದಲ್ಲಿ ನೀರು ತಡೆದು ಉಕ್ಕುವುದು ಕಂಡು ಆ ಕಡೆಗೆ ಹೆಜ್ಜೆಹಾಕಿದ. ತೇಲಿಕೊಂಡು ಬರುತ್ತಿದ್ದ ಗಿಡಮರಗಳ ಟೊಂಗೆಗಳು ಬೊಂಬುಗಳಿಗೆ ಸಿಕ್ಕಿ ಇತ್ತು. ಅದನ್ನು ನೋಡಿ ಪ್ರವಾಹದ ರಭಸ ಸೇತುವೆಯ ಮೇಲೆ ಸ್ವಲ್ಪ ಕಡಿಮೆ ಇದ್ದೀತೆನ್ನಿಸಿತು. ಪಾತ್ರದ ಕೆಳಗೆ ನೀರಿನ ರಭಸಕ್ಕೆ ಕಲ್ಲುಗುಂಡುಗಳು, ಒಂದಕ್ಕೊಂದು ಬಡಿದು ರಾಕ್ಷಸರ ಹಲ್ಲುಗಳು ಕಟಕಟ ಕಡಿಯುತ್ತಿವೆಯೇನೋ ಎನ್ನಿಸುತ್ತಿತ್ತು. ಅಷ್ಟರಲ್ಲಿ ತೇಲಿಬಂದ ದೊಡ್ಡ ಮರವೊಂದು ಸೇತುವೆಗೆ ಢಿಕ್ಕಿ ಹೊಡೆಯಿತು, ಸೇತುವೆ ಮುರಿದು ಅಕ್ಕಪಕ್ಕದಲ್ಲಿ ನೆಟ್ಟಿದ್ದ ಬೊಂಬುಗಳು ಕೆಲವು ಚದುರಿಹೋದವು. ಶೇರ್‌ಸಿಂಗ್‌ಗೆ ಗಾಬರಿಯಾಯಿತು, ದಾಟುವುದು ಹೇಗಪ್ಪಾ ಎಂಬ ಚಿಂತೆ ಕಾಡಿತು.

ತಮ್ಮ ಕ್ಷೀಣಸ್ವರದಲ್ಲಿ 'ಅಣ್ಣಾ' ಎಂದದ್ದು ಕೇಳಿಸಿತು. ಜೋಳಿಗೆ ಇಳಿಸಿಟ್ಟು ಬೊಗಸೆಯಲ್ಲಿ ನೀರು ತಂದು ಅದಕ್ಕೆ ಕುಡಿಸಿದ, ತಾನೂ ನೀರು ಕುಡಿದು ಕುಳಿತ. ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ಎದ್ದು ತೇಲಿಬರುತ್ತಿದ್ದ ಜೊಂಡು ಸಂಗ್ರಹಿಸಿ ಹುಲ್ಲು-ಹಗ್ಗ ಹೊಸೆದ. ತಮ್ಮನ ಮತ್ತು ತನ್ನ ಟೊಂಕಗಳಿಗೆ ಜೋಡಿಸಿ ಕಟ್ಟಿಕೊಂಡು ಇಬ್ಬರು ಬೇರೆಯಾಗದಂತೆ ಎಚ್ಚರಿಕೆ ವಹಿಸಿದ.

ಅರ್ಧಮುಳುಗಿದ್ದ ಸೇತುವೆ ಕಟ್ಟಡದ ಮೇಲೆ ಹೆಜ್ಜೆ ಇಡತೊಡಗಿದ. ಪ್ರವಾಹದ ರಭಸಕ್ಕೆ ಜೋಳಿಗೆ ಸಹಿತ ಸೇತುವೆಯ ಮೇಲೆಯೇ ಬಿದ್ದ, ಸ್ವಲ್ಪ ಸಮಯ ಅಲ್ಲಾಡಲೂ ಆಗದೆ ಬಿದ್ದುಕೊಂಡೇ ಇದ್ದು ತರುವಾಯ ಸೇತುವೆಯಿಂದ ನೀರಿಗಿಳಿದು ಬೊಂಬುಗಳ ತುದಿಗಳನ್ನು ತಡಕಿ ಹಿಡಿಯುತ್ತ ಆ ಆಸರೆಯಿಂದ ನಿಧಾನವಾಗಿ ಸಾಗಿದ. ನೀರಿನ ಆರ್ಭಟ ಕಿವಿ ಕಿವುಡಾಗಿಸುವಂತಿತ್ತು. ತೇಲಿ ಬರುತ್ತಿದ್ದ

ರೆಂಬೆ-ಕೊಂಬೆಗಳು ಘಟ್ಟಿಸುತ್ತಿದ್ದುವು, ಗಾಯ ಮಾಡುತ್ತಿದ್ದವು. ಚಿಮ್ಮುವ ನೀರು ಕಣ್ಣು ಮಂಜಾಗಿಸುತ್ತಿತ್ತು, ಉಸಿರು ಕಟ್ಟಿಸುವಂತಿತ್ತು. ನೀರು ಎಷ್ಟು ಕೊರೆಯುತ್ತಿತ್ತೆಂದರೆ ಕೈಬೆರಳುಗಳು ಮರಗಟ್ಟಿ ಹಿಡಿತ ಸಡಿಲ ಆಗುತ್ತಿತ್ತು. ಜೋಳಿಗೆಯಲ್ಲಿನ ತಮ್ಮ ಒದ್ದೆಮುದ್ದೆಯಾಗಿದ್ದು ಜೀವಂತ ಉಳಿದಿದ್ದಾನೋ ಇಲ್ಲವೋ ನೋಡಲೂ ಆಗದಂತೆ ಆಗಿತ್ತು. ಆದಷ್ಟು ಅವನ ತಲೆ ನೀರಲ್ಲಿ ಮುಳುಗದಂತೆ ಎತ್ತಿ ಏರಿಸಿಕೊಂಡಿದ್ದ. ಆಗಾಗ ತಾನು ಮುಳುಗೇಳುತ್ತಿದ್ದರೂ ಸಾವರಿಸಿಕೊಂಡು ಹಾಗೂ-ಹೀಗೂ ದಡ ತಲುಪಿದ. ಆ ಹರಸಾಹಸ ಅವನನ್ನು ಜರ್ಜರಿತವಾಗಿಸಿತ್ತು. ದಡಹತ್ತಿದ್ದೇ ತಡ ಬವಳಿ ಬಂದಂತಾಗಿ ಬಿದ್ದುಕೊಂಡ. ತೊಯ್ದು ಮುದ್ದೆಯಾಗಿದ್ದ, ಮೈ ಮರಗಟ್ಟಿತ್ತು. ಸ್ವಲ್ಪ ಹಾಗೆಯೇ ಇದ್ದು ಏಳಲಾರದೆ ದಡಕ್ಕೆ ಹತ್ತಿರಾನೇ ಇದ್ದ ಹೆದ್ದಾರಿ ಕಡೆಗೆ ತೆವಳಿದ. ಸಮೀಪದ ಹಳ್ಳಿಯ ಕಂತ್ರಿನಾಯಿಗಳ ಬೊಗಳಾಟ ಕೇಳಿಸಿ ಜನ ಇರೋ ಜಾಗ ಮುಟ್ಟಿದೆನೆಂದು ಸಮಾಧಾನ ಪಟ್ಟ. ಬೆಳಕು ಹರಿಯತೊಡಗಿತ್ತು. ಜನ ಸಂಚಾರ ಪ್ರಾರಂಭವಾಗಿ ಕೆಲವರು ಇವನನ್ನು ನೋಡಿದರು.

ದಾರಿಯಲ್ಲಿ ಕಾಲಾಘಾಟ್ ಕಡೆಗೆ ಸಾಗಿದ್ದ ಎತ್ತಿನ ಬಂಡಿಯವರು ಏರಿಸಿಕೊಂಡರು. ''ಏ, ಹುಡುಗ, ಎಲ್ಲಿಂದ ಬರ್ತಾ ಇದ್ದೀಯೋ ?'', ''ಲಾಲ್‌ದ್ವಾಣಿ''. ''ಈ ಸಣ್ಣೋನ್ನ ಎತ್ಕೊಂಡು ಒಬ್ನೇ ಇಷ್ಟು ದೂರ, ಹಳ್ಳಗಳ ಪ್ರವಾಹಾನೂ ಹಾಯ್ದು ಬಂದಿದ್ದೀಯಾ ?'' ಎಂದು ಆಶ್ಚರ್ಯದಿಂದ ಉದ್ಗರಿಸಿದರು. ಸ್ವಲ್ಪ ದೂರ ಹೋದ ಮೇಲೆ ಒಂದು ಟ್ರಕ್‌ನವರು ಹತ್ತಿಸಿಕೊಂಡು ಕಾಲಾಘಾಟ್ ದವಾಖಾನೆ ತಲುಪಿಸಿದರು.

ಬಾಲಕ ಶೇರ್‌ಸಿಂಗ್ ಕೊನೆಗೂ ದವಾಖಾನೆ ಮುಟ್ಟಿದ್ದ. ಆ ದೊಡ್ಡ ಕಟ್ಟಡ ನೋಡಿ ಒಳಗೆ ಹೋಗಲು ಹಿಂಜರಿದು, ತಮ್ಮನ ಹೆಸರು ಹಾಗೂ ತನ್ನ ತಂದೆ ಶೇರ್‌ಸಿಂಗ್ 'ಬಹದ್ದೂರ್' ಹೆಸರನ್ನು ಒಳಗೆ ಹೋಗುತ್ತಿದ್ದ ಟ್ರಕ್‌ನವರಿಗೆ ತಿಳಿಸಿ ಕಳಿಸಿಕೊಟ್ಟು ಬಾಗಿಲಲ್ಲೇ ನಿಂತ. ಸ್ವಲ್ಪ ಸಮಯದ ತರುವಾಯ ವೈದ್ಯರೇ ಹೊರಗಿನ ವೆರಾಂಡಕ್ಕೆ ಬಂದು, ''ಶೇರ್‌ಸಿಂಗ್ ಬಹದ್ದೂರ್, ಎಲ್ಲಿದ್ದೀಯ ಬಾರಪ್ಪಾ'' ಎಂದು ಕೂಗಿದರು. ''ನಮ್ಮ ಅಪ್ಪ ಬಂದಿಲ್ಲಾ, ರೀ. ನಾನೇ ಕರಕೊಂಡು ಬಂದೀನಿ, ರೀ''. ಎನ್ನುತ್ತಾ ವೈದ್ಯರ ಸಮೀಪಕ್ಕೆ ಹೋದ. ''ಲಾಲ್‌ದ್ವಾಣಿಯಿಂದ ಈ ಕುಂವರನ್ನ ಎತ್ತಿಕೊಂಡು ರಾತ್ರಿಯೆಲ್ಲ ನಡೆದು, ಹಳ್ಳಗಳ್ನ ದಾಟಿಕೊಂಡು ಬಂದಿರೋನು ನೀನೇನಾ ?'' ಆಶ್ಚರ್ಯದಿಂದ ಕೇಳಿದರು. ''ಹ್ಞೂ''. ಶೇರ್‌ಸಿಂಗ್ ಉಸುರಿದ. ''ಏನೋ ನಿನ್ ಹೆಸರು ?'' ''ನನ್ಹೆಸರೂ ಶೇರ್‌ಸಿಂಗ್ ಅಂತ, ರೀ''. ವೈದ್ಯರಿಗೆ ಕರುಣೆ ಉಕ್ಕಿ ಬಂತು. ಅಚ್ಚರಿಯಿಂದ ಮುಗುಳ್ನಕ್ಕರು. ''ಹಾಗಾದರೆ ಇನ್ನು ನೀನು ಖಾಲಿ ಶೇರ್‌ಸಿಂಗಲ್ಲ, ನೀನೂ ಶೇರ್‌ಸಿಂಗ್ ಬಹದ್ದೂರನೆಂದೇ ಇನ್ನು ಮುಂದೆ. ಇಷ್ಟು ಸಾಹಸ ಮಾಡಿ ತಮ್ಮನನ್ನ ಇಲ್ಲೀವರೆಗೂ ಎತ್ತಿಕೊಂಡು ಬಂದದ್ದು ಒಳ್ಳೇದಾಯಿತಪ್ಪ, ಮಗು. ನಿನ್ನ ತಮ್ಮ ಹುಷಾರಾಗಿದ್ದಾನೆ. ಬಾ ಒಳಗೆ, ನೋಡು ಬಾ'' ಎಂದು ಪ್ರೀತಿಯಿಂದ ಅವನನ್ನು ವೈದ್ಯರು ಒಳಕ್ಕೆ ಕರೆದೊಯ್ದರು.

(ನೋರಾ ಬರ್ಕ್‌ಳ, "Journey By Night" ಕತೆಯ ಸರಳಾನುವಾದ.)

ಬ. ನಾ. ರಘುರಾಮ
ಹೌ. ಬೋ. ಕಾಲೋನಿ, ಸಾಗರ - ೫೭೭ ೪೦೧



*೫ನೇ ಪುಟದಿಂದ (ಸುಧಾರಣೆಯ ಹೆಸರಿನಲ್ಲಿ...)*

ವರದಕ್ಷಿಣೆಯನ್ನು ವಿರೋಧಿಸಿದೆಯೆಂಬುದು ಸ್ವಾಗತಾರ್ಹ ಅಂಶವಾದರೂ ಅದನ್ನು ಒತ್ತಾಯಿಸಲು ಬೇಕಾದಂತಹ ವಿಧಿ ವಿಧಾನಗಳನ್ನು 'ನಿಖಾನಾಮ' ಹೊಂದಿಲ್ಲ. 'ಗಂಡನಿಗೆ ವಿಧೇಯವಾಗಿರಬೇಕು. ಗಂಡನ ಅನುಮತಿಯಿಲ್ಲದೆ ತವರು ಮನೆಗೆ ಹೋಗಬಾರದು' ಎಂಬಂತಹ ಮಾರ್ಗದರ್ಶಿ ಸೂತ್ರಗಳನ್ನು ಪ್ರಕಟಿಸುವ 'ನಿಖಾನಾಮ'ದಿಂದ ಮಹಿಳಾ ಹಕ್ಕುಗಳ ಹರಣವಾಗಿದೆಯೆಂಬುದು ನಿಸ್ಸಂಶಯ.

ಈ ಎಲ್ಲ ಸಂಗತಿಗಳೂ ವಿಶದಪಡಿಸುವ ಮುಖ್ಯ ವಿಷಯವೆಂದರೆ, ಸಾಂವಿಧಾನಿಕ ಚೌಕಟ್ಟಿನೊಳಗೆ ನಡೆಯದ ಮತ್ತು ಸಂವಿಧಾನವನ್ನು ಪ್ರಭಾವಿಸದ ಯಾವ ಬದಲಾವಣೆಯ ಪ್ರಯತ್ನಗಳೂ ನಿರೀಕ್ಷಿತ ಪರಿಣಾಮವನ್ನು ನೀಡಲಾರವು. ಸಮಾಜದ ಅರ್ಧಭಾಗವಾದ ಮಹಿಳೆಯರ ಚಿಂತನೆ, ಸಲಹೆ, ಕ್ರಿಯಾಶೀಲತೆಗೆ ಬೆಲೆ ಕೊಡದೆ ಅವರನ್ನು ಒಳಗೊಳ್ಳದೆ ಅವರಿಗೇ ಅನ್ವಯಿಸಲು ರೂಪಿಸುವ ಯಾವ ಕಾನೂನೂ ಸ್ತ್ರೀಪರವಾಗಿರಲು ಸಾಧ್ಯವಿಲ್ಲ. ಎಲ್ಲ ಧರ್ಮಗಳೂ ಒಂದಲ್ಲ ಒಂದು ರೀತಿಯಲ್ಲಿ ಹೆಣ್ಣನ್ನು ಕುರಿತು ಚಿಂತಿಸಿ, ಅರ್ಥೈಸುವಾಗ ಅವಳನ್ನು ಎರಡನೆಯ ದರ್ಜೆಯ ಪ್ರಜೆಯಾಗಿಯೇ ಕಂಡಿವೆ. ಆದ್ದರಿಂದ ಧರ್ಮವನ್ನೂ ಮೀರಿದ ಮಾನವೀಯತೆಯ ದೃಷ್ಟಿಯಿಂದ, ವೈಜ್ಞಾನಿಕವಾಗಿ ಬದಲಾವಣೆಗೆ ಪ್ರಯತ್ನಿಸದ ಹೊರತು 'ಸಮಾನತೆ'ಯ ಕಾನೂನು ಮರೀಚಿಕೆಯಾಗುತ್ತದೆ. ಹಾಗೆಯೇ ಸಂಸ್ಕೃತಿಯ ವೈವಿಧ್ಯತೆಯನ್ನು ಉಳಿಸಿಕೊಳ್ಳಬೇಕೆಂಬ ಆಶಾದಾಯಕ ಹುಮ್ಮಸ್ಸಿನಲ್ಲಿ ಸಂಸ್ಕೃತಿಯೊಳಗಿರುವ ದಮನಕಾರಿ ಅಂಶಗಳಿಗೆ ಕುರುಡಾಗುವುದು ಜಾಣತನವೂ ಅಲ್ಲ ಮನುಷ್ಯತ್ವವೂ ಅಲ್ಲ.



# ದಹನ

ಪಿ. ಬಿ. ಪ್ರಸನ್ನ

"ಕಾಲ ಎಲ್ಲಿಗೆ ಬಂತು ನೋಡಿ ಐತಾಳ್ರೇ... ನಿನ್ನೆ ಮೊನ್ನೆವರೆಗೆ ನಮ್ಮನ್ನು ನೋಡಿದ್ರೆ ಒಂದು ಮಾರು ದೂರ ನಿಲ್ತಿದ್ದ ಶೂದ್ರರೆಲ್ಲ ಹೇಗೆ ಒಟ್ಟಾದ್ರು ಮಾರ್ರೆ... ಆವತ್ತು ತೇರಿನ ದಿವ್ಸ ಸಾ ಪಂಕ್ತಿ ಊಟ ಹಾಕಿ ಅಂತ ಗಲಾಟೆ ಮಾಡಿದ್ರು... ದೇವಸ್ಥಾನ್ದ ಪೌಳಿವರೆಗ ಬರ್ಲಿಕ್ಕೆ ಬಿಡಿ ಅಂತ ಗಲಾಟಿ ಮಾಡಿದ್ರು... ಈಗ ಮೇಳದಲ್ಲಿ ಮರಕಾಲ್ರನ್ನೂ ಸೇರ್ಸಿ ಅಂತ ಸುರು ಮಾಡಿದ್ದಾರೆ. ಅಲ್ಲ ಮಾರ್ರೆ ಈ ಗೋರ್ಮೆಂಟೂ ಸರಿ ಇಲ್ಲ ಐತಾಳ್ರೇ... ಈಗ ಬ್ರಾಮಣ್ರಿಗೆ ಕಾಲ ಇಲ್ಲ ಐತಾಳ್ರೇ... ಎಂತದಿದ್ರೂ ಮರಕಾಲ್ರಿಗೆ, ಕೊರಗ್ರಿಗೆ, ದಿಕ್ಕನವ್ರಿಗೆ ಅದು ಬಿಟ್ರೆ ಸ್ಯಾಬ್ರಿಗೆ... ಗಟ್ಟಿಯಾಗಿ ಮಾತಾಡ್ಲಿಕ್ಕೂ ಹೆದ್ರಿಕೆ ಮಾರ್ರೆ ಈಗ... ಯಾರು ಕೊರಗ, ಯಾರು ಮರಕಾಲ, ಯಾರು ಸ್ಯಾಬಾಂತ ಗೊತ್ತಾಗುದಿಲ್ಲ ಐತಾಳ್ರೇ..." ಅಂತ ಪದ್ನಾಬ ಉಡುಪ್ರು ಊರಿಗೆ ಅಪ್ರೂಪದಲ್ಲಿ ಬಂದು, ಆ ದಿವ್ಸ ಕುಚ್ಚೂರಲ್ಲಿ ನಡೀತಿದ್ದ ಫಂಕ್ಷನ್ನಿನ ಬಗ್ಗೆ ವಿಚಾರಿಸ್ತಿದ್ದ ಶೀನ ಐತಾಳ್ರಿಗೆ ಹೇಳ್ತಿದ್ರು. ಅಷ್ಟು ಹೊತ್ತಿಗೆ ಯಾರೋ, "ಕಾರು ಬಂತು! ಕಾರು ಬಂತು!" ಅಂತ ಹೇಳಿದ್ರು. ಕೂಡ್ಲೆ ಉಡುಪ್ರು, "ವಾದ್ಯ! ವಾದ್ಯ!" ಅಂತ ಹೇಳಿದ್ರು. ಕೂಡ್ಲೆ ವಾದ್ಯದವ್ರು, ಚೆಂಡೆಯವ್ರು, ಕಹಳೆಯವ್ರು ಎಲ್ಲ ಒಟ್ಟಾಗಿ "ಪ್ರೆ... ಪ್ರೆ... ಪ್ರೇSSS.... ಢುಂ ಢುಂ ಢುಂ!" ಅಂತ ಬಾರ್ಸಿದ್ರು. ಎಲ್ರೂ ಕಾರಿಂದ ಇಳ್ದ ಮೇಲೆ ಪದ್ನಾಬ ಉಡುಪ್ರು ವಾದ್ಯಗಳ ಸೌಂಡಿಗಿಂತ ಗಟ್ಟಿಯಾಗಿ ಮಂತ್ರ ಹೇಳ್ಳಿಕ್ಕೆ ಸುರು ಮಾಡಿದ್ರು. ಅವ್ರ ಮಕ್ಳು, ಸುತ್ತ ಇದ್ದ ಬ್ರಾಮಣ್ರು ಉಡುಪ್ರೊಟ್ಟಿಗೆ ಮಂತ್ರ ಹೇಳ್ಳಿಕ್ಕೆ ಸುರು ಮಾಡಿದ್ರು. ಕೆಲವ್ರು ಸುಮ್ನೆ ಬಾಯಿ ಅಲ್ಲಾಡಿಸ್ತಿದ್ರು. ಎಲ್ರಿಗೂ ಡಿ.ಸಿ.ಯನ್ನು ಸಂತೋಷಪಡಿಸ್ಬೇಕಾಗಿತ್ತು. ದೇವಿಯ ದರ್ಶನ ಮಾಡಿದ ಡಿ.ಸಿ.ಗೆ ಮತ್ತು ಅವ್ರೊಟ್ಟಿಗೆ ಬಂದವ್ರಿಗೆ ಪ್ರಸಾದ ರೂಪವಾಗಿ ಹಾರಹಾಕಿ, ಶಾಲು ಹೊದಿಸಿ ಸನ್ಮಾನ ಮಾಡಿದ್ರು. ಡಿ.ಸಿ.ಗೆ ಜೈಕಾರ ಹಾಕ್ತ ಬಂದಿದ್ದ ಮರಕಾಲ್ರಿಗೆ ಸುಡು ಸುಡು ಅಂತ ಬೈತಾ ದೂರದಿಂದ ಪ್ರಸಾದ ಎಸ್ದ್ರು. ಮರಕಾಲ್ರೆಲ್ಲ ಉಡುಪ್ರ ಅವ್ತಾರ ನೋಡಿ ಒಳಗೊಳಗೇ ನಕ್ರು. ನಂತ್ರ ಎಲ್ರೂ ಆಟ ನಡಿಯುವ ಸ್ಥಳಕ್ಕೆ ಹೋದ್ರು. ಆವತ್ತು ಮೇಳ ಹೊರಡುವ ದಿನ. ಅದ್ರ ಉದ್ಘಾಟನೆಗೆ ಮತ್ತು ಫೇಮಸ್ ಆಟದ ಕಲಾವಿದ ಮರಕಾಲ್ರ ಗೋಪಾಲಯ್ಯನನ್ನು ಕುಚ್ಚೂರು ಮೇಳಕ್ಕೆ ಸೇರಿಸಿದ್ರ ಕುರಿತು ಸನ್ಮಾನ ಮಾಡ್ಲಿಕ್ಕೆ ಡಿ.ಸಿ. ಬಂದಿದ್ರು.

* * *

ಕುಚ್ಚೂರು ಎನ್ನುವ ಊರು ದುರ್ಗಾಪರಮೇಶ್ವರಿ ದೇವಸ್ಥಾನಕ್ಕೆ ಮತ್ತು ಆಟದ ಮೇಳಕ್ಕೆ ಫೇಮಸ್ಸು. ದೇವಿಯ ಕಾರ್ಣಿಕ ನಂಬುವವ್ರೆಲ್ಲ ಎಂತಾದ್ರು ಕಷ್ಟ ಬಂದಾಗ, "ತಾಯೇ ನಿಂಗೊಂದು ಆಟ ಆಡಿಸ್ತೇನೆ" ಅಂತ ಹರ್ಕೆ ಹೇಳಿಕೊಳ್ತಾರೆ. ಬೇರೆ ಎಲ್ಲ ಮೇಳಗಳಿಗಿಂತ ಕುಚ್ಚೂರಿಂದೇ ಭಾರೀ ರೈಸುವ ಮೇಳ. 'ದೇವಿ ಮಹಾತ್ಮೆ' ಪ್ರಸಂಗವನ್ನೆ ಎಲ್ಲ ಕಡೆ ಜಾಸ್ತಿ ಆಡುದು. ಅದ್ರಲ್ಲಿ ದೇವಿಯ ಪಾರ್ಟು ಮಾಡುವವ್ರಿಗೆ ಬೆಳ್ಳಿಯ ಕತ್ತಿಯನ್ನು ಒಬ್ರು ದಾನ ಕೊಟ್ಟಿದ್ರು. ಮೇಳ ಎಲ್ಲಿ ಹೋಗ್ತದೋ ಅಲ್ಲಿಗೆ ದೇವಿಯ ಚಿನ್ನದ ಮೂರ್ತಿಯನ್ನು ಸಾ ತಕೊಂಡು ಹೋಗ್ತಾರೆ. ಹೀಗೆ ರೈಸುವ ಕುಚ್ಚೂರಿನ ಮೇಳದ ಆಟವನ್ನು ನಿಮ್ಗೆ ಯಾರಿಗಾದ್ರೂ ಆಡಿಸ್ಬೇಕಾದ್ರೆ ಮಿನಿಮಮ್ ಹನ್ನೆರ್ಡು ವರ್ಷ ಕಾಯ್ಬೇಕು.

ಪದ್ನಾಬ ಉಡುಪ್ರು ದೇವಸ್ಥಾನದ ಮೈನ್ ಭಟ್ರು. ನಿಜವಾಗಿ ಅವ್ರ ಅಣ್ಣ ತಮ್ಮಂದ್ರಿಗೆ, ಅವ್ರ ಮಕ್ಳಿಗೆ ಎಲ್ಲ ಪೂಜೆಯಲ್ಲಿ ಹಕ್ಕುಂಟು. ಆದ್ರೆ ಪದ್ನಾಬ ಉಡುಪ್ರು ಅವ್ರಿಗೆಲ್ಲ ಮಂಗಮಲ್ಕ ಮಾಡಿ ತಾವೇ ಪ್ರತೀ ವರ್ಷ ಪೂಜೆ ಮಾಡಿಕೊಂಡು ಬರ್ತಿದ್ದಾರೆ. ಅವ್ರ ಅಣ್ಣ ತಮ್ಮಂದ್ರೆಲ್ಲ ಸ್ವಲ್ಪ ಶಂಬುಗಳು. ಉಡುಪ್ರು ಹೇಳಿದ್ದೇ ಸತ್ಯಾಂತ ನಂಬ್ತಿದ್ರು. ಅವ್ರಿಗೆ ಎಲ್ಲ ಮಠಗಳ ಲಿಂಕಿದೆ. ಯಾವ ಮಠದಲ್ಲಿ ಸ್ವಾಮಿಗಳು ಗಟ್ಟಿಯಾಗಿ ಹೂಸು ಬಿಟ್ರೂ ಉಡುಪ್ರನ್ನು ಬರ್ಲಿಕ್ಕೆ ಹೇಳ್ತಾರೆ. ಉಡುಪ್ರು ಅಲ್ಲಿಗೆ ಹೋಗಿ ಸ್ವಾಮಿಗಳು ಬಿಟ್ಟ ಹೂಸೇ ಶ್ರೇಷ್ಠ ಅಂತ ಪಟಾಕಿ ಬಿಟ್ಟು ಬರ್ತಾರೆ. ಅವ್ರ ಭಾಷಣದ ರಿಪೋರ್ಟು ಅಲ್ಲಲ್ಲಿ ಪೇಪರಲ್ಲಿ ಬರ್ತಾ ಇರ್ತದೆ. ಸಟಕ್ಕಂತ ಎಂತಾದ್ರು ಸಂಸ್ಕೃತದ ಶ್ಲೋಕಗಳನ್ನು ಅವ್ರು ಉದ್ರಿಸ್ತಿದ್ದ ಶ್ಟೈಲು, ಮಿರಿಮಿರಿ ಮಿಂಚುವ ರೇಷ್ಮೆಪಟ್ಟೆಯ ಕಚ್ಚೆ, ಹದಿನಾರು ಉಂಗ್ರಗಳು, ಚಿನ್ನದ ಕಡಗ, ಕುತ್ತಿಗೆಯಲ್ಲಿ ಚಿನ್ನದ ತುಳ್ಸೀಮಣಿ ಸರ, ಅದ್ರಲ್ಲಿ ಐದಾರು ಪೆಂಡೆಂಟು... ಉಡುಪ್ರಂದ್ರೆ ಇಷ್ಟೆಲ್ಲ ಇರ್ಲೇಬೇಕು. ಹೇಲ್ಲಿಕ್ಕೆ ಹೋಗುವಾಗ್ಲೂ! ಅವ್ರ ಶ್ಟೈಲು ನೋಡಿದವ್ರ ಬಾಯಿ ಬಂದಾಗ್ತದೆ. ಎಲ್ರೂ, "ನಮಸ್ಕಾರ ಭಟ್ರೇ" ಅಂತ ಹೇಳಿ ಮುಂದೆ ಹೋಗ್ತಾರೆ.

ಇಂಥ ಪದ್ನಾಬ ಉಡುಪ್ರು ದೇವಸ್ಥಾನದ ಕಮಿಟಿಯಲ್ಲಿ ಇಂಪಾರ್ಟೆಂಟಾಗಿ ಇರ್ಬೇಕಾಗಿದ್ದ ಮರಕಾಲ್ರು, ಕೊರಗರು, ಬಾಕುಡರನ್ನು ದೂರ ಇಟ್ಟಿದ್ರು. ದೇವಸ್ಥಾನದ ಮ್ಯಾನೇಜಿಂಗ್ ಕಮಿಟಿಯ ಪ್ರೆಸಿಡೆಂಟ್ರನ್ನಾಗಿ ಪ್ರಬಣ್ಣ ಅಲಿಯಾಸ್ ಪ್ರಭಾಕರ ಶೆಟ್ರನ್ನು ಮಾಡಿದ್ರು. ಆ ಪ್ರಬಣ್ಣ ತನ್ನ ತಮ್ಮ ವಸಂತ ಶೆಟ್ರನ್ನು ಮೇಳದ ಮ್ಯಾನೇಜರನ್ನಾಗಿ ಮಾಡಿದ್ರು. ಮಾತ್ರ ಅಲ್ಲ ತನ್ಗೆ ಬೇಕಾಗಿರುವ ಊರಿನ ನಾಲಕೈದು ಶ್ಟ್ರಾಂಗ್ ಶೆಟ್ರುಗಳನ್ನು ದೇವಸ್ಥಾನದ ಕಮಿಟಿಯಲ್ಲಿ ಸೇರಿಸಿದ್ರು. ಹೀಗಾಗಿ ಕುಚ್ಚೂರು ದೇವಸ್ಥಾನ ಅಂದ್ರೆ ಊರವ್ರ ಬಾಯಲ್ಲಿ ಭಟ್ರದ್ದು ಬಿಟ್ರೆ ಶೆಟ್ರದ್ದೂಂತಾಗಿತ್ತು. ಉಡುಪ್ರು, ಶೆಟ್ರು ಆಗಾಗ ಬೊಂಬ್ಯಾಗೆ ಹೋಗಿ ಊರಿನ ಭಕ್ತರನ್ನು ಮಾತಾಡ್ಸಿ ನೈಸ್ ಮಾಡಿ ಹರ್ಕೆ ಹೆಸ್ರಲ್ಲಿ ಭಕ್ತರು ಕೊಟ್ಟ ಹಣ, ಚಿನ್ನ, ಪಟ್ಟೆ ಸೀರೆ ಎಲ್ಲ ತರ್ತಿದ್ರು. ತರುವಾಗಲೇ 'ತುಕ್ಕರ್ಧ ಮಕ್ಕರ್ಧ' ಮಾಡ್ಕೊಳ್ತಿದ್ರು. ಊರಿನವ್ರಿಗೆ,

ಕಮಿಟಿಯಲ್ಲಿದ್ದವ್ರಿಗೆ ಇದ್ರ ಬಗ್ಗೆ ಡೌಟು ಬಂದಿದ್ರೂ ಯಾರಿಗೂ ಕೇಳುವ ದಮ್ಮು ಇರ್ಲಿಲ್ಲ.

ಹೀಗೆ ಮೆರೀತಿದ್ದ ಉಡುಪ್ರನ್ನು, ಶೆಟ್ರನ್ನು ಅಲ್ಲಾಡಿಸಿದವ ಆಟದ ಗೋಪಾಲಯ್ಯ. ಗೋಪಾಲಯ್ಯ ಒಬ್ಬ ಫೇಮಸ್ ಆಟದ ವೇಷಧಾರಿ. ತೆಂಕಿನ ಸುಮಾರು ಮೇಳಗಳಲ್ಲಿ ಮುಖ್ಯ ವೇಷ ಮಾಡ್ತಿದ್ದ. ಹನುಮಂತ, ವಾಲಿ, ಕರ್ಣ, ಭೀಮ ಪಾರ್ಟುಗಳಿಗೆ ಅವ್ನು ಫೇಮಸ್. ಅದ್ರಲ್ಲೂ ಹನ್ಮಂತನ ಪಾರ್ಟಂದ್ರೆ ಆ ದಿನ ಭಾರೀ ಕಲೆಕ್ಷನ್. ಅವ್ನು ಮರಕಾಲ. ಕುಚ್ಚೂರಿನವ್ನೆ ಊರು ಬಿಟ್ಟು ತುಂಬ ವರ್ಷಗಳಾಗಿತ್ತು. ಆಗಾಗ ಬಂದು ಹೋಗ್ತಿದ್ದ ಅನ್ನೂದು ಬಿಟ್ರೆ ಊರಲ್ಲಿ ಅಂಥ ನೆಂಟ್ರು ಅವ್ನಿಗೆ ಇರ್ಲಿಲ್ಲ. ಅಂಥ ಗೋಪಾಲಯ್ಯ ಒಂದು ದಿವ್ಸ ಉಡುಪ್ರತ್ರ ಬಂದು, ''ಭಟ್ರೇ...'' ಅಂತ ತಲೆ ತುರ್ಸಿಕೊಂಡು ನಿಂತ.

''ಓ !... ಗೋಪಾಲಯ್ಯ... ಏನು ಭಾರೀ ಅಪ್ರೂಪ ? ಏನು ಇಷ್ಟು ದೂರ ಬಂದದ್ದು ?... ಹೇಗುಂಟು ಮೇಳದ ಕಸುಬು ? ಈ ಸಾರಿ ಯಾವ ಮೇಳ ?...'' ಅಂತೆಲ್ಲ ಒಂದೇ ಸಮ ಉಡುಪ್ರು ಪ್ರಶ್ನೆ ಕೇಳಿದ್ರು.

''ಭಟ್ರೇ... ಅದೇ ವಿಷಯ ನಿಮ್ಮತ್ರ ಮಾತಾಡುವಾಂತ ಬಂದದ್ದು. ನಂಗೂ ವರ್ಷ ಅರ್ವತ್ತು ಕಳೀತು. ತೆಂಕಿನ ಸುಮಾರು ಮೇಳಗಳೆಲ್ಲ ಕೈದಾಯ್ತು. ಇರುವ ಮೇಳಗಳಲ್ಲಿ ಅದ್ರಲ್ಲಿರುವವ್ರಿಗೇ ಸಂಬಳ ಕೊಡ್ಲಿಕ್ಕೆ ದುಡ್ಡಿಲ್ಲ. ನಾನು ಕೂಡ ಊರು ಬಿಟ್ಟು ತುಂಬ ವರ್ಷ ಆಯ್ತು. ಮನೆಯಲ್ಲಿ ಮಕ್ಕಿಗೆ, ಇವ್ಳಿಗೆ, ಎಲ್ಲ ತುಂಬ ಸೀಕು. ಅಕ್ಕಿಗಿಂತ ಹೆಚ್ಚು ಮದ್ದಿಗೇ ದುಡ್ಡು ಖರ್ಚಾಗ್ತದೆ. ಒಂದು ಜೋಯಿಸರತ್ರ ಕೇಳಿದೆ. ಅವ್ರು, ನೀನು ಆಟದಲ್ಲಿ ಇಷ್ಟು ಸಂಪಾದ್ನೆ ಮಾಡಿದ್ರೂ ಊರಿನ ದೇವ್ರಿಗೆ ಎಂಥದೂ ಮಾಡ್ಲಿಲ್ಲಾಂತ ಅಂದ್ರು. ಅದಕ್ಕೆ ಬಂದದ್ದು ನಾನು'' ಅಂತ ಹೇಳಿದ.

''ಹೌದು ಗೋಪಾಲ... ಊರಿನ ದೇವ್ರನ್ನು, ಅದ್ರಲ್ಲೂ ಕುಚ್ಚೂರಿನ ಈ ದೇವಿಯನ್ನು ಮರೀಲೇಬಾರ್ದು. ಆಗ್ಲಿ ಈಗಾದ್ರೂ ನೆನಪಾಯ್ತಲ್ಲವೋ ? ಎಂತ ಸೇವೆ ಮಾಡಿಸ್ಬೇಕು ಹೇಳು. ಅದಕ್ಕೆ ಎಷ್ಟು ಖರ್ಚಾಗ್ತದೇಂತ ಹೇಳ್ತೇನೆ'' ಅಂತ ಹೇಳಿದ ಉಡುಪ್ರು ತನಿಗೊಂದು ಬಲಿ ಸಿಕ್ಕಿತು ಅಂತ ಖುಷಿಯಿಂದ ಖರ್ಚು ಬರೀಲಿಕ್ಕೆ ಪೆನ್ನು ಪೇಪರು ತಕೊಂಡ್ರು.

''ಸೇವೆ ಅಂದ್ರೆ ಎಂಥದೂ ಮಾಡ್ಸುದಲ್ಲ ಭಟ್ರೇ. ಈ ಸಾರಿ ದೇವಿಯ ಮೇಳಕ್ಕೆ ನನ್ನನ್ನೂ ಸೇರಿಸ್ಕೊಳ್ಳಿ ಅಂತ ಕೇಳ್ಳಿಕ್ಕೆ ಬಂದದ್ದು'' ಅಂತ ಹೇಳಿದ. ಉಡುಪ್ರಿಗೆ ಬೆಚ್ಚ ಆಯ್ತು. ''ಅಲ್ಲ ಮಾರಾಯಾ ನಾನು ಎಣಿಸಿದ್ದೇ ಬೇರೆ. ನೀನು ಹೇಳುದೇ ಬೇರೆ. ಮೇಳಕ್ಕೆ ಸೇರಿದ್ರೆ ಸೇವೆ ಹೇಗೆ ಆಗ್ತದೆ ಮಾರಾಯಾ ? ನಿಂಗೆ ಮಂಡೆ ಸಮ ಉಂಟಾ ? ನಿಂಗೆ ನಾವೇ ದುಡ್ಡು ಕೊಡುದು ಬೇಡವೋ ? ಎಂತ ಮಾತಾಡುದು ನೀನು ?'' ಅಂತ ಸಿಟ್ಟಿಂದ ಕೇಳಿದ್ರು.

''ಸಂಬಳಾಂತ ಹೆಚ್ಚು ಕೊಡುದು ಬೇಡ ಭಟ್ರೇ... ಬೇರೆ ಮೇಳ ಕೊಡುದಕ್ಕಿಂತ ಅರೆವಾಸಿ ಕೊಟ್ರೆ ಸಾಕು. ನಂದೇ ಮೇಳ ಕಟ್ಟುವ ತಾಕತ್ತು ಈಗ ಇಲ್ಲ ನಂಗೆ. ದಮ್ಮಯ್ಯ ಆಗುದಿಲ್ಲಾಂತ ಮಾತ್ರ ಹೇಳ್ಬೇಡಿ'' ಅಂತ ಗೋಪಾಲಯ್ಯ ಉಡುಪ್ರಿಗೆ ಅಡ್ಡಬಿದ್ದ.

ಉಡುಪ್ರಿಗೆ ಕಿರಿಕಿರಿ ಆಯ್ತು. ಇವ ಸುಲಭಕ್ಕೆ ಬಿಡುವವ ಅಲ್ಲಾಂತ್ಲೂ ಗೊತ್ತಾಯ್ತು. ''ಗೋಪಾಲ... ನೀನು ಫೇಮಸ್ ಕಲಾವಿದಾಂತ ಎಲ್ರಿಗೂ ಗೊತ್ತುಂಟು. ನಿನ್ನನ್ನು ಮೇಳಕ್ಕೆ ತಕೊಂಡ್ರೆ ಮೇಳ ರೈಸ್ತದೆ. ಆದ್ರೆ ಎಂತ ಮಾಡುದು ಹೇಳು ? ನೀನು ಮರಕಾಲ ಅಲ್ಲವೋ ? ನಿನ್ನನ್ನು ತಕೊಂಡ್ರೆ ದೇವಿಗೆ ಸಿಟ್ಟು ಬರ್ತದೆ. ಅವ್ಳಿಗೆ ಮಡಿ ಭಾರೀ ಮುಖ್ಯ. ಮೇಳ ಎಲ್ಲಿ ಇರ್ತದೋ ಅವ್ಳೂ ಅಲ್ಲಿರ್ತಾಳೆ. ಮಾತ್ರ ಅಲ್ಲ ಇದು ನಾಗನ ಕ್ಷೇತ್ರ. ಅವ್ನಿಗೆ ಮಡಿ ಇನ್ನೂ ಮುಖ್ಯ. ಸ್ವಲ್ಪ ಹೆಚ್ಚು ಕಡಿಮೆ ಆದ್ರೆ ಆಗಬಾರದ್ದೆಲ್ಲ ಆಗ್ತದೆ. ಅಲ್ಲ ಮಾರಾಯಾ ನಿಂಗೆ ಇಂಥ ದುರ್ಬುದ್ಧಿ ಯಾಕೆ ಬಂತೂಂತ ? ಸೇವೆ ಮಾಡು... ಯಾರೂ ಬೇಡಾಂತ ಹೇಳುದಿಲ್ಲ. ಚಂಡಿಕಾ ಹೋಮ ಮಾಡ್ಸು, ಹೂವಿನ ಪೂಜೆ ಮಾಡ್ಸು, ತೇರಿನ ದಿವ್ಸ ಅನ್ನ ಸಂತರ್ಪಣೆಗೆ ದುಡ್ಡು ಕೊಡು... ಇಂಥದ್ದೆಲ್ಲ ಮಾಡ್ಸುದು ಬಿಟ್ಟು ಮೇಳಕ್ಕೆ ಸೇರ್ತೇನೇಂತ ಹೇಳ್ತೀಯಲ್ಲಾ? ಮೊದ್ಲೇ ಹೆಣ್ತಿಗೆ ಸೀಕು, ಮಕ್ಕಿಗೆ ಸೀಕೂಂಥ ಹೇಳ್ತಾ ಇದ್ದಿ... ಸತ್ಯ ಹೇಳುದಾ ? ಹಾಗೆಲ್ಲ ಆಗುದು ಎಂತಕ್ಕೆ ಗೊತ್ತುಂಟಾ ? ಈ ತರ ಎಣಿಸೂದ್ರಿಂದ. ಅದೆಲ್ಲ ಆಗ್ಬಾರ್ದೂಂತಂದ್ರೆ ಮೇಳ ಸೇರುವ ಆಲೋಚ್ನೆ ಮಾಡ್ಬೇ ಬೇಡ'' ಅಂತ ಕಡ್ಡಿ ತುಂಡು ಮಾಡಿ ಹೇಳಿದ್ರು. ಗೋಪಾಲಯ್ಯನಿಗೆ ಭಾರೀ ಬೇಜಾರಾಯ್ತು. ಒಳಗೊಳಗೇ ಸಿಟ್ಟೂ ಬಂತು. ಬೇರೆ ಎಂತದಕ್ಕೂ ಅಲ್ಲ, ಎಲ್ಲ ಬಿಟ್ಟು ''ನೀನು ಮರಕಾಲಾಂತ'' ಹೇಳಿದ್ರಲ್ಲಾ ಭಟ್ರೂ ಅಂತ. ಸೀದ ಅಲ್ಲಿಂದ ಕಡಲಿನ ಬದಿಗೆ ಹೋದ. ಅಲ್ಲಿದ್ದ ಮರಕಾಲ್ರ ಲೀಡರ್ಗಳನ್ನು ಭೇಟಿ ಮಾಡಿದ. ವಿಷಯ ಹೇಳಿದ. ವಾಸು, ಶಂಕರ, ಭಾಸ್ಕರ ಮೊದಲಾದವ್ರು ಮರಕಾಲ್ರ ಲೀಡರ್‌ಗಳು. ಅವ್ರಿಗೆಲ್ಲ ವಿಷಯ ಕೇಳಿ ಭಾರೀ ಕೋಪ ಬಂತು. ಅದ್ರಲ್ಲೂ ವಾಸು, ಪೇಪರ್ನಲ್ಲೆಲ್ಲ ಬರೀತಾ ಇದ್ದ. ಕೂಡ್ಲೆ ಮರಕಾಲ್ರ ಬೇರೆ ಲೀಡರ್ಗಳಿಗೂ ವಿಷಯ ತಿಳ್ಸಿದ. ಎಲ್ಲ ಒಟ್ಟಾದ್ರು. ಒಟ್ಟಾಗಿ ಧೈರ್ಯವಾಗಿ ಪ್ರಬಣ್ಣನತ್ರವೇ ಹೋಗುದು ಅಂತ ಡಿಸೈಡ್ ಮಾಡಿದ್ರು.

ಗೋಪಾಲನ ವಿಷಯ ವಿಚಾರಿಸ್ಲಿಕ್ಕೆ ಮರಕಾಲ್ರೆಲ್ಲ ಒಟ್ಟಾಗಿ ಬರ್ತಾರೆ ಅಂತ ಶೆಟ್ರುಗಳಿಗೆ, ಉಡುಪ್ರಿಗೆ ಮೊದ್ಲೇ ಗೊತ್ತಾಗಿತ್ತು. ಅವ್ರೂ ಎಂತ ಉತ್ರ ಕೊಡ್ಬೇಕು ಅಂತ ಆಲೋಚನೆ ಮಾಡಿಕೊಂಡಿದ್ರು. ಅವ್ರೆಲ್ಲ ಬಂದಾಗ ಎಲ್ಲ, ಗೊತ್ತಿದ್ರೂ ಎಂತ ಗೊತ್ತಿಲ್ಲದವ್ರ ಹಾಗೆ ಕೂತಿದ್ರು. ಗೋಪಾಲ ಒಂದಿಪ್ಪತ್ತೈದು ಮರಕಾಲ್ರ ಲೀಡರ್‌ಗಳನ್ನು ಮುಂದಕ್ಕಿಟ್ಕೊಂಡು ಬಂದ. ಈ ಸಾರಿ ಅವ ಮಾತಾಡ್ಲಿಲ್ಲ, ಲೀಡರ್‌ಗಳು ಮಾತಾಡಿದ್ರು.

''ಪ್ರಬಣ್ಣಾ... ಒಂದು ವಿಷಯ...''

''ಯಂತದಾ ?''

''ವಿಷಯ ನಿಮ್ಗೇ ಗೊತ್ತುಂಟು... ಗೋಪಾಲನಿಗೆ ಈ ಸಾರಿ ದ್ಯಾವಸ್ಥಾನ್ದ ಮೇಳದಲ್ಲಿ ಸೇರಿಸ್ಕೊಳ್ಬೇಕೂಂತ ಕೇಳ್ಳಿಕ್ಕೆ ನಾವು ಬಂದದ್ದು... ಮೊನ್ನೆ ಬಂದಿದ್ನಂತೆ... ಭಟ್ರು ಆಗುದಿಲ್ಲ ಅಂತ ಹೇಳಿದ್ರಂತೆ...''

ಪ್ರಭಾಕರ ಶೆಟ್ರು ಉಡುಪ್ರನ್ನು ನೋಡಿ ಕಣ್ಸನ್ನೆ ಮಾಡಿದ್ರು. ಕೂಡ್ಲೆ ಅವ್ರು ಎದ್ದು ನಿಂತು, ಮಣ ಮಣ ಅಂತ ಮಂತ್ರ ಹೇಳಿ ''ಮರಕಾಲ ಬಂಧುಗಳೆSSS... ನೀವು ಇಲ್ಲಿಗೆ ಬಂದದ್ದು ಭಾರೀ ಸಂತೋಷದ ಸಂಗತಿ... ನೀವು ಕೇಳುವ ವಿಷಯವೂ ಸರಿ ಉಂಟು. ಗೋಪಾಲನನ್ನು ಮೇಳಕ್ಕೆ ಸೇರಿಸ್ಕೊಳ್ಳಿಕ್ಕೆ ನಂದಾಗ್ಲೀ, ಶೆಟ್ರದ್ದಾಗ್ಲೀ ತಕ್ರಾರಿಲ್ಲ. ಆದ್ರೆ... ಇದು ದೇವಿ ಹೆಸ್ರಲ್ಲಿ ನಡಿಯುವ ಮೇಳ. ಇದ್ರಲ್ಲಿ ಪ್ರಾಕಿನಿಂದ್ಲೂ ಬ್ರಾಮಣ್ರು, ಕೊಂಕಣ್ರು, ಶೆಟ್ರುಗಳು ಬಿಟ್ರೆ ಬೇರೆ ಜಾತಿಯವ್ರು ಬಂದದಿಲ್ಲ, ಬರ್ಲಿಕ್ಕೆ ಆಗುದೂ ಇಲ್ಲ. ಹೋದ ವರ್ಷ ಕೊರಗ ಒಬ್ಬ ಆಟ ನಡಿಯುವಾಗ ಚೌಕಿಗೆ ಬಂದಿದ್ದ. ಎಂತ ಆಯ್ತು ಅವ್ನ ಕತೆ ? ಮನೆಗೆ ಬೆಂಕಿ ಬಿತ್ತು. ಮತ್ತೊಬ್ಬ ಮರಕಾಲ ಮಲ್ಪೆಯಲ್ಲಿ ದೇವಿಯ ಬಗ್ಗೆ, ಈ ದೇವಸ್ಥಾನದ ಬಗ್ಗೆ ಬಾಯಿಗೆ ಬಂದ ಹಾಗೆ ಬೈದ. ನಡುರಾತ್ರಿ ಮುಗಿಯುದ್ರೊಳಗೆ ಅವ ರಕ್ತಕಾರಿ ಸತ್ತ. ನಾನು ಇದನ್ನೆಲ್ಲ ಎಂತಕ್ಕೆ ಹೇಳ್ತಾ ಇದ್ದೇನೇಂತಂದ್ರ ಗೋಪಾಲ ನಮ್ಮ ಊರಿನ ಕೊಂಡಾಟದ ಕಲಾವಿದ. ನಾಳೆ ಅವ್ನಿಗೆಂತದಾದ್ರೂ ಹೆಚ್ಚು ಕಡಿಮೆ ಆದ್ರೆ ಇಡೀ ಊರಿಗೆ ಅದು ಕಳಂಕ ಅಲ್ವೋ...'' ಅಂತ ಹೇಳಿ ಕೂತ್ರು.

''ವಸಂತಣ್ಣಾ... ಆಟ ಆಡಿಸುವವ್ರು ಯಾವ ಜಾತಿಯವ್ರು ?'' ಒಬ್ಬ ಕೇಳಿದ.

''ಬಹುಪಾಲು ನಮ್ಮವ್ರು. ಆಮೇಲೆ ನಿಮ್ಮ ಜಾತಿಯವ್ರು.''

''ದ್ಯಾವಸ್ಥಾನಕ್ಕೆ ಹರ್ಕೆ ಯಾವ ಜಾತಿಯವ್ರಿಂದ ಬರುದು ?''

''ಅದು ಎಲ್ಲ ಜಾತಿಯವ್ರಿಂದ್ಲೂ ಬರ್ತದೆ.''

''ನಮ್ಮ ಜಾತಿಯರಿಂದ್ಲು ಬರ್ತದಾ ?''

''ಓ... ನಿಮ್ಮ ಜಾತಿಯವ್ರಿಂದ್ಲೇ ಹೆಚ್ಚು ಬರುದು'' ಅಂತ ಹೇಳಿದ್ರು ಉಡುಪ್ರು.

''ಹರ್ಕೆ ಒಪ್ಪಿಸ್ಲಿಕ್ಕೆ, ಆಟ ಆಡಿಸ್ಲಿಕ್ಕೆ ಮರಕಾಲ್ರು ಆಗ್ತದೆ. ಆದ್ರೆ ಮೇಳಕ್ಕೆ ಬರ್ಬಾರ್ದಾ ?''

''ಹಾಗೆ ನೋಡಿದ್ರೆ ದೇವಿ ವಿಗ್ರಹ ಸಿಕ್ಕಿದ್ದೇ ನಮ್ಮವ್ರಿಗಂತೆ. ಕಡ್ಳಲ್ಲಿ ಮೀನಿನ ಬಲೆಗೆ ದೇವಿಯ ವಿಗ್ರಹ ಸಿಕ್ಕಿತ್ತಂತೆ. ಕುಚ್ಚು ಮರಕಾಲನ ಊರು ಕುಚ್ಚೂರು ಆಗ್ಲಿ ಅಂತ ದೇವಿಯೇ ಹೇಳಿದ್ದಾಳಂತೆ. ನೀವು ಬ್ರಾಮಣ್ರು ಭಾರೀ ಬುದ್ಧಿವಂತ್ರು. ಇದನ್ನೆಲ್ಲ ಅಡಿಗೆ ಹಾಕಿ ನಿಮ್ದೇ ದ್ಯಾವಸ್ಥಾನ ಅಂತ ಮೆರೀತಾ ಇದ್ದೀರಿ.''

''ಅಲ್ಲ ಭಟ್ರೇ, ಶೆಟ್ರೇ... ಕಮಿಟಿಯಲ್ಲಿ ನಮ್ಮ ಜಾತಿಯವ್ರೂ ನಾಲ್ಕು ಜನ ಇರ್ಬೇಕಂತ ರೂಲ್ಸು ಉಂಟು. ಅದನ್ನು ಅಡಿಗೆ ಹಾಕಿದ್ದೀರಿ. ನೀವು ಒಟ್ಟಾಗಿ...'' ಮರಕಾಲ್ರಿಂದ ಒಂದೊಂದೇ ಬಾಂಬು ಬೀಳ್ಳಿಕ್ಕೆ ಸುರುವಾದ ಕೂಡ್ಲೆ ಶೆಟ್ರ ಪಿತ್ಥ ನೆತ್ತಿಗೇರಿತು.

''ಅದನ್ನೆಲ್ಲ ಕೇಳ್ಳಿಕ್ಕೆ ನೀನು ಯಾರ !?'' ಅಂತ ನಡುಗ್ತಾ ಕೇಳಿದ್ರು.

''ಶೂದ್ರ ರಂಡ್ಯಾ ಮಕ್ಳೆ ನಿಮ್ಗೆಲ್ಲ ಎಷ್ಟು ಹಾಂಕಾರಾಂತ. ಶ ಷ ಸ ಹೇಳ್ಳಿಕ್ಕೆ ಬರುದಿಲ್ಲ ದೊಡ್ಡ ಸಂಗತಿ ಮಾತಾಡ್ಲಿಕ್ಕೆ ಬಂದ್ರು. ನಮ್ಮನ್ನು ಬೈದೇ ನಿಮ್ಮ ಗತಿ ಹೀಗಾದದ್ದು ಇವತ್ತು!'' ಉಡುಪ್ರ ಮೈ ಇಡೀ ನಡುಗ್ತಿತ್ತು ಕೋಪದಿಂದ.

''ಅಲ್ಲ ಬಟ್ರೇ ನಮ್ಮನ್ನು ಹತ್ತಿರ ಸೇರ್ಸುದಿಲ್ಲ ಅಂತ ಹೇಳೀರಿ. ಮೊನ್ನೆ ಮೊನ್ನೆ ತಂಕ ನೀವು ರಾಧೆ ಮನೆಗೆ ಹೋಗ್ತಿರ್ಲಿಲ್ವಾ ? ನಿಮ್ಮ ಮಗರಾಯ ಈಗ್ಲೂ ರಾಧೆಯ ಮಗ್ಳು ಯಸೋದನ ಮನೆಗೆ ಹೋಗ್ತಾನೆ ಗೊತ್ತುಂಟಾ ? ಯಂತಕ್ಕೇಂತ ಹೇಳುದಾ ಈಗ ?'' ಅಂತ ಒಬ್ಬ ವಕ್ರವಾಗಿ ಕೇಳಿದಾಗ ಪಿಸ್ರು ಏರಿದ ಶೆಟ್ರಿಗೂ ನಗುಬಂತು. ಉಡುಪ್ರಿಗೆ ಕೋಪ ಅವಮಾನ ಎಲ್ಲ ಒಟ್ಟಿಗೆ ಆಯ್ತು.

ವಿಷಯ ಎಲ್ಲೆಲ್ಲಿಗೋ ಹೋಗುದನ್ನು ನೋಡಿ ಗೋಪಾಲನಿಗೆ ಬೇಜಾರಾಯ್ತು. ಒಂದು ಮೂಲೆಯಲ್ಲಿ ಕೂತಿದ್ದ ಅವ್ನು, ''ಈಗ ನಂಗೆ ದೇವಿಯೇ ದಿಕ್ಕು ತೋರಿಸ್ಬೇಕು. ನೀವೆಲ್ಲ ಆಗುದಿಲ್ಲಾಂತ ಹೇಳಿದ್ರಿ. ದರ್ಶನದಲ್ಲಿ ಒಂದು ಮಾತು ಕೇಳುವ ಅವ್ಳ ಹತ್ರವೇ. ಆಗದಾ ?'' ಅಂತ, ಒಂದು ಸಣ್ಣ ಆಸೆಯಿಂದ ಕೇಳಿದ.

ಮರಕಾಲ್ರೆಲ್ಲ, ''ಹೌದೌದು ಅದೇ ಸರಿ, ಅದೇ ಸರಿ'' ಅಂತ ಹೇಳಿದ್ರು.

''ಬಟ್ರೇ ಇದಕ್ಕೆ ಎಂತ ಹೇಳ್ತೀರಿ?'' ಅಂತ ಗೋಪಾಲ ಕೇಳಿದ.

''ಆದೀತು. ದೇವಿಯ ಬಾಯಲ್ಲಿ ಎಂತ ಬರ್ತದಾ ಅದೇ ನಡೀಬೇಕು'' ಅಂದ್ರು ಪ್ರಬಣ್ಣ. ಉಡುಪ್ರು ಗಾಬ್ರಿಯಲ್ಲಿ ಅವ್ರನ್ನು ನೋಡಿದ್ರು. ಪ್ರಬಣ್ಣ ಕಣ್ಸನ್ನೆಯಲ್ಲೆ ಉಡುಪ್ರನ್ನು ಸಮಾಧಾನ ಮಾಡಿದ್ರು.

* * *

ಶುಕ್ರವಾರ ಸಂಜೆ ದೇವಸ್ಥಾನದಲ್ಲಿ ತುಂಬ ಜನ ಸೇರಿದ್ರು. ಉಡುಪ್ರು ದೇವಿಯನ್ನು ಪಾತ್ರಿಯ ಮೈಮೇಲೆ ಬರುವಂತೆ ಹೇಳಿ ಕೇಪಳ, ಪಿಂಗಾರ ಎಸ್ದ ಕೂಡ್ಲೆ ಬ್ಯಾಂಡು, ವಾದ್ಯ, ತಾಸೆ ಎಲ್ಲ, ''ಪೇSSS ಪೇSSSS, ಪೇSSS ಟ್ರಕೌಟಂ ಟ್ರಕೌಟಂ ಟ್ರಕೌಟಂ!'' ಅಂತ ಸೌಂಡು ಮಾಡಿದವು. ಪಾತ್ರಿ ಹಾರಿ ಹಾರಿ ಕುಣೀಲಿಕ್ಕೆ ಸುರು ಮಾಡಿದ. ಒಂದು ಗಳಿಗೆಯಲ್ಲಿ ಎಲ್ಲ ಶಾಂತ ಆಯ್ತು. ಆವಾಹನೆಯಿಂದ ನಡುಗ್ತಿದ್ದ ಪಾತ್ರಿ, ''ಹಾ!.... ಹೂ!... ಏನು ವಿಷಯ ಉಡುಪರೆ?'' ಅಂತ ಕೇಳಿದ.

''ದೇವಿ... ನಿಂಗೆ ಗೊತ್ತಿಲ್ಲದೇ ಇರುದು ಎಂತದೂ ಇಲ್ಲ. ಆದ್ರೂ ನಿನ್ನ ಮಕ್ಕಳಾದ ನಮ್ಮಿಂದ ಬಾಯಿ ಬಿಡಿಸ್ತಾ ಇದ್ದೀ. ಗೋಪಾಲ ಎನ್ನುವವ್ನು ನಿನ್ನ ಮೇಳಕ್ಕೆ ಸೇರ್ಬೇಕೂಂತ ಹೇಳ್ತಾ ಇದ್ದಾನೆ. ಇದ್ರ ಬಗ್ಗೆ ನಿನ್ನ ಚಿತ್ತ ಏನೂಂತ ತಿಳೀಬೇಕಾಗಿದೆ'' ಅಂತ ಹೇಳಿದ್ರು ಉಡುಪ್ರು.

''ಉಡುಪರೇ... ಅವ್ನು ಎಂತರವ?''

''ತಾಯೇ... ಅವ ಮರಕಾಲ''

''ಕೂಡದು!.... ಕೂಡದು!... ಭಟ್ಟ ಕೊಂಕಣ ಶೆಟ್ರಲ್ಲದೆ ಅನ್ಯ ಜಾತಿಯು ಕೂಡದು! ಹಾಂ!... ಹೂಂ!...''

ಸೇರಿದ್ದ ಮರಕಾಲ್ರೆಲ್ಲ ''ಹೋ!SS...'' ಅಂದ್ರು. ಗೋಪಾಲ ಕೂಗ್ತಾ ಪ್ರಸಾದ ತಕೊಂಡು ಉಳ್ದ ಮರಕಾಲ್ರ ಒಟ್ಟಿಗೆ ಹಿಂದಕ್ಕೆ ಹೋದ. ವಾಸುವಿಗೆ ದೇವಿಯ ನುಡಿಕಟ್ಟಿನಲ್ಲಿ ಎಂಥದೋ ಹಿಕ್ಮತ್ತು ಇರ್ಬೇಕೂಂತ ಅನಿಸಿತು. ಅದನ್ನು ಕಂಡುಹಿಡೀಲೇಬೇಕು ಅಂತ ಎಣಿಸಿದ.

* * *

ದರ್ಶನದ ರಹಸ್ಯ ಏನೂಂತ ವಾಸುವಿಗೆ ಗೊತ್ತಾಯ್ತು. ಪಾತ್ರಿಯ ಹೆಸ್ರು ಬೊಗ್ಗು ಅಂತ. ಅವ್ನು ಮರಕಾಲ. ತುಂಬ ವರ್ಷಗಳಿಂದ ಪಾತ್ರಿಯಾಗಿ ದೇವಸ್ಥಾನದಲ್ಲಿ ಸೇವೆ ಸಲ್ಲಿಸ್ತಿದ್ದ. ಒಂದು ಎಕರೆ ಗದ್ದೆ, ಅದು ಬಿಟ್ರೆ ದೇವಸ್ಥಾನದ ಹತ್ತಿರ ಒಂದು ಸ್ವಲ್ಪ ಹಾಡಿ. ಇದಷ್ಟೇ ಅವ್ನಿಗಿದ್ದ ಜಾಗ. ಗದ್ದೆಯಲ್ಲಿ ಬೆಳಿಯುದು ಅಷ್ಟಕ್ಕಷ್ಟೆ ಇತ್ತು. ಹಾಡಿಯಲ್ಲಿ ಒಳ್ಳೆ ರೇಟಿನ ಮರಗಳು ತುಂಬ ಇತ್ತು. ಪ್ರಭಾಕರ ಶೆಟ್ರು ದೇವಸ್ಥಾನದ ಕಾಂಪೌಂಡು ಕಟ್ಟುವಾಗ ಅದನ್ನೂ ಸೇರಿಸಿ ಕೊಂಡ್ರು. ಬೊಗ್ಗುವಿಗೆ ಅದನ್ನು ಕಂಡು ಎದೆ ಬಾಯಿಗೆ ಬಂತು. ''ಎಂತ ಅನ್ಯಾಯ ಇದು ಪ್ರಬಣ್ಣಾ'' ಅಂದ.

''ಅನ್ಯಾಯ ಎಂತದು ತಾಂತಾರಿ? ಬೇಕಾದ್ರೆ ಕೋರ್ಟಿಗೆ ಹೋಗು'' ಅಂತ ಹೇಳಿದ್ರು ಕ್ಯಾರ್ ಮಾಡದೆ.

ಬೊಗ್ಗು ಭೂಮಿಗೆ ಇಳ್ದು ಹೋದ. ಯಾರದೋ ಮಾತು ಕೇಳಿ ಕೋರ್ಟಿಗೆ ಹೋದ. ಆದ್ರೆ ಫೀಸು ಕಟ್ಲಿಕ್ಕೆ ಆಗದೆ ಒದ್ದಾಡಿದ. ಆಮೇಲೆ ಬೊಗ್ಗುವಿನದ್ದು ಒಂದೇ ದಿನಚರಿ. ಟೈಟಾಗಿ ಕುಡಿಯುದು. ಬಾಯಿಗೆ ಬಂದ ಹಾಗೆ




ಉಡುಪ್ರನ್ನು ಶೆಟ್ರನ್ನು ಬೈಯುದು. ಒಂದು ದಿನ ಉಡುಪ್ರು, ಶೆಟ್ರು ಬೊಗ್ಗುವಿನ ಗುಡಿಸಿಲಿಗೆ ಬಂದ್ರು. ದರ್ಶನದಲ್ಲಿ ಗೋಪಾಲನ ವಿಷಯ ಪ್ರಸ್ತಾಪ ಆಗುವ ವಿಷಯ ಹೇಳಿದ್ರು. ತಮ್ಮ ಪರವಾಗಿ ನುಡಿಕಟ್ಟು ಕೊಡ್ಲಿಕ್ಕೆ ಹೇಳಿದ್ರು. ಬೊಗ್ಗುವಿಗೆ ಸಿಟ್ಟು ಬಂತು. ''ರಂಡ್ಯಾ ಮಕ್ಳೇ!... ನನ್ನ ಹಾಡಿ ತಿಂದು ಹಾಕಿ ಬಾಳು ಹಾಳು ಮಾಡಿದ್ರಿ. ಈಗ ಗ್ವಾಪಾಲನ ಬಾಳು ಹಾಳು ಮಾಡ್ತಾ ಇದ್ದೀರಾ? ಅವ ನನ್ನ ಜಾತಿ ಮಗ. ಎಂತದಿದ್ರೂ ಅವನ ಕಡೆಗೇ ನಾನು ನುಡಿಕಟ್ಟು ಕೊಡುವವ!'' ಅಂತ ಹೇಳಿದ.

''ಹ್ಹೆ... ಹ್ಹೆ... ಬೊಗ್ಗು... ನೀನು ನಮ್ಮ ಪರವಾಗಿ ನುಡಿಕಟ್ಟು ಕೊಟ್ರೆ ನಿನ್ನ ಹಾಡಿ ನಿಂಗೇ ವಾಪಾಸ್ ಕೊಡ್ತೇನೆ. ಕೇಸು ಹಿಂದೆ ತಕ್ಕೊಳ್ತೇನೆ...'' ಅಂದ್ರು ಶೆಟ್ರು.

ಬೊಗ್ಗು ಕೂಡ್ಲೆ ಕಾಲಿಗೆ ಬಿದ್ದ. ''ಬಟ್ರೇ... ಶೆಟ್ರೇ... ಮಾಪು ಮಾಡಿ... ಬಡವ... ಸಿಟ್ಟಿನಿಂದ ಎಂತೆಂಥದೋ ಮಾತಾಡಿದೆ... ನೀವು ಮನುಷ್ಯರಲ್ಲ ದೇವ್ರು...'' ಅಂತ ಕೂಗ್ತ ಕಾಲಿಗೆ ಬಿದ್ದ. ಬಂದ ಕೆಲ್ಸ ಆಯ್ತು ಅಂತ ಖುಷಿಯಲ್ಲಿ ಹೋದ್ರು.

ಈ ಎಲ್ಲ ವಿಷಯವನ್ನು ಬೊಗ್ಗುವೇ ದರ್ಶನದ ಬಗ್ಗೆ ಎಂಕ್ವೈರಿಗೆ ಬಂದ ವಾಸುವಿನತ್ರ ಹೇಳಿದ. ''ದರ್ವೇಸಿಗಳು!... ಆ ದಿವ್ಸ ಆಸೆ ತೋರ್ಸಿದ್ರು! ಇವತ್ತು ತಾರಮ್ಮಯ್ಯ ಅಂತ ಹೇಳ್ತಾ ಇದ್ದಾರೆ'' ಅಂತ ಕುಡ್ದ ಮತ್ತಿನಲ್ಲಿ ಊದಿದ.

* * *

ವಾಸು ಈ ಎಲ್ಲ ಪ್ರಸಂಗವನ್ನು ಬೇರೆ ಬೇರೆ ಪೇಪರ್‌ಗಳಿಗೆ ಬರ್ದ. ''ಕುಚ್ಚೂರು ಮೇಳದಲ್ಲಿ ಜಾತಿ ನಿಂದನೆ'' ''ಬ್ರಾಹ್ಮಣ್ಯದ ಆರ್ಭಟ'', ''ಸವರ್ಣೀಯರಿಂದ ಜಾತಿ ನಿಂದನೆ'' ಎಂಬ ಹೆಡ್ಡಿಂಗುಗಳು ಎಲ್ಲ ಪೇಪರ್‌ಗಳಲ್ಲಿ ಬಂದವು. ಸಾಲದ್ದಕ್ಕೆ ಗೋಪಾಲನನ್ನು ಪುಸಲಾಯಿಸಿ ಹನ್ಮಂತನ ವೇಷ ಹಾಕಿಸಿ ಡಿ.ಸಿ. ಆಫೀಸಿನ ಮುಂದೆ ಕುಣ್ಸಿದ. ಹಾ ಹೂ ಅನ್ನೂದ್ರೊಳಗೆ ಗೋಪಾಲನ ಬೆನ್ನ ಹಿಂದೆ ತುಂಬ ಕಲಾವಿದ್ರು ಸಪೋರ್ಟಿಗೆ ನಿಂತ್ರು. ಒಬ್ರು ಸ್ವಾಮಿಗಳು ಗೋಪಾಲನಿಗೆ ನ್ಯಾಯ ಸಿಗುವತಂಕ ಊಟ ಮಾಡುದಿಲ್ಲ ಅಂತ ಕೂತ್ರು. ತುಂಬ ಜನ ಪೇಪರಲ್ಲಿ ಸಪೋರ್ಟು ಮಾಡಿ ಬರ್ದ್ರು. ಖುದ್ದು ಡಿ.ಸಿ.ಯೇ ಬಂದು ಗೋಪಾಲನನ್ನು ಭೇಟಿ ಮಾಡಿ ವಿಷಯ ತಿಳ್ಕೊಂಡ್ರು. ಕೂಡ್ಲೆ ಗೋಪಾಲನನ್ನು ಕುಚ್ಚೂರಿಗೆ ಕರ್ಕೊಂಡು ಹೋದ್ರು. ದೇವಸ್ಥಾನಕ್ಕೆ ಬಂದವ್ರೆ ಎಲ್ಲ ರೆಕಾರ್ಡು ತೆಗ್ಸಿದ್ರು. ಉಡುಪ್ರತ್ರ, ಶೆಟ್ರತ್ರ ಎಲ್ಲ ವಿಷಯ ಕೇಳಿದ್ರು. ಕೊನೆಗೆ, ''ಮೇಲ್ನೋಟಕ್ಕೆ ನೀವು ಕಾನೂನನ್ನು ವಯೋಲೇಟ್ ಮಾಡಿದ್ದು ಗೊತ್ತಾಗ್ತಾ ಉಂಟು. ನಿಮ್ಮ ಪುಣ್ಯ... ಗೋಪಾಲ ಕೋರ್ಟಿಗೆ ಹೋಗ್ಲಿಲ್ಲ. ಹೊಗ್ತಿದ್ರೆ ನೀವು ಕೆಲವು ಅಪರಾಧದ ಅಡಿಯಲ್ಲಿ ತುಂಬ ವರ್ಷ ಜೈಲಲ್ಲಿ ಇರ್ಬೇಕಾಗ್ತದೆ'' ಅಂತ ಖಾರವಾಗಿ ಹೇಳಿದ್ರು. ಡಿ.ಸಿ. ಕೊಟ್ಟ ಕಾರಣಗಳು, ಅವ್ರ ಇಂಗ್ಲಿಷ್ ಶೈಲು ಎಲ್ಲ ನೋಡಿದ ಶೆಟ್ರು ಹೆದ್ರಿ ಬೆವರಿದ್ರು. ಉಡುಪ್ರಿಗೆ ಉಚ್ಚೆ ಹೇಲು ಎಲ್ಲ ಬರುವ ಹಾಗೆ ಆಯ್ತು!

''ಆಯ್ತು ಖಾವಂದರೇ... ನೀವು ಹೇಳಿದ ಹಾಗೆ ಮಾಡ್ತೇವೆ... ಗೋಪಾಲನನ್ನು ಈ ಸರ್ತಿಯ ತಿರುಗಾಟದಿಂದ್ಲೇ ನಮ್ಮ ಮೇಳಕ್ಕೆ ತಕ್ಕೊಳ್ತೇವೆ... ಹ್ಹೆ... ಹ್ಹೆ... ನಮ್ಗೆ ಜಾತಿಗೀತಿ ಎಂಥದೂ ಇಲ್ಲ... ಎಲ್ಲ ಒಂದೆ ಅಲ್ವೋ...'' ಅಂತ ಕೈ ಕೈ ಹಿಸುಕ್ತಾ ನೈಸಾಗಿ ಮಾತಾಡಿದ್ರು.

ಮರಕಾಲ್ರ ಲೀಡರ್‌ಗಳಿಗೆ ವಿಷಯ ಗೊತ್ತಾಯ್ತು. ದೇವಸ್ಥಾನಕ್ಕೆ ಬಂದು ಶೆಟ್ರತ್ರ, ''ಶೆಟ್ರೇ... ಗೋಪಾಲನನ್ನು ಈ ಸಾರಿ ದ್ಯಾವಸ್ಥಾನದ ಮೇಳಕ್ಕೆ ತಗೊಳುದನ್ನು ಕೇಳಿ ಭಾರಿ ಖುಷಿ ಆಯ್ತು. ಅದಕ್ಕೆ ಒಂದು ಫಂಕ್ಷನ್ ಎರೇಂಜ್ ಮಾಡುವ. ಡಿ.ಸಿ.ಯನ್ನು ಬರ್ಲಿಕ್ಕೆ ಹೇಳುವ. ಅವ್ರಿಗೆ ಮತ್ತು ಗೋಪಾಲನಿಗೆ ಸನ್ಮಾನ ಮಾಡ್ಬೇಕೂಂತ ಉಂಟು ನಮ್ಗೆ... ಅದ್ರ ಮುಖ್ಯ ಅತಿಥಿಗಳಾಗಿ ನೀವು, ಉಡುಪ್ರು ಬರ್ಬೇಕು. ಅಧ್ಯಕ್ಷರು ವಸಂತಣ್ಣ...'' ಅಂತ ಕೇಳಿಕೊಂಡ್ರು.

ಶೆಟ್ರು ಮನಸಲ್ಲೆ, ''ಬೋಳಿಮಕ್ಳೆ... ಇಲ್ಲೂ ಕಟಿಪಿಟಿ ಮಾಡ್ತೀರಾ? ಇರ್ಲಿ ನಂದೂ ಪವರ್ ತೋರಿಸ್ತೇನೆ'' ಅಂತ ಎಣಿಸಿದ್ರು. ಡಿ.ಸಿ.ಯ ಹೆಸ್ರು ಎತ್ತಿದ್ರಿಂದ ಆಗುದಿಲ್ಲಾಂತ ಹೇಳ್ಲಿಕ್ಕೆ ಆಗ್ಲಿಲ್ಲ ಅವ್ರಿಗೆ. ''ಆಯ್ತು ಹಾಗಾದ್ರೆ ಲಕ್ಷದೀಪದ ದಿವ್ಸ ಮೇಳ ಹೊರಡುದು.. ಅವತ್ತೇ ಖಾವಂದರಿಗೆ ಗೋಪಾಲನ ಕೈಯಲ್ಲಿ ಸನ್ಮಾನ ಮಾಡಿಸುವ. ಮಾತ್ರ ಅಲ್ಲ.. ಪ್ರತಿ ವರ್ಷ ಮೇಳ ಹೊರಡುವ ದಿವ್ಸ ಪಾಂಡವಾಶ್ವಮೇಧ ಆಡಿಸುದು ಕ್ರಮ. ಈ ಸರ್ತಿ ಲಂಕಾದಹನ ಆಡಿಸುವ. ಯಾಕಂದ್ರೆ ಗೋಪಾಲನ ಹನ್ಮಂತ ಭಾರೀ ಫೇಮಸ್ ಅಲ್ಲವೋ? ಮೊದ್ಲ ದಿವ್ಸವೇ ಆಟ ರೈಸ್ಲಿ'' ಅಂತ ಹೇಳಿದ್ರು. ಬಂದವ್ರಿಗೆಲ್ಲ, ''ಆಗ್ಲಿ... ಶೆಟ್ರಿಗೆ ಈಗಾದ್ರೂ ಒಳ್ಳೇ ಬುದ್ಧಿ ಬಂತಲ್ಲಾ?'' ಅಂತ ಭಾರೀ ಖುಷಿ ಆಯ್ತು ಅವ್ರೆಲ್ಲ ಒಪ್ಪಿದ್ರು.

* * *

ಡಿ.ಸಿ. ಮತ್ತು ಅವ್ರ ಪರಿವಾರದವ್ರೆಲ್ಲ ಕುಚ್ಚೂರಿಗೆ ಬಂದದ್ದು ಇದೇ ಫಂಕ್ಷನ್ನಿಗೆ. ಡಿ.ಸಿ. ಸ್ಟೇಜ್ ಹತ್ತುವಾಗ್ಲೇ ಭಾರೀ ಚಪ್ಪಾಳೆ. ವಿಸಿಲೋ ವಿಸಿಲ್. ಉಡುಪ್ರು ಶೆಟ್ರು ಸ್ಟೇಜ್ ಹತ್ತಿದಾಗ ಕಡಿಮೆ ಆಯ್ತು. ಒಬ್ಬೊಬ್ರದ್ದೇ ಭಾಷಣ ಸುರುವಾಯ್ತು. ಎಲ್ರೂ ಜಾತಿ ನಾಶದ ಬಗ್ಗೆ, ದೇಶೋದ್ಧಾರದ ಬಗ್ಗೆ ಮಾತಾಡಿದ್ರು. ಕಡೇಯಲ್ಲಿ ಡಿ.ಸಿ.ಗೆ ಗೋಪಾಲನ ಕೈಯಿಂದ, ಗೋಪಾಲನಿಗೆ ಡಿ.ಸಿ. ಕೈಯಿಂದ ಸನ್ಮಾನ. ಗೋಪಾಲ ಆಗ್ಲೇ ಹನ್ಮಂತನ ವೇಷ

೨೬ನೇ ಪುಟಕ್ಕೆ



# ಅರ್ಥ ಮತ್ತು ಪ್ರವಾಹ ಎರಡು ಕಲಾತ್ಮಕ ಚಿತ್ರಗಳು

ಕಳೆದ ವರ್ಷ ಅಕ್ಟೋಬರ್ ೨೯ರಿಂದ ನವೆಂಬರ್ ೪ರ ವರೆಗೆ ಏಳು ದಿನಗಳ ಕಾಲ ಇಂಡೋ-ಜರ್ಮನ್ ಚಿತ್ರೋತ್ಸವವನ್ನು ಬೆಂಗಳೂರಿನಲ್ಲಿ ಏರ್ಪಡಿಸಲಾಗಿತ್ತು. ಈ ಚಿತ್ರೋತ್ಸವದ ಸಂದರ್ಭದಲ್ಲಿ ಎರಡೂ ದೇಶಗಳ ಕಥಾಚಿತ್ರಗಳು ಮತ್ತು ಮಕ್ಕಳ ಚಿತ್ರಗಳ ಪ್ರದರ್ಶನ, ಕಾರ್ಯಾಗಾರಗಳು ಮತ್ತು ಚರ್ಚಾಗೋಷ್ಠಿಗಳನ್ನು ನಡೆಸಲಾಯಿತು. ಭಾರತೀಯ ಭಾಷೆಗಳ ಪೈಕಿ 'ಅರ್ಥ' ಮತ್ತು 'ಪ್ರವಾಹ' ಕನ್ನಡ ಚಿತ್ರಗಳೂ ಪ್ರದರ್ಶನಗೊಂಡು ಪ್ರೇಕ್ಷಕರ ಪ್ರಶಂಸೆ ಗಳಿಸಿದವು. ಕನ್ನಡದಲ್ಲಿ ಆಗೊಮ್ಮೆ ಈಗೊಮ್ಮೆ ಜಿನುಗುತ್ತಿರುವ ಹೊಸ ಅಲೆಯ ಚಿತ್ರಗಳು ಬತ್ತಿಹೋಗುತ್ತಿವೆಯೋ ಎಂದೆನಿಸುವ ಸನ್ನಿವೇಶದಲ್ಲಿ ಈ ಚಿತ್ರಗಳಿಗೆ ಮನ್ನಣೆ ದೊರಕಿದ್ದು ತುಸು ಸಮಾಧಾನ ತರುವ ಸಂಗತಿ.



ಈರಪ್ಪ ಎಂ. ಕಂಬಳಿ

**ಬಿ.** ಸುರೇಶ ನಿರ್ದೇಶನದ '**ಅರ್ಥ**' ಜಾಗತೀಕರಣದ ಹಿನ್ನೆಲೆಯಲ್ಲಿ, ಆರ್ಥಿಕ ಉದಾರೀಕರಣದ ಪರಿಣಾಮವಾಗಿ ಸುಲಭವಾಗಿ ಸಾಲ ಸಿಗುತ್ತಿರುವ ಕಾರಣಕ್ಕಾಗಿ, ದೇಶದ ಕೆಳ-ಮಧ್ಯಮ ವರ್ಗದ ಕುಟುಂಬಗಳಲ್ಲಿ ಹೆಚ್ಚುತ್ತಿರುವ ಕೊಳ್ಳುಬಾಕ ಸಂಸ್ಕೃತಿ ಹಾಗೂ ಸಾಲ ಮಾಡಿಯಾದರೂ ಐಷಾರಾಮಿ ಜೀವನ ಅನುಭೋಗಿಸಬೇಕೆನ್ನುವ ಚಪಲಕ್ಕೆ ಹೇಗೆ ನಮ್ಮ ಜನ ಬಲಿಯಾಗುತ್ತಾರೆನ್ನುವ ಕಥಾಹಂದರವಿದೆ. ಆಟೋ ಓಡಿಸುವ ಸೀನಪ್ಪ ನಮ್ಮ ನಗರ ಪ್ರದೇಶದ ಬಡ ಕುಟುಂಬದ ಸಂಕೇತ. ಓಡಿಸುತ್ತಿದ್ದ ಆಟೋವನ್ನು ಅದರ ಮಾಲೀಕ ಕಿತ್ತುಕೊಂಡು ಹೋದಾಗ, ಹೊಸ ಆಟೋ ಖರೀದಿಸಲು ಗೆಳೆಯ ಅಬ್ದುಲ್ಲಾ ಮತ್ತು ಬೀದಿ ವೇಶ್ಯೆ ರಾಣಿ ಆತನ ನೆರವಿಗೆ ನಿಲ್ಲುತ್ತಾರೆ. ಸ್ವಯಂ ನಿವೃತ್ತಿ ಪಡೆದು ಏಕಾಂತದಲ್ಲಿ ಇಸ್ಪೀಟು ಆಡಿಕೊಂಡು ಕಾಲಹರಣ ಮಾಡುತ್ತಿದ್ದ, ಕಮೀಶನ್ ಮೇಲೆ ಸುಲಭವಾಗಿ ಸಾಲ ಕೊಡಿಸುವ ದಲ್ಲಾಳಿಯೂ ಆಗಿದ್ದ ಹಾಗೂ ಆತ ರಾಣಿಯ ಹಳೆಯ ಗಿರಾಕಿಯೂ ಆಗಿದ್ದ – ಮಾಜಿ ಬ್ಯಾಂಕು ಮ್ಯಾನೇಜರನೊಬ್ಬನ ಸಹಾಯ ಪಡೆಯಲು ರಾಣಿಯೇ ಶಿಫಾರಸು ಮಾಡುತ್ತಾಳೆ. ಯಾವ ಭದ್ರತೆಯೂ ಇಲ್ಲದೆ, ಶೇಕಡಾ ೧೪ರ ಫ್ಲ್ಯಾಟ್‌ರೇಟ್ ದರದಲ್ಲಿ ಸುಲಭವಾಗಿ ಸಾಲ ಸಿಗುತ್ತದೆ. ಇಂದು ಆರ್ಥಿಕ ಉದಾರೀಕರಣದ ಪರಿಣಾಮ ಬ್ಯಾಂಕು ಕರೆಕರೆದು ಸಾಲ ಕೊಡುತ್ತಿವೆಯಲ್ಲವೆ?

ಇತ್ತೀಚೆಗೆ, ಜೊತೆಯಲ್ಲೇ ಪಶ್ಚಿಮ ದೇಶಗಳ ಸಂಸ್ಕೃತಿಯ ಅನುಕರಣೆ, ವೀಕೆಂಡ್ ಮೋಜುಗಳಂಥ ಅವರ ಜೀವನಶೈಲಿಯ ಅಂಧಾನುಕರಣೆ, ಹುಸಿ ಪ್ರತಿಷ್ಠೆಗಳಿಗೆ ಮಾರು ಹೋದ ಸೀನಪ್ಪ – ತನ್ನ ಮನೆಯೊಳಗಿನ ದಾರಿದ್ರ್ಯ-ದುರವಸ್ಥೆಗಳನ್ನೂ ಮರೆತಂತೆ ವರ್ತಿಸುತ್ತಾನೆ. ಮನೆಯಲ್ಲಿ ತಂದೆ-ಮಗನ ನಡುವೆ ಕಂದಕ ಬೀಳುತ್ತದೆ. ಮಗ ಶ್ರೀಕಾಂತ ಮನೆಯಲ್ಲಿ ನಿತ್ಯ ನಡೆಯುತ್ತಿದ್ದ ತಂದೆ-ತಾಯಿಯರ ಜಗಳದಿಂದ ತಲ್ಲಣಿಸಿ, ಹಲ್ಲುಕಚ್ಚಿಕೊಂಡು ಸಹಿಸುತ್ತ ಮೂಕವೇದನೆಯಲ್ಲಿಯೇ ತನ್ನ ಭವಿಷ್ಯಕ್ಕಾಗಿ ತಡಕಾಡುತ್ತಾನೆ. ದೇಶದ ವಿದ್ಯಮಾನಗಳನ್ನು ಸೂಚಿಸುವಂತೆ – ಹೊರಗಡೆ ಲಾಠಿ ತಿರುವುತ್ತಿದ್ದ ಆರ್.ಎಸ್.ಎಸ್. ಹುಡುಗರನ್ನು ಕಿಟಕಿಯಿಂದಲೇ ನಿರುಕಿಸುತ್ತಾನೆ. ಮನೆಯೊಳಗೆ ಈ ದುರವಸ್ಥೆ, ಹೊರಗೆ ಹೋದರೆ ದೇಶ ಅಳವಡಿಸಿಕೊಳ್ಳುತ್ತಿರುವ ಖಾಸಗೀಕರಣ ನೀತಿಯಿಂದಾಗಿ ಯಾವ ಉದ್ಯೋಗದ ಭರವಸೆಯಿಲ್ಲದೆ ಅತಂತ್ರ ಸ್ಥಿತಿಗಳ ನಡುವೆ ತನ್ನ ಭವಿಷ್ಯ ರೂಪಿಸಿಕೊಳ್ಳುವ ಬಗೆಗೆ ಕಂಗಾಲಾಗುತ್ತಾನೆ.

ಅವೇ ದಿನಗಳಲ್ಲಿ, ಒಂದು ದಿನ ಗೋದ್ರಾ ಘಟನೆ ನೆನಪಿಸುವಂತೆ, ಅದರ ಪ್ರತಿಭಟನಾರ್ಥವಾಗಿ ವಿದ್ಯಾರ್ಥಿಗಳು ಕೇಸರಿ ಧ್ವಜ ಹಿಡಿದು ಮೌನ ಮೆರವಣಿಗೆ ಹೊರಡುತ್ತಾರೆ. ಅದರ ನಾಯಕ ಶ್ರೀಕಾಂತನೇ ಆಗಿರುತ್ತಾನೆ. ಇನ್ನೂ ಅಚ್ಚರಿಯೆಂದರೆ, ಧರ್ಮದ ಬಗೆಗೆ ಭಾಷಣ ಬಿಗಿಯುವ, ಅಂಥ ಸಂಘಟನೆಗೆ ಚಾಲನೆ ಕೊಡುತ್ತಿರುವವನು, ಹಿಂದೆ ಸೀನಪ್ಪನ ಆಟೋ ಕಿತ್ತುಕೊಂಡು ಹೋಗಿದ್ದ ದಾದಾನೇ ಇರುತ್ತಾನೆ. ''ನನ್ನ ಮಗನೇ ಅದರ ಮುಂದಾಳು, ಬಾ ನೊಡೋಣ'' ಎಂದು ಸೀನಪ್ಪ ತನ್ನ ಖಾಸಾ ದೋಸ್ತು ಅಬ್ದುಲ್ಲಾನನ್ನು ಆ ಶಾಂತಿ ಯಾತ್ರೆಯನ್ನು ನೋಡಲು ಕರೆದೊಯ್ಯುತ್ತಾನೆ. ಪ್ರತಿಯಾಗಿ, ಹಸಿರು ಧ್ವಜ ಹಿಡಿದ ಮುಸ್ಲಿಂ ಹುಡುಗರೂ ಪ್ರತಿಭಟನೆ ಹೊರಟು ಪರಸ್ಪರ ಎದುರಾಗುತ್ತಾರೆ. ನೋಡನೋಡುತ್ತಿದ್ದಂತೆ ಗಲಭೆ ಶುರು ಆಗಿ, ನೋಡಲು ಹೋಗಿದ್ದ ಅಬ್ದುಲ್ಲಾನಂಥ ಅಮಾಯಕ ಹಲ್ಲೆಗೆ ಈಡಾಗುತ್ತಾನೆ. ಹಾಗೆಯೇ ಶ್ರೀಕಾಂತನ ಹತ್ಯೆಯೂ ಆಗುತ್ತದೆ. ಮುಗ್ಧನಂತೆ ಸೀನಪ್ಪ ಕಕ್ಕಾಬಿಕ್ಕಿಯಾಗಿ ನಿಲ್ಲುತ್ತಾನೆ. ದೇಶ ಈಗ ಎದುರಿಸುತ್ತಿರುವ ಹೊಸ ಸವಾಲುಗಳಿಗೆ ಮುಖ ಕೊಟ್ಟ ಆತನಂಥವರಿಗೆ ಅರ್ಥವಾಗುವುದೇ ಇಲ್ಲ. ಇದಕ್ಕೆ ಏನು ಕಾರಣ? ಯಾರು ಕಾರಣ? ಯಾಕೆ ಹೀಗೆ? ನಮ್ಮ ಮನ-ಮನೆಗಳ ಒಳ-ಹೊರಗೆ ಏನಾಗುತ್ತಿದೆಯೆಂಬ ಬಗ್ಗೆ ಲವಲೇಶವೂ ಗೊತ್ತಾಗದೆ ಮೂಕ ಪಶುವಿನಂತೆ ರೋದಿಸುವುದರಲ್ಲಿಯೇ ಚಿತ್ರ ಮುಕ್ತಾಯ ಕಾಣುತ್ತದೆ.

ಚಿತ್ರದ ಲೊಕೇಶನ್‌ಗಳಿಗಾಗಿ ಪೂರ್ತಿ ಗುಲ್ಬರ್ಗ ನಗರವನ್ನೇ ಆರಿಸಿಕೊಂಡಿದ್ದು ಚಿತ್ರದ ಕ್ಯಾನ್‌ವಾಸಿನಂತೆ ಆ ಪರಿಸರ ಪೂರಕವಾಗಿದೆ, ಅರ್ಥಪೂರ್ಣವಾಗಿದೆ. ನಾಕು ದಿನಗಳಿಂದ ನಾಪತ್ತೆಯಾಗಿದ್ದ ರಾಣಿಯನ್ನು, ಸೀನಪ್ಪ - ಅಬ್ದುಲ್ಲ ಹುಡುಕಿಕೊಂಡು ಹೋದಾಗ, ಗೋರಿಯೊಂದರ ಮೇಲೆ ಕೂತಿದ್ದ ಹುಚ್ಚನೊಬ್ಬ ''ಯಾವ ರಾಣಿ ಬೇಕು ನಿನಗೆ? ಇಲ್ಲಿ ಮಲಗಿದವರೆಲ್ಲ ರಾಣಿಯರೇ'' ಎಂದು ಸಾಲುಗೋರಿಗಳ ಕಡೆಗೆ ತೋರಿಸಿದಾಗ ದಿಗ್ಭ್ರಮೆಯಾಗುತ್ತದೆ. ಮಾತನ್ನು ಮೀರಿದ ಅರ್ಥ ಹಣಿಕಿಕ್ಕುತ್ತದೆ. ಸೀನಪ್ಪನಾಗಿ ರಂಗಾಯಣದ ರಘು, ಶ್ರೀಕಾಂತನಾಗಿ ಕಿರಣ ಬಾರ್ಕೂರರು, ರಾಣಿಯಾಗಿ 'ಮೂಡಲಮನೆ'ಯ ಅರುಂಧತಿ ಜಕ್ತರ್ ತಂತಮ್ಮ ಪಾತ್ರಗಳಿಗೆ ಜೀವ ತುಂಬಿದ್ದಾರೆ.

ನಿರ್ದೇಶಕ ಸುರೇಶ ಕೋಮುಗಲಭೆಯಂತಹ ಸೂಕ್ಷ್ಮ ವಸ್ತುವನ್ನು ಇದ್ದುದರಲ್ಲಿಯೇ ತರ್ಕಬದ್ಧವಾಗಿ, ತೂಕಬದ್ಧವಾಗಿ ನಿರ್ವಹಿಸಿದ್ದಾರೆ. ಎಸ್.ರಾಮಚಂದ್ರ ಅವರ

ಕ್ಯಾಮರಾವೂ ಸರಿಯಾಗಿ ಸೆರೆಹಿಡಿದಿದೆ. ಸಂಗೀತ ಒದಗಿಸಿದ ಹಂಸಲೇಖರು ಅಲ್ಲಮ ಪ್ರಭು ವಚನಗಳನ್ನು ಬಳಸಿದ್ದು ಸೂಕ್ತವಾದರೂ, ಕೆಲವು ಕಡೆ ಅದೂ ಅತಿರೇಕವಾಗಿ ಕಾಡಿದೆ. ಅವೆಲ್ಲವನ್ನು ಮರೆತೂ, ಇದರ ಹಿಂದಿರುವ ಸಾಮಾಜಿಕ ಕಾಳಜಿಯನ್ನು ಮೆಚ್ಚಿದಂತೆ, ಪ್ರಸಕ್ತ ಸನ್ನಿವೇಶದಲ್ಲಿ ನಮ್ಮ ಜನಕ್ಕೆ ಖಂಡಿತ ತೋರಿಸಬೇಕಾದ ಚಿತ್ರ ಇದು.

ಪಿ. ಆರ್. ರಾಮದಾಸ್ ನಾಯ್ಡು ನಿರ್ದೇಶನದ '**ಪ್ರವಾಹ**' ಕೂಡ, ಇಂದು ದೇಶ ಎದುರಿಸುತ್ತಿರುವ ಸಮಸ್ಯೆಯ ಎಳೆಯೊಂದನ್ನು ಹಿಡಿದುಹೊರಟಿದೆ. ಸ್ವದೇಶೀ ಕುಶಲ ಕಲೆಯಾದ ಕುಂಬಾರಿಕೆ ನೆಲಕಚ್ಚುತ್ತಿರುವುದರ ಹಿನ್ನೆಲೆಯಲ್ಲಿ ಕುಂಬಾರ ಮಾರಪ್ಪನಂಥವರ ವೃತ್ತಿ ತನ್ನ ಅಸ್ತಿತ್ವ ಕಳೆದುಕೊಂಡಂತೆ, ಅದನ್ನೆ ನೆಚ್ಚಿದ್ದವರ ಸಂಸಾರವೂ ಪುಡಿಪುಡಿಯಾಗುತ್ತಿರುವುದನ್ನು ಸಮರ್ಥನೀಯವಾಗಿ ಚಿತ್ರಿಸಲಾಗಿದೆ. ಅದರ ಜೊತೆಗೆ ನಿರರ್ಥಕವಾಗುತ್ತಿರುವ ಶಿಕ್ಷಣ, ಹೆಚ್ಚುತ್ತಿರುವ ನಗರೀಕರಣ, ಅವಕ್ಕೆ ಪೂರಕವಾಗಿ ಕಾರಣವಾಗುವ ಸಂಗತಿಗಳನ್ನು ಪರಿಣಾಮಕಾರಿಯಾಗಿ ದಾಖಲಿಸುತ್ತ ಹೋಗುತ್ತಾರೆ.

ಮಣ್ಣಿನ ಪಾತ್ರೆಗಳ ಬಳಕೆ ಔಟ್‌ಡೇಟೆಡ್ ಆಗುತ್ತಿದ್ದಂತೆ ಪ್ಲಾಸ್ಟಿಕ್ ಅದರ ಸ್ಥಾನವನ್ನು ಆಕ್ರಮಿಸುತ್ತಿದೆ. ದೇಶೀ ಮತ್ತು ಯಾಂತ್ರಿಕತೆಗಳ ಮುಖಾಮುಖಿಯಾದಂತೆ – ಇಲ್ಲಿ ಸ್ಥಳೀಯ ಮಾರಪ್ಪ ಮೈಬಗ್ಗಿಸಿ ದುಡಿದು ತಯಾರಿಸಿದ ತನ್ನ ಮಣ್ಣಿನ ಮಡಕೆಗಳನ್ನು ಹೊತ್ತುಕೊಳ್ಳುವವರನ್ನು ಹುಡುಕಿಕೊಂಡು ಅಂಗಲಾಚುತ್ತ ಹೊರಟರೆ, ಎದುರಿಗೆ ಸೈಕಲ್ ಮೇಲೆ ಬಣವೆಯಂತೆ ಬಿಗಿದ ಪ್ಲಾಸ್ಟಿಕ್ ಬಿಂದಿಗೆಗಳು ತನ್ನ ಹಳ್ಳಿಯೊಳಕ್ಕೆ ನುಗ್ಗುತ್ತ ತನ್ನನ್ನು ತಳ್ಳಿಕೊಂಡೇ ಒಳಬರುತ್ತವೆ. ಇದು, ಇವತ್ತು ನಮ್ಮ ದೇಶದ ಪಾರಂಪರಿಕ ಗುಡಿ ಕೈಗಾರಿಕೆಗಳು ನಶಿಸುತ್ತಿರುವುದರ ಸಂಕೇತ.

ಮತ್ತದೇ ಜಾಗತೀಕರಣದಿಂದಾಗಿ, ದೇಶೀತನ ಎದುರಿಸುತ್ತಿರುವ ಹೊಸ ಸಮಸ್ಯೆಗಳು, ಪ್ರತಿಯಾಗಿ ಸಲೀಸಾಗಿ ಒದಗುತ್ತಿರುವ ವಿದೇಶಿ ಸರಕುಗಳು ಒಂದು ಕಡೆಗಾದರೆ; ಮತ್ತೊಂದು ಕಡೆ ಗ್ರಾಮ ತೊರೆದು ಉದ್ಯೋಗ ಹುಡುಕಿಕೊಂಡು ನಗರಕ್ಕೆ ಬರುವ ಹಳ್ಳಿಯ ಹುಡುಗರು – ಇವತ್ತಿನ ಚಿತ್ರಣವಾಗಿದೆ. ಮಾರಪ್ಪ ತನ್ನ ಕುಲಕಸುಬು ಕುಂಬಾರಿಕೆಯಲ್ಲಿ ಏಗದೆ, ಏದುಸಿರು ಬಿಡುತ್ತ ಹುಟ್ಟೂರಲ್ಲಿ ಜೀವ ಬಿಟ್ಟರೆ, ಆತನ ಮಗ ಸಿದ್ರಾಮ ಹೊಸ ಪ್ರವಾಹಕ್ಕೆ ಸಿಕ್ಕಿದವನಂತೆ ನಗರಕ್ಕೆ ಬಂದು ಬೀಳುತ್ತಾನೆ.

ಕ್ಲಬ್ಬಿನ ಮಾಲೀಕ, ಹಳ್ಳಿಯ ಗಮಾರ ಸಿದ್ರಾಮನನ್ನು ಮೊದಲ ಬಾರಿಗೆ ನಖಶಿಖಾಂತ ನೋಡಿ ''ಒಂದು ಕಾಲಕ್ಕೆ ನಾನೂ ನಿನ್ನ ಹಾಗೇ ಇದ್ದೆ. ನಿನ್ನ ಹಾಗೇ ಓಡಿ ಬಂದೋನು'' ಎಂದು ಹೇಳಿಕೊಳ್ಳುವುದಾಗಲಿ, ಪ್ಲಾಸ್ಟಿಕ್ ದಾಳಿಯಿಡುವುದಾಗಲಿ, ನಮ್ಮ ಜನ ಸತ್ತವರಿಗಾಗಿ ಶಾಸ್ತ್ರಕ್ಕೆ ಮಣ್ಣಿನ ಮಡಕೆಗಳನ್ನೇ ಹುಡುಕಿಕೊಂಡು ಬರುವುದಾಗಲಿ ಒಂದು ತೆರನಾದ ಅಣಕವೇ ಅಲ್ಲವೆ? ಹೊರಗೆ ಏನೆಲ್ಲ ಆಧುನಿಕವಾಗಿ ತೋರಿದರೂ ಒಳಗೆ ಸಾಂಪ್ರದಾಯಿಕ ಮನಸ್ಸು. ಸುಶಿಕ್ಷಿತರಾದರೂ ಅವರ ಒಳಗಿನ ಎಡಬಿಡಂಗಿತನವನ್ನು ತೋರುತ್ತದೆ. ಅದೇ ರೀತಿ, ಹಳ್ಳಿಗಳಲ್ಲಿ ಕುಂಬಾರಿಕೆ ಅಳಿದರೂ, ನಗರ ಪ್ರದೇಶದಲ್ಲಿ 'ಪಾಟರಿ ಕಲೆ'ಯಾಗಿ ಅದು ಹೊಸ ರೂಪು ಪಡೆಯುವುದರ ಮೂಲಕ, ಸೇಠನೊಬ್ಬನ ವಶದಲ್ಲಿ ಅದೂ ಒಂದು ಮಾರಾಟದ ಸರಕಾಗಿ ಉಳಿಯುತ್ತದೆ. ಬಂಡವಾಳಶಾಹಿಗಳು, ಪರಿಸ್ಥಿತಿಯ ಲಾಭ ಪಡೆದಂತೆ ಹೇಗೆ ಅದನ್ನು ಲಾಭದಾಯಕ ಉದ್ದಿಮೆಯಾಗಿ ಪರಿವರ್ತಿಸಬಲ್ಲರೆನ್ನುವುದು ಇಂದಿನ ದಿನಗಳಲ್ಲಿ ಜಾಗತೀಕರಣದ ಪ್ರಭಾವದಿಂದ ಮೆಲ್ಲಮೆಲ್ಲನೇ ಖಾಸಗೀಕರಣ ಹೇಗೆ ತನ್ನ ಕಳ್ಳ ಹೆಜ್ಜೆಗಳನ್ನಿಕ್ಕಿ ದೇಶಿ ಕಲೆ – ಸಂಸ್ಕೃತಿಗಳನ್ನು ವಿರೂಪಗೊಳಿಸುತ್ತಲೇ, ಆರ್ಥಿಕ-ಸಾಮಾಜಿಕ ವಲಯಗಳನ್ನೂ ಹಾಳುಗೆಡವುತ್ತದೆ ಎನ್ನುವುದರ ಸೂಚನೆಯಿದು.

ಮಾರಪ್ಪನಾಗಿ 'ಮೂಡಲಮನೆ'ಯ ಅಚ್ಯುತಕುಮಾರ್, ಸಿದ್ರಾಮನಾಗಿ ಮಾಸ್ಟರ್ ರೋಹಿತ್ ಭಟ್ಟ ಚಿತ್ರದುದ್ದಕ್ಕೂ ಗಮನ ಸೆಳೆಯುತ್ತಾರೆ. ಎಲ್. ವೈದ್ಯನಾಥನ್ ಸಂಗೀತ ಹಾಗೂ ಎಸ್. ರಾಮಚಂದ್ರರ ಛಾಯಾಗ್ರಹಣ ಯಥಾರ್ಥವಾಗಿವೆ. 'ಪ್ರವಾಹ' ಇಡಿಯಾಗಿ ಭಾರತದಂಥ ಅಭಿವೃದ್ಧಿಶೀಲ ರಾಷ್ಟ್ರಗಳು ಎದುರಿಸುತ್ತಿರುವ ಜಾಗತೀಕರಣದ ಪ್ರವಾಹವನ್ನು ಧ್ವನಿಸುವ ಒಂದು ಪೂರ್ವಸೂಚನೆಯ ಚಿತ್ರವಾಗಿದೆ.

ಜಾಗತೀಕರಣದ ಕಬಂಧ ಬಾಹುಗಳು ನಿಧಾನವಾಗಿ ದೇಶವನ್ನು ತೆಕ್ಕೆಗೆ ತೆಗೆದುಕೊಳ್ಳುತ್ತಿರುವ ಈ ಸನ್ನಿವೇಶದಲ್ಲಿ ನಮ್ಮ ಸಾಹಿತ್ಯ-ಕಲೆಗಳು ಸರಿಯಾಗಿ ಸ್ಪಂದಿಸುತ್ತಿಲ್ಲವೆಂಬ ದೂರಿಗೆ ಉತ್ತರವಾಗಿ ಈ ಎರಡೂ ಹೊಸ ಅಲೆಯ ಚಿತ್ರಗಳತ್ತ ಬೆರಳು ತೋರಬಹುದು. ವಿಚಿತ್ರವೆಂದರೆ ಇಂಥ ಕಡಿಮೆ ಬಜೆಟ್ಟಿನ ಚಿತ್ರಗಳಿಗೆ ಪ್ರದರ್ಶಕರು ಮುಂದೆ ಬಾರದೆ, ಚಿತ್ರಮಂದಿರಗಳು ಸಿಕ್ಕದೆ ಹೋಗುವುದೂ ಒಂದು ವಿಪರ್ಯಾಸವೇ.

ನಮ್ಮ ಜನರನ್ನು ಸುಶಿಕ್ಷಿತರನ್ನಾಗಿಸುವಂತೆ ಪ್ರಚಲಿತ ವಿದ್ಯಮಾನಗಳತ್ತ ಗಮನ ಸೆಳೆಯುವ ಮೂಲಕ ಸದಭಿರುಚಿ ಬೆಳೆಸುವ ಇಂಥ ಚಿತ್ರಗಳು ನಾಡಿನಾದ್ಯಂತ ಪ್ರದರ್ಶನಗೊಳ್ಳಬೇಕು. ಅದನ್ನು ಮಾಡಲು ಮುಂದೆ ಬರುವವರಾರು ? ಅದರ ಹೊಣೆ ಹೊರುವವರಾರು ? ಈ ಪ್ರಶ್ನೆಗಳು ಪ್ರಶ್ನೆಗಳಾಗಿಯೇ ಉಳಿಯುತ್ತವೆ.

**ಈರಪ್ಪ ಎಂ. ಕಂಬಳಿ**
ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ
ಕಾವೇರಿ ಭವನ 'ಎಫ್' ಬ್ಲಾಕ್, ಬೆಂಗಳೂರು - ೫೬೦ ೦೦೯

---

೨೪ನೇ ಪುಟದಿಂದ ದಹನ

ಹಾಕ್ಕೊಂಡೇ ಇದ್ದ. ಡಿ.ಸಿ. ಅವ್ನಿಗೆ ಸನ್ಮಾನ ಮಾಡುವಾಗ,

''ರಾಮ ಹರೇ ರಾಮ
ಜಯ ರಾಮ ಹರೇ ರಾಮ
ಜಯ ಜಯಾ ರಾಮ ರಾಮ
ತದಿಮಿ ತಕದಿಮಿ ತದಿಮಿ ತಕದಿಮಿ''

ಅಂತ ಹೇಳಿ ಕುಣ್ದು ಸ್ಟೇಜಿನಲ್ಲಿದ್ದವ್ರ ಎಲ್ರ ಕಾಲಿಗೆ ಬಿದ್ದ.

ಫಂಕ್ಷನ್ನೆಲ್ಲ ಮುಗ್ದು ಪ್ರಸಂಗ ಸುರುವಾಯ್ತು. ರಾಮನ ಆಜ್ಞೆಯಂತೆ ಹನ್ಮಂತ ಲಂಕೆಗೆ ಬಂದ. ಸೀತೆಯನ್ನು ಹುಡುಕಿದ. ಅಶೋಕವನವನ್ನು ಪುಡಿ ಮಾಡಿದ. ರಾವಣನ ಕಡೆಯವ್ರು ಹನ್ಮಂತನನ್ನು ಹಿಡ್ದ್ರು. ರಾವಣನ ಪಾರ್ಟು ಮಾಡಿದವ ವಸಂತಣ್ಣನ ಅಳಿಯ ಕರುಣಾಕರ. ಅವ್ನಿಗೆ ಮೊದಲಿಂದ್ಲೂ ಗೋಪಾಲನನ್ನು ಕಂಡ್ರೆ ಆಗ್ತಿರ್ಲಿಲ್ಲ. ಎಂತಕ್ಕೇಂದ್ರೆ ಅವ್ನಿಗೆ ಗೋಪಾಲನ ಹಾಗೆ ಕುಣೀಲಿಕ್ಕೆ ಬರ್ತಿರ್ಲಿಲ್ಲ. ಮಳೆಗಾಲದಲ್ಲಿ ಹೆಕ್‌ಮೇಳದ ಆಟಗಳಲ್ಲಿ ಅವ್ರಿಬ್ರು ಎದ್ರುಬದ್ರು ವೇಷ ಹಾಕಿದ್ರೆ ಜನ್ರ ಚಪ್ಪಾಳೆ ಬೀಳ್ತಿದದ್ದು ಗೋಪಾಲನಿಗೇ ಜಾಸ್ತಿ. ಮಾತ್ರ ಅಲ್ಲ ಗೋಪಾಲನ ಹಾಗೆ ಚೆಂದ ಮಾಡಿ ಅರ್ಥ ಹೇಳ್ಳಿಕ್ಕೂ ಬರ್ತಿರ್ಲಿಲ್ಲ. ಹಾಳೂರಿಗೆ ಉಳಿದವ ಗೌಡ ಎನ್ನುವ ಹಾಗೆ ಕುಚ್ಚೂರು ಮೇಳದಲ್ಲಿ ಕರುಣಾಕರ ಮೆರೀತಿದ್ದ. ಈಗ ಗೋಪಾಲ ಬಂದದ್ದು ಅವ್ನಿಗೆ ಸಹಿಸ್ಕೊಳ್ಳಿಕ್ಕೆ ಆಗ್ಲಿಲ್ಲ. ತನಿಗೆ ರೈಸ್ಲಿಕ್ಕೆ ಆಗುದಿಲ್ಲ. ಅದ್ರಲ್ಲೂ ಒಬ್ಬ ಮರಕಾಲನ ಎದ್ರು... ಅಂತ ಅವ್ನಿಗೆ ಮಂಡೆ ಬಿಸಿ ಆಗಿತ್ತು. ಸಿಕ್ಕಿದ್ದೇ ಚಾನ್ಸ್ ಅಂತ, ''ಮಂಗನ ಜಾತಿಯವ್ನೇ! ನೀನು ಎಲ್ಲಿ ಹೋದ್ರೂ ನಿನ್ನ ಜಾತಿಬುದ್ಧಿ ಬಿಡೂದಿಲ್ಲ'' ಅಂತ ಬೈದ. ಗೋಪಾಲನಿಗೆ ಅರ್ಥ ಆಯ್ತು. ''ಒಡೆಯ ರಾಮನ ಆಜ್ಞೆ ಮೀರಿ ಯಾರೂ ಇಲ್ಲ. ಅದನ್ನು ನೀನೂ ಮೀರಲಾರೆ. ಅವನ ಆಜ್ಞೆ ಇರುತ್ತಿದ್ದರೆ ಇಂದೇ ನಿನ್ನನ್ನು ಸೋಲಿಸಿ ಸೀತಾಮಾತೆಯನ್ನು ನಾನೆ ಒಯ್ಯುತ್ತಿದ್ದೆ'' ಅಂತ ಉತ್ತರ ಕೊಟ್ಟ. ರಾವಣನ ಪಿಸ್ತು ನೆತ್ತಿಗೇರಿತು. ''ಏನು ನೋಡುತ್ತಿದ್ದೀರಿ!? ಹಚ್ಚಿ ಈ ಕಪಿಯ ಬಾಲಕ್ಕೆ ಬೆಂಕಿ!'' ಅಂತ ಆಜ್ಞೆ ಕೊಟ್ಟ. ಮೊದ್ಲೇ ಮಾಡಿದ ಪ್ಲಾನಿನಂತೆ ಸೈನಿಕನ ಪಾರ್ಟು ಮಾಡಿದವ ಹನ್ಮಂತನ ಬಾಲಕ್ಕೆ ಮಾತ್ರ ಅಲ್ಲ ಮೈಗೂ ಬೆಂಕಿ ಹಚ್ಚಿದ. ಗೋಪಾಲನ ಹನ್ಮಂತ ವೇಷದ ಹಸಿರು ಅಂಗಿ ಪ್ಯಾಂಟು ಎಲ್ಲ ಭಗ್ಗಂತ ಹತ್ತಿಕೊಂಡಿತು. ಕಣ್ಣುಮುಚ್ಚಿಕೊಂಡು

''ರಾಮ ಹರೇ ಜಯ ರಾಮ ಹರೇ
ರಘುರಾಮ ಹರೇ ಜಯರಾಮ ಹರೇ''

ಅಂತ ಹೇಳ್ತಿದ್ದ ಗೋಪಾಲನಿಗೆ ಇದು ಗೊತ್ತಾಗ್ಲೇ ಇಲ್ಲ. ಜನ ಎಲ್ಲ ಇದೂ ಒಂದು ಶ್ಟಂಟ್ ಅಂತ ತಿಳ್ದು ಚಪ್ಪಾಳೆ, ವಿಷಿಲ್ ಎಲ್ಲ ಹೊಡ್ದ್ರು. ಚೌಕಿಗೆ ಬಂದ ಗೋಪಾಲ ಬಿದ್ದ. ಮತ್ತೆ ಏಳ್ಳೇ ಇಲ್ಲ.

* * *

ಹತ್ತನೆಯ ದಿವ್ಸ ಕುಚ್ಚೂರು ದೇವಸ್ಥಾನದಲ್ಲಿ ನಡ್ದ ಶ್ರದ್ಧಾಂಜಲಿ ಸಭೆಯಲ್ಲಿ ಉಡುಪ್ರು, ''ನಾನು ಆವತ್ತೇ ಹೇಳಿದ್ದೆ ಗೋಪಾಲನಿಗೆ... ದೇವಸ್ಥಾನ ಅಂದ್ರೆ ಒಂದು ಕಟ್ಟುಕಟ್ಲೆ ಉಂಟು. ಅದನ್ನು ಕೆಣಕ್ಬೇಡ ಅಂತ... ಈಗ ನೋಡಿ ಆಗಬಾರದ್ದು ಆಗಿಹೋಯ್ತು. ಸಮಾಜದಲ್ಲಿ ಪ್ರಾಕಿನಿಂದ್ಲೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರಾಂತ ಮಾಡಿದ್ದಾರೆ. ಅದನ್ನು ಸ್ವಲ್ಪ ಅಲ್ಲಾಡಿಸಿದ್ರೂ ಇಂಥ ಅನರ್ಥ ಆಗ್ತದೆ... ಗೋಪಾಲನ ಅಗಲಿಕೆ ನಮ್ಮ ಊರಿಗೆ, ಯಕ್ಷಗಾನ ಕ್ಷೇತ್ರಕ್ಕೆ ತುಂಬಲಾರದ ನಷ್ಟ...'' ಅಂತ ಮಾತಾಡ್ತಿದ್ರು. ಮರಕಾಲ್ರೆಲ್ಲ ಕೇಳ್ತಾ ಇದ್ರು.

**ಪಿ. ಬಿ. ಪ್ರಸನ್ನ**
ವಿಧಾತ್ರಿ, ನಂ. ೪, ೧೦ನೇ ಮುಖ್ಯರಸ್ತೆ
ಜೆ. ಪಿ. ನಗರ, 'ಡಿ' ಬ್ಲಾಕ್, ಮೈಸೂರು - ೫೭೦ ೦೦೮




# ಒಂದನೇ ತರಗತಿಯಿಂದಲೇ ಉರುಳು ?

ಶಿವಸುಂದರ್

**ಕ**ರ್ನಾಟಕದ ಸರ್ಕಾರಿ ಶಾಲೆಗಳಲ್ಲಿ ಒಂದನೇ ತರಗತಿಯಿಂದಲೇ ಕನ್ನಡ ಕಲಿಸಬೇಕೆಂಬ ಸರ್ಕಾರದ ನಿರ್ಣಯ ಶೈಕ್ಷಣಿಕ ಹಾಗೂ ಬೌದ್ಧಿಕ ವಲಯಗಳಲ್ಲಿ ಚರ್ಚೆಗೆ ಗ್ರಾಸವಾಗಿದೆ. ಇತರ ವಿಷಯಗಳಲ್ಲಿ ಸುಲಭವಾದ ಪರ-ವಿರುದ್ಧ ನಿಲುವುಗಳನ್ನು ತಳೆಯುವಂತೆ ಈ ವಿಷಯದಲ್ಲಿ ತಳೆಯುವುದು ಕಷ್ಟಕರವಾದ್ದರಿಂದ ವಿಷಯದ ಸುತ್ತ ಗಂಭೀರ ಚರ್ಚೆಗಳು ನಡೆಯುತ್ತಿರುವುದು ಸ್ವಾಗತಾರ್ಹ ವಿಷಯವೇ. ಒಂದನೇ ತರಗತಿಯಿಂದ ಯಾವ ಕಾರಣಕ್ಕೂ ಇಂಗ್ಲಿಷ್ ಕಲಿಸಿಬಾರದೆಂಬ ವಾದ ಇದ್ದರೂ ಅಂಥವರ ಧ್ವನಿ ಕ್ಷೀಣವಾಗಿದೆ. ಕರ್ನಾಟಕದ ಸರ್ಕಾರಿ ಶಾಲಾ ಮಕ್ಕಳಿಗೆ ಇಂಗ್ಲಿಷನ್ನು ಕಲಿಸಲೇಬೇಕು ಎನ್ನುವ ವಿಷಯ ವಿವಾದಾಸ್ಪದವಾದುದೇನೂ ಅಲ್ಲ. ಈಗಾಗಲೇ ಸರ್ಕಾರಿ ಶಾಲೆಗಳಲ್ಲಿ ಮಾಧ್ಯಮಿಕ ಹಂತದಿಂದ ಇಂಗ್ಲಿಷ್ ಕಲಿಸಲಾಗುತ್ತಿದೆ. ಚರ್ಚೆ ಇರುವುದು ಅದನ್ನು ಪ್ರಾಥಮಿಕ ಹಂತದಲ್ಲಿ ಅದರಲ್ಲೂ ಒಂದನೇ ತರಗತಿಯಿಂದಲೇ ಕಲಿಸಬೇಕೆ ಎನ್ನುವ ಪ್ರಶ್ನೆಯ ಸುತ್ತ. ಪ್ರಶ್ನೆಯ ಸ್ವರೂಪ ಅಷ್ಟೇ ಆಗಿದ್ದರೆ ಶೈಕ್ಷಣಿಕ ಹಾಗೂ ಮಕ್ಕಳ ಮನಃಶಾಸ್ತ್ರ ತಜ್ಞರ ತಂಡ ಅದಕ್ಕೆ ಪರಿಹಾರ ನೀಡಬಹುದಿತ್ತು. ಇಂಗ್ಲಿಷನ್ನು ಒಂದನೇ ತರಗತಿಯಿಂದಲೇ ಕಡ್ಡಾಯವಾಗಿ ಕಲಿಸಬೇಕೆನ್ನುವ ಆಗ್ರಹದ ಹಿಂದೆ ನಗರ-ಗ್ರಾಮೀಣ, ಮೇಲ್ವರ್ಗ-ಕೆಳವರ್ಗ ಇತ್ಯಾದಿ ತಾರತಮ್ಯಗಳು ಶಿಕ್ಷಣದಲ್ಲೂ ಪ್ರತಿಫಲಿಸಿ ಸೃಷ್ಟಿಸಿರುವ ಅಸಮಾನತೆಯನ್ನು ನೀಗಿಸಬೇಕೆಂಬ ಸಾಮಾಜಿಕ ನ್ಯಾಯದ ಕಳಕಳಿಯಿದೆ. ಇಂಗ್ಲಿಷನ್ನು ಉಳ್ಳವರು-ನಗರದವರು ಕಲಿವ ವ್ಯವಸ್ಥೆ ಕಲ್ಪಿಸುವ ಉತ್ತಮ ಬದುಕಿನ ಅವಕಾಶಗಳನ್ನೆಲ್ಲಾ ಲಪಟಾಯಿಸುತ್ತಿದ್ದಾರೆ. ಸರ್ಕಾರಿ ಶಾಲೆಗಳಲ್ಲಿ ಉಚಿತವಾಗಿ ಒಂದನೇ ತರಗತಿಯಿಂದಲೇ ಇಂಗ್ಲಿಷ್ ಜ್ಞಾನ ನೀಡಿದರೆ ನಮ್ಮ ಗ್ರಾಮೀಣ ಹಾಗೂ ಬಡ ವಿದ್ಯಾರ್ಥಿಗಳಿಗೂ ಸಮಾನ ಅವಕಾಶ ಲಭಿಸುತ್ತದೆ ಎಂಬುದು ಈ ಆಗ್ರಹದ ಹಿಂದಿರುವ ಆಶಯ. ಸಂಪತ್ತಿನ, ಅವಕಾಶಗಳ ಸಮಾನ ವಿತರಣೆಯೆಂಬ ಪ್ರಜಾತಾಂತ್ರಿಕ ಮೌಲ್ಯಗಳಲ್ಲಿ ನಂಬಿಕೆ ಇಟ್ಟುಕೊಂಡಿರುವ ಯಾರಿಗೂ ಈ ಆಶಯಗಳ ಬಗ್ಗೆ ಭಿನ್ನಾಭಿಪ್ರಾಯ ಇರಲು ಸಾಧ್ಯವಿಲ್ಲ. ಆದರೆ ಸಮಸ್ಯೆ ಇರುವುದು ಇಂಗ್ಲಿಷ್ ಜ್ಞಾನ ಸಮಾನ ಅವಕಾಶ ಒದಗಿಸಿಕೊಡುತ್ತದೆ ಎಂಬ ಗ್ರಹಿಕೆಯಲ್ಲಿ, ಹಾಗೂ ಆ ಬಗೆಯ ನಿಲುವುಗಳು ಇಂಗ್ಲಿಷಿನ ಪ್ರತಿಷ್ಠಿತ ಸ್ಥಾನವನ್ನು ಶಾಶ್ವತವಾಗಿ ಉಳಿಸಿಬಿಡುವುದರ ಅಪಾಯಗಳನ್ನು ಗ್ರಹಿಸಲು ನಿರಾಕರಿಸುವುದಿಲ್ಲ.

ಆದ್ದರಿಂದಲೇ ಒಂದನೇ ತರಗತಿಯಿಂದಲೇ ಇಂಗ್ಲಿಷ್ ಕಲಿಸಬೇಕೆಂಬ ಆಗ್ರಹ ಕೇವಲ ಶೈಕ್ಷಣಿಕ ಆಯಾಮವನ್ನು ಮಾತ್ರ ಹೊಂದಿಲ್ಲ. ಆಧುನಿಕತೆಯ ಸೌಲಭ್ಯ ಹಾಗೂ ಅವಕಾಶಗಳನ್ನು ದಲಿತ, ಹಿಂದುಳಿದ ಸಮುದಾಯಗಳಿಗೆ ವಂಚಿಸಿದ ವ್ಯವಸ್ಥೆಯೇ ಇಂದು ಜಾಗತೀಕರಣವು ಒದಗಿಸಿದ ಅವಕಾಶಗಳನ್ನು ನುಂಗಿಹಾಕುತ್ತಿದೆ. ಅದಕ್ಕಾಗಿ ಆ ಕುಲೀನ ಸಮುದಾಯ ಆಧರಿಸುತ್ತಿರುವುದು ತನಗೆ ದಕ್ಕಿದ ಇಂಗ್ಲಿಷ್ ಜ್ಞಾನವನ್ನು. ಆದ್ದರಿಂದ ಇಂಗ್ಲಿಷ್ ಜ್ಞಾನವನ್ನು ಪಡೆದರೆ ಊಳಿಗಮಾನ್ಯ ವ್ಯವಸ್ಥೆಯು ಸೃಷ್ಟಿಸಿದ ಜಾತಿಕೂಪದಿಂದ ಹೊರಬಿದ್ದು ಆಧುನಿಕತೆಯು ನೀಡುವ ವಿಮೋಚನೆಯನ್ನು ಪಡೆಯಬಹುದು ಎಂಬುದು ವಂಚಿತ ಸಮುದಾಯಗಳ ತರ್ಕ. ಎಲ್ಲಾ ಪ್ರಗತಿಪರ ಸಮಾನತಾವಾದಿ ಚಿಂತನೆಗಳು ಈ ಆಶಯಗಳಿಗಾಗಿಯೇ ಶ್ರಮಿಸುತ್ತಿವೆಯಾದ್ದರಿಂದ ಮೇಲಿನ ಆಶಯದ ಬಗ್ಗೆ ಏಕಾಭಿಪ್ರಾಯವಷ್ಟೇ ಇರಲು ಸಾಧ್ಯ. ಆದರೆ ಇಲ್ಲಿಯೂ ಇಂಗ್ಲಿಷ್ ಎಂದರೆ ಆಧುನಿಕತೆಯ ಕೀಲಿಕೈ ಎಂಬ ಹಾಗೂ ಪ್ರಸ್ತುತ ಜಾಗತೀಕರಣದ ವ್ಯವಸ್ಥೆಯೇ ಆಧುನಿಕ ವ್ಯವಸ್ಥೆ ಎಂಬ ತರ್ಕ ಗಂಭೀರ ವಿಶ್ಲೇಷಣೆ ಬಯಸುತ್ತದೆ.

ಆದ್ದರಿಂದ ಒಂದನೇ ತರಗತಿಯಿಂದ ಇಂಗ್ಲಿಷ್ ಕಲಿಸಬೇಕೆಂಬ ನೀತಿ ಶೈಕ್ಷಣಿಕ, ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ ಆಯಾಮಗಳನ್ನು ಹೊಂದಿದೆ. ಒಂದು ಭಾಷಾನೀತಿ ಒಟ್ಟಾರೆ ಶೈಕ್ಷಣಿಕ ನೀತಿಯ ಭಾಗವಾಗಿದ್ದು, ಆ ಶೈಕ್ಷಣಿಕ ನೀತಿಯು ಪ್ರಸ್ತುತ ಆರ್ಥಿಕ-ಸಾಮಾಜಿಕ ಅಗತ್ಯಗಳನ್ನು ಈಡೇರಿಸುವುದೆಂದೇ ರೂಪುಗೊಂಡಿರುತ್ತದೆಯೇ ವಿನಾ ಅದಕ್ಕೆ ಪ್ರತ್ಯೇಕ ಅಸ್ತಿತ್ವವಿರುವುದಿಲ್ಲ. ಜನತೆಯ ಹೋರಾಟಗಳು ಈ ಎಲ್ಲಾ ವಿಷಯಗಳನ್ನು ಪ್ರಭಾವಿಸಿವೆ. ಕೆಲವು ಬಲಿಷ್ಠ ಹೋರಾಟಗಳು ಅದರ ದಿಕ್ಕನ್ನು ಬದಲಾಯಿಸಬಹುದಾದರೂ ಜನತೆಯ ಒತ್ತಡವಿಲ್ಲದೆ ವ್ಯವಸ್ಥೆಯೇ ಮುಂದೆ ನಿಂತು ತರುವ ಬದಲಾವಣೆ ಯಾವ ದಿಕ್ಕಿನಲ್ಲಿ ರೂಪಿತವಾದದ್ದೆಂಬುದನ್ನು ಅರ್ಥಮಾಡಿಕೊಳ್ಳಲು ನಿರಾಕರಿಸುವುದು ಮುಗ್ಧತೆಯಲ್ಲ. ಅದು ರಾಜಕೀಯ ಮೂರ್ಖತನ ಹಾಗೂ ಆತ್ಮವಂಚನೆ.

ಒಂದನೇ ತರಗತಿಯಿಂದಲೇ ಇಂಗ್ಲಿಷ್ ಎಂಬ ಪರಕೀಯ ಭಾಷೆ ಕಲಿಸುವುದು ಶೈಕ್ಷಣಿಕವಾಗಿ ಎಷ್ಟು ಸಾಧುವಾದುದು ? ಆ ರೀತಿ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಗಳ ಶೈಕ್ಷಣಿಕ ಸಾಮರ್ಥ್ಯವೇನು ? ಉದ್ಯೋಗ ಮಾರುಕಟ್ಟೆ ಇತರ ಯಾವುದೇ ಕೌಶಲ್ಯ ಬೇಡದೆ, ಕೇವಲ ಅವರ ಇಂಗ್ಲಿಷ್ ಭಾಷಾ ಜ್ಞಾನವನ್ನು ಮಾತ್ರ ಅಪೇಕ್ಷಿಸುತ್ತಿದೆಯೇ ? ಇನ್ನಿತ್ಯಾದಿ ಅತ್ಯಗತ್ಯವಾದ ವಿಶ್ಲೇಷಣೆಗಳನ್ನು ಇಂಗ್ಲಿಷಿನಿಂದ ಸಮಾನತೆ ದಕ್ಕುತ್ತದೆಂಬ ನಂಬಿಕೆಗಳು ಅಸಂಬದ್ಧಗೊಳಿಸಿಬಿಟ್ಟಿರುವಂತಿದೆ.

ಹೀಗಾಗಿ ಮುಖ್ಯವಾದ ಪ್ರಶ್ನೆ ಇಂಗ್ಲಿಷ್ ಜ್ಞಾನ ಇಡೀ ವಂಚಿತ ಸಮುದಾಯದ ಶೈಕ್ಷಣಿಕ ಹಾಗೂ ಔದ್ಯೋಗಿಕ ಮುನ್ನಡೆಗೆ ಅವಕಾಶ ಮಾಡಿಕೊಡುತ್ತದೆಯೇ ಹಾಗೂ ಜಾಗತೀಕರಣ ಆ ಬಗೆಯ ಆಧುನಿಕ ಅವಕಾಶಗಳನ್ನು ದೇಶಗಳಿಗೆ, ದೇಶದೊಳಗಿನ ವಂಚಿತ ಸಮುದಾಯಗಳಿಗೆ ಸಮಾನ ನೆಲೆಯಲ್ಲಿ ಕಲ್ಪಿಸಿಕೊಡುತ್ತದೆಯೇ ಎಂಬ ಚರ್ಚೆಯನ್ನು ಮಾಡಲು ಮೊದಲಾಗಬೇಕಿದೆ! ಜಾಗತೀಕರಣ ಅರ್ಥಾತ್ ಅಂತರರಾಷ್ಟ್ರೀಯ ಬಂಡವಾಳಶಾಹಿಯ ಲಾಭದ ದರದ ಹೆಚ್ಚಳಕ್ಕಾಗಿ

**ಕರ್ನಾಟಕದ ಸರ್ಕಾರಿ ಶಾಲೆಗಳಲ್ಲಿ ಒಂದನೇ ತರಗತಿಯಿಂದಲೇ ಕನ್ನಡ ಕಲಿಸಬೇಕೆಂಬ ಸರ್ಕಾರದ ನಿರ್ಣಯ ಶೈಕ್ಷಣಿಕ ಹಾಗೂ ಬೌದ್ಧಿಕ ವಲಯಗಳಲ್ಲಿ ಚರ್ಚೆಗೆ ಗ್ರಾಸವಾಗಿದೆ. ಇತರ ವಿಷಯ ಗಳಲ್ಲಿ ಸುಲಭವಾದ ಪರ–ವಿರುದ್ಧ ನಿಲುವುಗಳನ್ನು ತಳೆಯುವಂತೆ ಈ ವಿಷಯದಲ್ಲಿ ತಳೆಯುವುದು ಕಷ್ಟಕರವಾದ್ದರಿಂದ ವಿಷಯದ ಸುತ್ತ ಗಂಭೀರ ಚರ್ಚೆಗಳು ನಡೆಯುತ್ತಿರುವುದು ಸ್ವಾಗತಾರ್ಹ ವಿಷಯವೇ.**

ಹಾಗೂ ಬಡದೇಶಗಳ ಪ್ರಾಕೃತಿಕ ಹಾಗೂ ಸಾಂಸ್ಕೃತಿಕ ಸಂಪನ್ಮೂಲ ಲೂಟಿಗೆಂದೇ ರೂಪಿಸಲಾಗಿರುವ ವ್ಯವಸ್ಥೆ. ಜಾಗತೀಕರಣದ ಮಾರುಕಟ್ಟೆ ಶಕ್ತಿಗಳ ಆಣತಿಗೆ ತಲೆ ಬಾಗಿಯೇ ಭಾರತದ ಪ್ರಭುತ್ವವನ್ನು ಜನತೆಯ ಕಲ್ಯಾಣವನ್ನು ಕಾಪಾಡುವ ಶಿಕ್ಷಣ-ಆರೋಗ್ಯ-ಉದ್ಯೋಗ ಸೃಷ್ಟಿ ಎಂಬ ಕರ್ತವ್ಯಗಳಿಂದಲೂ ಹಿಂದೆ ಸರಿದು ಅದನ್ನು ಮಾರುಕಟ್ಟೆ ಶಕ್ತಿಗಳ-ಬಂಡವಾಳ ಶಾಹಿಗಳ ಕೈಗೊಪ್ಪಿಸಿದೆ. ಈ ಶಕ್ತಿಗಳೇ ಶಿಕ್ಷಣದಲ್ಲೂ, ಎಲ್ಲಾ ಕ್ಷೇತ್ರಗಳಲ್ಲೂ ತಮಗೆ ಅತ್ಯಧಿಕ ಲಾಭ ತರುವ ನೀತಿಗಳನ್ನು ರೂಪಿಸುತ್ತಿವೆ. ಸರ್ಕಾರದ ನೀತಿಗಳು ಈ ಹಿಂದೆ ಸಂವಿಧಾನದ ಆಶಯಗಳಾದ ಅವಕಾಶಗಳಲ್ಲಿ ಸಮಾನತೆ ಕಲ್ಪಿಸುವ, ಸಂಪತ್ತಿನ ಸಮಾನ ವಿತರಣೆ ಮಾಡುವ, ಜಾತಿ, ಭಾಷೆ, ಇತ್ಯಾದಿ ಆಧಾರಗಳಲ್ಲಿ ತಾರತಮ್ಯ ಮಾಡದಿರುವ ಎಲ್ಲಾ ಹೊಣೆಗಳಿಂದಲೂ ಹಿಂದೆ ಸರಿದಿದೆ. ಪರಿಸ್ಥಿತಿ ಹೀಗಿರುವಾಗ ಶಿಕ್ಷಣ ವಿಷಯದಲ್ಲಿ ಮಾತ್ರ ತಾರತಮ್ಯ ನಿವಾರಿಸುವ ನೀತಿಯನ್ನು ಸರ್ಕಾರದಿಂದ ನಿರೀಕ್ಷಿಸಬಹುದೇ? ಬದಲಿಗೆ ಇಂದಿನ ಎಲ್ಲಾ ಸರ್ಕಾರದ ನೀತಿಗಳು, ಅಂತರರಾಷ್ಟ್ರೀಯ ಬಂಡವಾಳಶಾಹಿ ಅಗತ್ಯಗಳಿಗೆ ಪೂರಕವಾದ ನೀತಿಗಳೇ ಆಗಿವೆ. ಶಿಕ್ಷಣದಲ್ಲಿ ಪ್ರಾಥಮಿಕ ಹಂತದಲ್ಲಿ ವ್ಯಾವಹಾರಿಕ ಇಂಗ್ಲಿಷ್ ಪರಿಚಯಿಸಬೇಕೆಂಬ ನೀತಿಯು ಮಾರುಕಟ್ಟೆಗೆ ಪೂರಕವಾದ ವಾತಾವರಣ ನಿರ್ಮಿಸಬೇಕೆಂದು ಶ್ರಮಿಸುತ್ತಿರುವ ವಿಶ್ವ ಬ್ಯಾಂಕ್ ಪ್ರಾಯೋಜಿತ ನೀತಿಯೇ ಆಗಿದೆ. ವಿಶ್ವಬ್ಯಾಂಕಿನ ಇತ್ತೀಚಿನ ವರದಿಯ ಪ್ರಕಾರ ಇಂಗ್ಲಿಷ್ ಅತಿವೇಗವಾಗಿ ಬೆಳೆಯುತ್ತಿರುವ ಭಾಷೆಯಾಗಿದ್ದು, ಬರಲಿರುವ ದಿನಗಳಲ್ಲಿ ಶ್ರೀಮಂತ ದೇಶಗಳು ತಮ್ಮಲ್ಲಿನ ಹಲವು ಆರ್ಥಿಕ-ವ್ಯಾವಹಾರಿಕ ವಿಭಾಗಗಳನ್ನು ಬಡ ದೇಶಗಳಿಗೆ ವರ್ಗಾಯಿಸುತ್ತವೆ. ಅದರ ಲಾಭ ಪಡೆಯ ಬೇಕಾದರೆ ವ್ಯಾವಹಾರಿಕ ಇಂಗ್ಲಿಷ್ ಜ್ಞಾನ ಅಗತ್ಯ. ಆದ್ದರಿಂದ ಪ್ರಾಥಮಿಕ ಹಂತದಲ್ಲೇ ಇಂಗ್ಲಿಷ್ ಕಲಿಸ ಬೇಕೆಂಬ ಅದರ ಸಲಹೆ. ಕಾಲ್ ಸೆಂಟರ್‌ಗಳ ಲಾಭ ಪಡೆಯುತ್ತಿರುವ ಭಾರತವನ್ನು ಅದು ಯಶಸ್ವಿ ಉದಾಹರಣೆಯೆಂಬಂತೆ ಇಡೀ ವಿಶ್ವಕ್ಕೆ ಬಿತ್ತರಿಸುತ್ತಿದೆ.

ಜಾಗತೀಕರಣದ ಹಿಂದಿನ ಆರ್ಥಿಕ ನೀತಿಗಳು ಸೃಷ್ಟಿಸುವ ಉದ್ಯೋಗಾವಕಾಶಗಳು ಈ ಬಗೆಯವು. ಕಾಲ್‌ಸೆಂಟರ್‌ಗಳು, ಮೆಡಿಕಲ್ ಸ್ಕ್ರೈಬಿಂಗ್‌ನಂತಹ ಸೇವಾಕೇಂದ್ರಗಳು, ರಫ್ತು ಆಧಾರಿತ ಗಾರ್ಮೆಂಟ್ ಕ್ಷೇತ್ರ, ರಫ್ತು ಆಧಾರಿತ ಕೃಷಿ, ಗಣಿ ಇತ್ಯಾದಿಗಳು. ಒಟ್ಟಾರೆ ಸೇವಾ ಕ್ಷೇತ್ರವೇ ನಮ್ಮ ಆರ್ಥಿಕತೆಯ ಶೇ.೪೦ ಭಾಗ. ಈ ದೇಶದ ಶೇ. ೭೦ ಭಾಗದ ಜನ ಆಧರಿಸಿರುವ ಕೃಷಿಯ ಪಾಲು ಕೇವಲ ಶೇ. ೩೦ರಷ್ಟು. ಇನ್ನು ಉತ್ಪಾದಕಾ ಕೈಗಾರಿಕಾ ಕ್ಷೇತ್ರವೇ ದಿನೇದಿನೇ ಕುಸಿಯುತ್ತಿದೆ. ಅಂದರೆ ಭಾರತದ ಆರ್ಥಿಕತೆ ಸಂಪೂರ್ಣವಾಗಿ ವಿದೇಶಿ ಮಾರುಕಟ್ಟೆಯನ್ನು ನೆಚ್ಚಿಕೊಳ್ಳುವ, ಕಚ್ಚಾವಸ್ತುಗಳನ್ನು ರಫ್ತು ಮಾಡುವವನ, ವಸಾಹತುಶಾಹಿ ಆರ್ಥಿಕತೆಯಾಗಲಿದೆ. ಇದರ ಪರಿಣಾಮ ಈಗಾಗಲೇ ಸ್ಪಷ್ಟವಾಗಿ ಗೋಚರಿಸುತ್ತಿದೆ. ಈ ವಸಾಹತುಶಾಹಿ ಆರ್ಥಿಕತೆ ಕೃಷಿಯಲ್ಲಿ ಅಪಾರ ಬಿಕ್ಕಟ್ಟು ಸೃಷ್ಟಿಸಿದೆ. ಸಣ್ಣಪುಟ್ಟ ರೈತರು ಇರುವ ಜಮೀನಿನಲ್ಲಿ ಉತ್ಪಾದಕತೆ ಕಾಣದೆ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಕಾರ್ಪೊರೇಟ್ ಕಾಂಟ್ರ್ಯಾಕ್ಟ್ ಫಾರ್ಮಿಂಗ್‌ನಿಂದಾಗಿ ರೈತ ಕೂಲಿಯಾಗುತ್ತಿರುವುದು ಮಾತ್ರವಲ್ಲದೆ ರೈತನ ಪಾರಂಪರಿಕ ಕೃಷಿಜ್ಞಾನ ಮೂಲೆ ಗುಂಪಾಗುತ್ತಿದೆ. ಮತ್ತೊಂದೆಡೆ ಗ್ರಾಮೀಣ ಕ್ಷೇತ್ರದಲ್ಲಿ ಈ ಕಾರಣದಿಂದಾಗಿ ದೊಡ್ಡ ನಿರುದ್ಯೋಗಿಗಳ ಪಡೆಯೇ ಸೃಷ್ಟಿಯಾಗುತ್ತಿದೆ. ಜಾಗತೀಕರಣ ಸೃಷ್ಟಿಸುತ್ತಿರುವ ಹೊಸ ಉದ್ಯೋಗಾವಕಾಶಗಳು ಈ ಪ್ರಮಾಣದ ಉದ್ಯೋಗ ಸೃಷ್ಟಿಸುತ್ತಿಲ್ಲ-ಮತ್ತು ಅವು ತಾತ್ಕಾಲಿಕವಾದದ್ದು. ಏಕೆಂದರೆ, ವಿಯೆಟ್ನಾಂ ಅಥವಾ ಚೀನಾದಲ್ಲಿ ಮುಂದಿನ ದಶಕದಲ್ಲಿ ಭಾರತಕ್ಕಿಂತ ಕಡಿಮೆ ಕೂಲಿಯಲ್ಲಿ 'ಜ್ಞಾನ ಕಾರ್ಮಿಕರು' ದೊರೆತರೆ ಇದೇ ಕಾಲ್ ಸೆಂಟರ್‌ಗಳು ಅಲ್ಲಿಗೆ ವರ್ಗಾವಣೆಗೊಳ್ಳಲಿವೆ. ಮತ್ತೊಂದೆಡೆ ಜಾಗತೀಕರಣ ಹಿಂದಿನ ಆರ್ಥಿಕ ತರ್ಕ ಸೃಷ್ಟಿಸುವ ಪ್ರತಿ ಹೊಸ ಉದ್ಯೋಗಕ್ಕೆ, ಹಳೆಯ ಹತ್ತು ಉದ್ಯೋಗಗಳು ನಾಶವಾಗಲಿವೆ. ಇದು ಕಟು ವಾಸ್ತವ.

ನವ ಉದ್ಯೋಗಗಳು ಇಂಗ್ಲಿಷ್ ಜ್ಞಾನವನ್ನು ಬೇಡುತ್ತವೆ. ಆದರೆ ಆ ಅವಕಾಶಗಳು ತಾತ್ಕಾಲಿಕ ಹಾಗೂ ಸೀಮಿತ ಹಾಗೂ ಅದು ಈ ದೇಶದ ಪ್ರಭುತ್ವದ, ಸಮಾಜದ ಹಿಡಿತಕ್ಕೆ ಒಳಪಟ್ಟಿರುವವಲ್ಲ. ಆದರೆ ನಾವು ಶಾಶ್ವತವಾಗಿ ಕಳೆದುಕೊಳ್ಳುತ್ತಿರುವ ಉದ್ಯೋಗಗಳು ಆರ್ಥಿಕತೆ ವಂಚಿತ ಸಮುದಾಯವನ್ನು ಶಾಶ್ವತವಾಗಿ ದಾಸರನ್ನಾಗಿ ಮಾಡಿಕೊಳ್ಳುತ್ತಿದೆ. ಜಾಗತೀಕರಣದ ಆರ್ಥಿಕತೆ ಎಲ್ಲಾ ಸಮುದಾಯಗಳ-ಜಾತಿಗಳ 'ಜ್ಞಾನ ಕುಲೀನ'ರಿಗೆ ಅವಕಾಶವನ್ನು ಕಲ್ಪಿಸುತ್ತದೆ, ಇಡೀ ಸಮುದಾಯಕ್ಕಲ್ಲ. ಅದು Inclusivist Modernity ಅಲ್ಲ (ಒಳಗೊಳ್ಳುವ ಆಧುನಿಕತೆ). ಅದು Exclusivist Modernity (ಹೊರಗಿಡುವ ಆಧುನಿಕತೆ). ಇದು ಈ ದೇಶದ ಬ್ರಾಹ್ಮಣ್ಯದ exclusivism ಜೊತೆ ದಿವಿನಾಗಿ ಬೆರೆತು ಹೊಸ ವರ್ಣಾಶ್ರಮ ಪದ್ಧತಿಯನ್ನೇ ಹುಟ್ಟಿ ಹಾಕುತ್ತದೆ. ಹಳೆಯ ಜಾತಿ ಆಧಾರಿತ 'ಜ್ಞಾನ ಬಹಿಷ್ಕರಣ'ದ ಜೊತೆಗೆ ಜಾಗತೀಕರಣದ ಮಾರುಕಟ್ಟೆ ಶಕ್ತಿಗಳು ಸೃಷ್ಟಿಸಿರುವ 'ಜ್ಞಾನ ಸರಕೀಕರಣ'ವೂ ಇಂಗ್ಲಿಷ್ ಹಾಗೂ ಶಿಕ್ಷಣವನ್ನು ಸರಕನ್ನಾಗಿಸಿದೆ. ಹೀಗಾಗಿ ಅದು ವಂಚಿತ ಸಮುದಾಯದ ಕೆಲವರನ್ನು ಬಿಟ್ಟರೆ ಉಳಿದ ಇಡೀ ಸಮೂಹಕ್ಕೆ ಯಾವುದೇ ಅವಕಾಶಗಳನ್ನು ಒದಗಿಸುವುದಿಲ್ಲ. ಹೀಗಾಗಿ ಜಾಗತೀಕರಣದ ತರ್ಕಕ್ಕೆ ಒಳಪಟ್ಟ ಇಂಗ್ಲಿಷ್ ಭಾಷೆ ಜ್ಞಾನ ವಂಚಿತ ಸಮುದಾಯಗಳಿಗೆ ಯಾವುದೇ ವಿಮೋಚನೆಯ ಅವಕಾಶವನ್ನಿರಲಿ, ಬದುಕುವ ಅವಕಾಶವನ್ನೂ ಕಲ್ಪಿಸಿಕೊಡುವುದಿಲ್ಲ.

ಒಂದನೇ ತರಗತಿಯಿಂದ ಇಂಗ್ಲಿಷ್ ಕಲಿಸುವುದಕ್ಕೆ ಇಷ್ಟೆಲ್ಲಾ ಯೋಚಿಸಬೇಕೇ? ಕನ್ನಡದ ಜೊತೆ ಇಂಗ್ಲಿಷನ್ನು ಒಂದು ಭಾಷೆಯನ್ನಾಗಿ ಕಲಿತರೆ ಇಷ್ಟೊಂದು ಅನಾಹುತ ವಾಗುತ್ತದೆ ಎಂದು ಭಾವಿಸಬೇಕೆ? ಎನ್ನುವ ಪ್ರಶ್ನೆಗಳು ಸಹಜ. ಇಂಗ್ಲಿಷನ್ನು ಕೇವಲ ಮತ್ತೊಂದು ಭಾಷೆಯಾಗಿ, ಸಂಗಾತಿ ಭಾಷೆಯಾಗಿ ಪ್ರಭುತ್ವ, ಸಮಾಜ, ಮಾರುಕಟ್ಟೆ ಪರಿಗಣಿಸಿದ್ದರೆ ಪ್ರಶ್ನೆಯೇ ಇರುತ್ತಿರಲಿಲ್ಲ. ಆದರೆ ಇಂಗ್ಲಿಷ್ ಇಂದಿಗೂ ಸಮಾಜದೊಂದಿಗೆ ವಸಾಹತುಶಾಹಿ ಸಂಬಂಧಗಳನ್ನೇ ಮುಂದುವರೆಸಿಕೊಂಡುಬಂದಿದೆ. ಇಂಗ್ಲಿಷನ್ನು ಹೇಗಾದರೂ ಪಡೆದುಬಿಡುವುದರಿಂದ ಇಂಗ್ಲಿಷಿನ 'ಯಾಜಮಾನ್ಯ' ಸ್ಥಾನ ಪ್ರಜಾತಂತ್ರೀಕರಣ ಗೊಳ್ಳುವುದಿಲ್ಲ. ಭಾಷಿಕ ಪ್ರಜಾತಂತ್ರೀಕರಣ ಸಾಧ್ಯವಾಗುವಂತದ್ದು ಜನಭಾಷೆಗೆ ಪ್ರತಿಷ್ಠಿತ ಸ್ಥಾನ ಸಿಕ್ಕಿದಾಗ ಮಾತ್ರ. ವಿದೇಶಿ ಮಾರುಕಟ್ಟೆಗೆ ಬದಲು ಜನರ ಬದುಕು, ಹಾಗೂ ದೇಶದ ರಾಜಕೀಯ-ಆರ್ಥಿಕತೆಯು ಕೇಂದ್ರಬಿಂದು ವಾದಾಗ, ಜನಭಾಷೆಗೆ, ಆ ಮೂಲಕ ಇಡೀ ಜನ ಸಮುದಾಯಕ್ಕೆ, ಪ್ರತಿಷ್ಠಿತ ಸ್ಥಾನಮಾನ ದಕ್ಕುತ್ತದೆ. ಅದರ ಬದಲಿಗೆ ವಿದೇಶಿ ಮಾರುಕಟ್ಟೆ ಆಧಾರಿತ ಆರ್ಥಿಕತೆ, ಇಡೀ ಜನಸಮುದಾಯದ ಬದುಕನ್ನು-ಜನ ಭಾಷೆಯನ್ನು ಮೂಲೆ ಗುಂಪುಗೊಳಿಸುತ್ತದೆ. ಹೀಗಾಗಿಯೇ ವಂಚಿತ ಸಮುದಾಯಗಳು ವಿದೇಶಿ ಆಧಾರಿತ ಆರ್ಥಿಕತೆಯನ್ನು ಅದು ಸೃಷ್ಟಿಸುವ ಭಾಷಾತರ್ಕವನ್ನು ವಿರೋಧಿಸ ಬೇಕಾಗುತ್ತದೆ.

ಜಾತಿ-ವರ್ಗಗಳ ತಾರತಮ್ಯವನ್ನು ನಾಶಗೊಳಿಸಿದ ಜನರೇ ಕೇಂದ್ರಬಿಂದುವಾಗಿರುವ ಹಾಗೂ ಜನ ಸಮುದಾಯ ಪಾರಂಪರಿಕವಾಗಿ ಬೆಳೆಸಿಕೊಂಡು ಬಂದಿರುವ ಜ್ಞಾನ-ವಿವೇಕಗಳನ್ನು ಆಧರಿಸಿದ ಸಮಾಜ ವ್ಯವಸ್ಥೆ ಮಾತ್ರ ವಂಚಿತ ಸಮುದಾಯವನ್ನು, ರಾಷ್ಟ್ರವನ್ನು ಒಳಗೊಳ್ಳುವ ಆಧುನಿಕತೆಯತ್ತ ಕೊಂಡೊಯ್ಯುತ್ತದೆ. ಬದಲಿಗೆ ಜಾಗತೀಕರಣದ ತರ್ಕವನ್ನೇ ಅಪ್ಪಿಕೊಂಡಲ್ಲಿ ವಿಶಾಲ ಅಮೆರಿಕನ್ ಸಾಮ್ರಾಜ್ಯದ, ಹೆಮ್ಮೆಯ ಸಾಮಂತರಾಗ ಬಹುದಷ್ಟೇ. ಅದು ನವವರ್ಣಾಶ್ರಮ ವ್ಯವಸ್ಥೆ ಸೃಷ್ಟಿಸಿರುವ ಜಾತಿ-ವರ್ಗಗಳ ವರ್ಣಾಶ್ರಮ ಜೊತೆ ಬೆರೆತು ದಾಸ್ಯ ಶಾಶ್ವತವಾಗುತ್ತದೆ.

ಒಂದನೇ ತರಗತಿಯಲ್ಲಿ ಮಗು ಮಾತೃಭಾಷೆಯನ್ನು ಹಾಗೂ ಅದರ ಮೂಲಕ ಇತರ ಜ್ಞಾನಶಿಸ್ತುಗಳ ಸಂಚಯ, ವಿಶ್ಲೇಷಣ ತರ್ಕಗಳನ್ನು ಪಡೆದುಕೊಳ್ಳಬೇಕು. ಅದು ತಂದುಕೊಡುವ ಜ್ಞಾನ-ಆತ್ಮವಿಶ್ವಾಸಗಳ ಆಧಾರದಲ್ಲಿ ಮತ್ತೊಂದು ಭಾಷೆ ಕಲಿಯುವುದು ಸರಳ ಸುಲಭ. ಒಂದನೇ ತರಗತಿಯಿಂದಲೇ ಇಂಗ್ಲಿಷಿನಂಥ ಪರಿಸರ ದಲ್ಲಿಲ್ಲದ, ಯಾಜಮಾನ್ಯ ಭಾಷೆಯ ಹೇರಿಕೆ ಮಗುವಿನ ಸರ್ವಾಂಗೀಣ ಅಭಿವೃದ್ಧಿಯನ್ನು ಕೊಲ್ಲುತ್ತದೆ. ಅದರಲ್ಲೂ ಉದಾರೀಕರಣದ ಈ ಯುಗದಲ್ಲಿ ಶಿಕ್ಷಣ ಮಾರುಕಟ್ಟೆಯ ಸರಕಾಗಿರುವಾಗ, ಪ್ರಭುತ್ವ ಇಂಗ್ಲಿಷನ್ನಿರಲಿ, ಕನ್ನಡವನ್ನೇ ಸರಿಯಾಗಿ ಕಲಿಸಿಕೊಡುವುದಿಲ್ಲ. ಇಂಗ್ಲಿಷ್ ಜ್ಞಾನ ಮಾರುಕಟ್ಟೆಯ ಸರಕಾಗಿರುವುದರಿಂದ ಭಾಷಾಜ್ಞಾನದಲ್ಲಿ ತಾರತಮ್ಯ ಅಧಿಕವಾಗಿಯೇ ಇರುತ್ತದೆ. ಇಂತಹ ಸಂದರ್ಭದಲ್ಲಿ ಇಂಗ್ಲಿಷ್ ಜ್ಞಾನ ಕಡ್ಡಾಯ ಮಾಡುವಂಥ ಶೈಕ್ಷಣಿಕ ವ್ಯವಸ್ಥೆ ಈ ತಾರತಮ್ಯಗಳನ್ನು ಹೆಚ್ಚಿಸುತ್ತದೆ. ವಂಚಿತ ಸಮುದಾಯವನ್ನು ಇನ್ನಷ್ಟು ವಂಚಿಸುತ್ತದೆ. ವಂಚಿತ ಸಮುದಾಯಗಳ ಭಾಷೆ ಪ್ರಭುತ್ವ ಹಾಗೂ ಆರ್ಥಿಕಾಭಿವೃದ್ಧಿಯ ಪರಿಭಾಷೆಯಾದರೆ ಮಾತ್ರ ವಂಚಿತ ಸಮುದಾಯದ ವಿಮೋಚನೆ ಸಾಧ್ಯ.

ಈ ವಿಶಾಲ ಭಿತ್ತಿಯಲ್ಲಿ ಒಂದನೇ ತರಗತಿಯಲ್ಲೇ ಇಂಗ್ಲಿಷ್ ಭಾಷಾ ಕಲಿಕೆಯ ವಿಷಯ ಚರ್ಚೆಯಾಗಿರದೆ ಕೇವಲ ವ್ಯಾವಹಾರಿಕವಾದ ದೃಷ್ಟಿಯಿಂದ ಮಾತ್ರ ಚರ್ಚಿಸಿದರೆ ವಂಚಿತ ಸಮುದಾಯಗಳ ದೃಷ್ಟಿಯಲ್ಲಿ ಲಾಭಕ್ಕಿಂತ ನಷ್ಟವೇ ಜಾಸ್ತಿ.

ಶಿವಸುಂದರ್
ನಂ. ೭೩, ೩ನೇ ಹಂತ, ವಿನಾಯಕ ಲೇಔಟ್
ವಿಜಯನಗರ, ಬೆಂಗಳೂರು - ೫೬೦ ೦೪೦

ನಮ್ಮ ಇತಿಹಾಸ ಪಠ್ಯಪುಸ್ತಕಗಳು ಮಕ್ಕಳ ಗ್ರಹಣ ಶಕ್ತಿಯನ್ನು ಯಾವ್ಯಾವ ದಿಕ್ಕುಗಳಲ್ಲಿ ಎಳೆಯುತ್ತವೆ ಎನ್ನುವುದಕ್ಕೆ ಒಂದು ಅದ್ಭುತ ಉದಾಹರಣೆ ಇಲ್ಲಿದೆ: ...ನೇ ತರಗತಿಯಲ್ಲಿ ಓದುತ್ತಿರುವ ನನ್ನ ಮಗ ಮೊನ್ನೆ ಇತಿಹಾಸ ಪಾಠಗಳನ್ನು ಓದುತ್ತ ''ಅಮ್ಮಾ, ಮಹಮ್ಮದ ಘೋರಿ, ಘಜನಿ, ಖಿಲ್ಜಿ ಇವ್ರೆಲ್ಲಾ ಎಷ್ಟ ಕೆಟ್ಟ ಹೊಲಸ ...ದಾರಲ್ಲ?'' ಎಂದು ಕೇಳಿದ. ನಾನು ಗಾಬರಿ ಬಿದ್ದು ''ಯಾಕಪಾ ಅವ್ರಿಂದ ನಿನಗೇನು ತ್ರಾಸಾತು?'' ಎಂದು ಕೇಳಿದೆ. ''ಮತ್ತ ನೋಡು, ಅವ್ರು ನಮ್ಮ ದೇಶಾನೆಲ್ಲ ಹೆಂಗ ಕೊಳ್ಳೆಹೊಡದಾರ, ಎಷ್ಟ ಹಾಳಮಾಡ್ಯಾರಾ...'' ಎಂದು ಏನೇನೋ ಬಡಬಡಿಸಿದ ಭೂಪ! ನನಗೆ ...ಘಾತವಾದರೂ ತೋರಿಸಿಕೊಳ್ಳದೆ ಸ್ವಲ್ಪ ಶಾಂತವಾಗಿ ಕೇಳಿದೆ, ''ನೋಡಪ್ಪ, ನಮ್ಮ ದೇಶಾನ ಕೊಳ್ಳೆ ಹೊಡೆದ ...ರಲ್ಲಿ ಈ ಘಜನಿ, ಘೋರಿ, ಖಿಲ್ಜಿಗಳು ಮೊದಲಿಗರೂ ಅಲ್ಲ, ಕೊನೆಯವರೂ ಅಲ್ಲ. ಒಬ್ಬ ಇನ್ನೊಬ್ಬನ ಮೇಲೆ ದಂಡೆತ್ತಿ ಹೋಗೋದು, ಲೂಟಿ ಮಾಡೂದು, ತನ್ನ ಸಾಮ್ರಾಜ್ಯ ವಿಸ್ತಾರಾ ಮಾಡಿಕೊಳ್ಳೋದು ಇದೆಲ್ಲಾ ಇತಿಹಾಸದೊಳಗ ಸಾಮಾನ್ಯ. ಈ ದಾಳಿಗಳನ್ನ ಮುಖ್ಯವಾಗಿ ನಾವು ಆಯಾ ಕಾಲದ ರಾಜಕೀಯ, ಸಾಮಾಜಿಕ, ...ರ್ಥಿಕ, ಧಾರ್ಮಿಕ, ಬೌದ್ಧಿಕ... ಮೊದಲಾದ ...ಯಾಮಗಳಿಂದ ಅರ್ಥಮಾಡಿಕೋಬೇಕು. ನೀನು ...ಂಬನಂತೆ ಅವ್ರನ್ನಷ್ಟ ಲೆಕ್ಕಕ್ಕ ತೊಗೋಳ್ದ ಮೈಮಾಲ ...ಂದಿಷ್ಟ ಎಚ್ಚರಾ ಇಟಗೊಂಡು ಇತಿಹಾಸ ಓದು, ...ಳಿತಿಲ್ಲೊ?'' ಅವನಿಗೆ ಎಷ್ಟು ಅರ್ಥವಾಯಿತೊ ಏನೋ ''ಹೂಂ'' ಎಂದು ಕವಲೆತ್ತಿನಂತೆ ಗೋಣು ಹಾಕಿದ.

ನಮ್ಮ ಇತಿಹಾಸಪ್ರಜ್ಞೆ ತೀರ ಸಾಂಪ್ರದಾಯಿಕ ...ದುದು. ಅದು ಲಿಖಿತ ಆಕರಗಳ ಮೂಲಕ

**ಇತಿಹಾಸಕ್ಕೊಂದು ವಸ್ತುನಿಷ್ಠತೆಯನ್ನು ...ರಬೇಕು. ಇಷ್ಟಾದರೆ ಇದರಿಂದ ಎಳೆಯ ...ನಸ್ಸುಗಳು ಕಲುಷಿತಗೊಳ್ಳುವ ಒಂದು ...ಡ್ಡ ಗಂಡಾಂತರದಿಂದ ನಾವು ...ರಾದಂತೆ. ನಮ್ಮ ದೇಶಿಜ್ಞಾನ ...ದರಿಗಳ ಬೆಳಕಲ್ಲಿ ಹಂತ ಹಂತವಾಗಿ ...ಗತೀಕರಣವನ್ನು ಎದುರಿಸುವ ತಾಕತ್ತು ...ಳೆಸಿಕೊಳ್ಳಬೇಕು. ಹೀಗಾದಾಗ ...ಲ್ಪವಾದರೂ ನೆಮ್ಮದಿಯ ಬದುಕು ...ಮ್ಮದಾಗಬಹುದು.**

**ಮೊಟ್ಟಮೊದಲು ನಾವು ನಮ್ಮ ...ತಿಹಾಸವನ್ನು ಅಸಾಂಪ್ರದಾಯಿಕವಾಗಿ – ...ಂದರೆ ಮೌಖಿಕ ಪರಂಪರೆಯಂತಹ ...ತರ ಆಕರಗಳಿಂದಲೂ ವಿವೇಚಿಸಿ ...ಉದಾ: ಹಂಪಿ ಜಾನಪದ) ಅದಕ್ಕೊಂದು ...ಸ್ತುನಿಷ್ಠತೆಯನ್ನು ತರಬೇಕು.**

# ಕತ್ತಲ ಇತಿಹಾಸದಲ್ಲೊಂದು ಬೆಳ್ಳಿಗೆರೆ

ರಚನೆಗೊಂಡಿರುವಂತಹುದು. ಈ ಬಗೆಯ ಸಾಂಪ್ರದಾಯಿಕ ಇತಿಹಾಸವನ್ನು ರಚಿಸಿದವರು ನಮ್ಮನ್ನಾಳಿದ ಬ್ರಿಟಿಷರು. ನಮ್ಮ ಇತಿಹಾಸದಲ್ಲಿ ಅವರ ಹಸ್ತಕ್ಷೇಪ ವಿಪರೀತ. ಅವರು ತಮ್ಮ ಹಿತಾಸಕ್ತಿಗಳನ್ನು ಗಮನದಲ್ಲಿಟ್ಟುಕೊಂಡೇ ನಮ್ಮ ಇತಿಹಾಸವನ್ನು ರಚಿಸಿದವರು. ಅವರು ತಮ್ಮ ವಸಾಹತು ದೇಶಗಳನ್ನು ತಮ್ಮ ಕಪಿಮುಷ್ಟಿಯಲ್ಲಿಟ್ಟುಕೊಳ್ಳಲು ಒಡೆದು ಆಳುವ ನೀತಿಯನ್ನು ಅನುಸರಿಸಿದರು. ಈ ಒಡೆದು ಆಳುವ ನೀತಿಗನುಸಾರವಾಗಿಯೇ ಅವರು ರಚಿಸಿಟ್ಟುಹೋದ ಇತಿಹಾಸವನ್ನು ಇಂದು ನಾವು 'ಛ' ಎನ್ನದೇ ಉರು ಹೊಡೆಯುತ್ತಿದ್ದೇವೆ! ತತ್ಪರಿಣಾಮವಾಗಿ ಶತಮಾನಗಳಿಂದ ಇಲ್ಲೇ ಅಂಡು ಊರಿ ಆಳಿಹೋದ ಬ್ರಿಟಿಷರು ಲೂಟಿ ಹೊಡೆದದ್ದು ನಮಗೆ ಕಾಣವುದಿಲ್ಲ, ಬದಲಾಗಿ ಘಜನಿ, ಘೋರಿ, ಖಿಲ್ಜಿ... ಮೊದಲಾದ ಒಂದು ವರ್ಗದವರು ಮಾತ್ರ ದರೋಡೆಕೋರರಾಗಿ ನಮಗೆ ಕಾಣಿಸುತ್ತಾರೆ! ಈ 'ಒಕ್ಕಣ್ಣು ಇತಿಹಾಸ ಪ್ರಜ್ಞೆ'ಯಿಂದ ಹೊರಬರಲು ನಮಗೆ ಸಾಧ್ಯವೇ ಇಲ್ಲವೆ? ನಾವು ಇತರ ಆಯಾಮಗಳಿಂದಲೂ ನಮ್ಮ ಇತಿಹಾಸವನ್ನು ಅವಲೋಕಿಸುವುದನ್ನು ಕಲಿಯಬೇಡವೆ? ಯಾಕೆಂದರೆ ಇಂತಹ ಪೂರ್ವಗ್ರಹಪೀಡಿತ ಇತಿಹಾಸ ಪ್ರಜ್ಞೆ ನಮ್ಮ ಸಮಾಜ, ಸಂಸ್ಕೃತಿ, ಸಾಮರಸ್ಯಗಳಿಗೆ ತರುವ ಧಕ್ಕೆ ಅಷ್ಟಿಷ್ಟಲ್ಲ. ಉದಾಹರಣೆಗೆ 'ಹಂಪಿ' ಇತಿಹಾಸವನ್ನು ಅವಲೋಕಿಸಬಹುದು. ಹಂಪಿ ಇತಿಹಾಸ ಪ್ರಾರಂಭವಾಗುವುದೇ 'ಹಿಂದೂ ಮಂತ್ರ'ದ ಜಪದಿಂದ. 'ದಾಳಿಕೋರರ ಕ್ರೂರ ದಬ್ಬಾಳಿಕೆ ಮತ್ತು ಆಕ್ರಮಣ ನೀತಿಗೆ ಸಿಲುಕಿ ಘನತೆ, ಗೌರವ, ಸಂಸ್ಕೃತಿ, ಪರಂಪರೆ ರಕ್ಷಿಸುವ ಸ್ಥಿತಿಯಲ್ಲಿರದೇ ಹಿಂದೂಗಳು, ನಿರಾಶೆಯ ಅಂಚಿನಲ್ಲಿದ್ದಾಗ ಹಕ್ಕ-ಬುಕ್ಕ ಸಹೋದರರು ವಿದ್ಯಾರಣ್ಯ, ಅಕ್ಷೋಭ್ಯ ತೀರ್ಥ ಹಾಗೂ ಕ್ರಿಯಾಶಕ್ತಿ ಮಾರ್ಗದರ್ಶನದಲ್ಲಿ ವಿಜಯನಗರ ಸ್ಥಾಪನೆಯಾಯಿತು...' ಹೀಗೆ ವಿಜಯನಗರದ ಇತಿಹಾಸ ಪ್ರಾರಂಭವಾಗುತ್ತದೆ. ಇಲ್ಲಿ 'ಕ್ರೂರ ದಾಳಿಕೋರರು' ಯಾರೆಂದು ಬೇರೆ ವಿವರಿಸಬೇಕಿಲ್ಲ. ಅಷ್ಟೇ ಅಲ್ಲ, ಹದಿಮೂರು-ಹದಿನಾಲ್ಕನೇ ಶತಮಾನದಲ್ಲಿ ಇವತ್ತಿನಂತೆ 'ಹಿಂದೂ' ಎಂಬ ಒಂದು ಪರಿಕಲ್ಪನೆ ಇತ್ತೆ? ಇದ್ದಿತಾದರೆ ಯಾಕಿತ್ತು? ಯಾವ ರೂಪದಲ್ಲಿತ್ತು? ಎಂಬ ಪ್ರಶ್ನೆಗಳೂ ಇಲ್ಲಿ ನಗಣ್ಯ. ಐತಿಹಾಸಿಕವಾಗಿ ಈ 'ಹಿಂದೂ ಪರಿಕಲ್ಪನೆ' ರೂಪುಗೊಂಡಿರುವುದೇ ಬ್ರಿಟಿಷರ ಮೂಲಕ. ಅದೂ ಅವರ ಸಾಮ್ರಾಜ್ಯಶಾಹಿಯ ಹಿತಾಸಕ್ತಿಗಾಗಿ ರಚನೆಗೊಂಡ ಪರಿಕಲ್ಪನೆ ಎಂಬ ಸತ್ಯ ಕಣ್ಣಿಗೆ ಹೊಡೆಯುತ್ತಿದ್ದರೂ ಜಾಣ ಕುರುಡನ್ನು ತಳೆದು ಮತ್ತದೇ ಹಳೆಯ ರಾಗವನ್ನೇ ಹಾಡಲಾಗುತ್ತದೆ! ಈ ಹಳೆಯ ರಾಗ ಸಂಯೋಜನೆಯಲ್ಲಿ ಖ್ಯಾತ ಸಾಹಿತಿ (?!) ಡಾ|| ಸೂರ್ಯನಾಥ ಕಾಮತ್ ರಚಿಸಿರುವ 'ವಿಜಯನಗರ ವೈಭವ' ಎಂಬ ಧ್ವನಿ ಮತ್ತು ಬೆಳಕಿನ ಕಾರ್ಯಕ್ರಮವೊಂದು ಭಾರತ ಸರ್ಕಾರದ ವಾರ್ತಾ ಮತ್ತು ಪ್ರಸಾರ ಸಚಿವಾಲಯದ ಅಂಗವಾದ ಸಂಗೀತ ಮತ್ತು ನಾಟಕ ವಿಭಾಗದಿಂದ ಹಂಪಿ ಉತ್ಸವದಲ್ಲಿ ಇತ್ತೀಚೆಗೆ ಒಂದು ವಾರದವರೆಗೆ ಪ್ರಸಾರವಾಯಿತು. ಲಕ್ಷಾಂತರ ರೂಪಾಯಿಗಳು ಅದಕ್ಕೆ ಖರ್ಚಾಗಿ ಸಾವಿರಗಟ್ಟಲೇ ಜನರು ಅದನ್ನು ಒಳ್ಳೆಯ ಹುರುಪಿನಿಂದಲೇ ವೀಕ್ಷಿಸಿದರು. ವಿಜಯನಗರದ ಗತವೈಭವದ ಅಮಲನ್ನು ತಲೆಗೇರಿಸಿಕೊಂಡು ಮರಳಿದರು. ಮುಂದೆ ಇದರ



ವನಮಾಲಾ ಕಟ್ಟೇಗೌಡರ

ಪರಿಣಾಮ? ಯಾಕೆಂದರೆ, ಇಲ್ಲಿನ ಮನಸ್ಸುಗಳು ಒಡೆದುಹೋಗಲೆಂಬ ಉದ್ದೇಶದಿಂದ ಯಾವ ಇತಿಹಾಸವನ್ನು ಕಟ್ಟಲಾಗಿತ್ತೋ ಅದೇ ಒಕ್ಕಣ್ಣು ಇತಿಹಾಸದ ಆಧಾರದಿಂದಲೇ ಕಾಮತರು 'ವಿಜಯನಗರ ವೈಭವ'ವನ್ನು ಕಟ್ಟಿದ್ದು. ಆದ್ದರಿಂದ ಕಾಲಘಟ್ಟಗಳು ಬೇರೆ ಬೇರೆಯಾದರೂ ಪರಿಣಾಮ ಮಾತ್ರ ಒಂದೇ ಆಗಿರುತ್ತದೆ. ಕಾರಣ, ಬ್ರಿಟಿಷರಿಂದ ನಮಗೆ ದೊರಕಿದ್ದು ಸ್ವಾತಂತ್ರ್ಯವಲ್ಲ, ಅಧಿಕಾರ ಹಸ್ತಾಂತರ. ಈ ಅಧಿಕಾರವನ್ನು ಯಾರು ಯಾರು ಕಬಳಿಸಿದರು, ಹೇಗೆ ಹೇಗೆ ಆಳಿದರು ಎಂಬುದನ್ನೆಲ್ಲ ಬಿಡಿಸಿ ಹೇಳಬೇಕಾಗಿಲ್ಲ. ಇಲ್ಲದಿದ್ದರೆ ಕೊನೆಯ ಪಕ್ಷ ನಮ್ಮ ಇತಿಹಾಸವನ್ನು ಪುನರವಲೋಕಿಸುವುದು, ಅದಕ್ಕೊಂದಿಷ್ಟು ವಾಸ್ತವತೆಯನ್ನು ತಂದುಕೊಡುವುದು ನಮ್ಮಿಂದ ಸಾಧ್ಯವಾಗದೇ ಇರುತ್ತಿತ್ತೆ? ಮತ್ತದೇ ಒಕ್ಕಣ್ಣು ಇತಿಹಾಸವನ್ನೇ ನಾವು ಓದಿಕೊಂಡು ಬಂದಿದ್ದೇವೆ. ನಮ್ಮ ಮಕ್ಕಳಿಗೂ ಅದೇ 'ವಿಷ'ವನ್ನು ಉಣಬಡಿಸುತ್ತಿದ್ದೇವೆ! ಆದ್ದರಿಂದ ಹಂಪಿ ಇತಿಹಾಸವೆಂದರೆ ಕ್ರೂರ ದಾಳಿಕೋರರು, ಅವಸಾನದ ಅಂಚಿನಲ್ಲಿದ್ದ ಹಿಂದೂ ಧರ್ಮದ ಸಂರಕ್ಷಣೆ... ಮುಂತಾದ ಬಡಬಡಿಕೆಯೇ ಅದರಲ್ಲಿ ತುಂಬಿಕೊಂಡಿರುತ್ತದೆ. ವಿಜಯನಗರ ಸಂಸ್ಥಾಪನೆಯ ಕಾಲಕ್ಕೆ ಈಗಿನಂತೆ ಒಂದು 'ಹಿಂದೂ' ಪರಿಕಲ್ಪನೆ ಇದ್ದಿರಲಿಲ್ಲ ಮತ್ತು ಆಗಿನ ದಾಳಿಕೋರರಿಗೆ ವಿಶೇಷವಾಗಿ ಕೊಂಬು-ಕೋಡು ಇರಲಿಲ್ಲ ಎಂಬ ಸತ್ಯ ಮರೆಗೆ ಸರಿದುಬಿಡುತ್ತದೆ. ಆದರೆ ಒಂದೇ ಒಂದು ಸಮಾಧಾನಕರ ಸಂಗತಿಯೆಂದರೆ ಇತಿಹಾಸದ ಇಂತಹ ತೆರೆಮರೆಯ ಸತ್ಯಗಳನ್ನು ಅನಾವರಣಗೊಳಿಸುವ ಕೈಂಕರ್ಯದಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾಲಯ ತೊಡಗಿಕೊಂಡಿರುವುದು. ಹಂಪಿ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿದ 'ಹಂಪಿ ಜಾನಪದ' ಪುಸ್ತಕವು ಈ ನಿಟ್ಟಿನಲ್ಲಿ ಒಂದು ದಿಟ್ಟ ಹೆಜ್ಜೆಯಾಗಿದೆ. ಮುಖ್ಯವಾಗಿ, ಇಲ್ಲಿ ಹಂಪಿ ಪರಿಸರವನ್ನು ಮೌಖಿಕ ಪರಂಪರೆಯ ಮೂಲಕ ನೋಡಿ ಹಂಪಿ ಇತಿಹಾಸವನ್ನು ಮರು ಪರಿಶೀಲಿಸಲಾಗಿದೆ. ಈ ಪರಿಶೀಲನೆಯಲ್ಲಿ ಇದುವರೆಗಿನ ಇತಿಹಾಸ ಪಠ್ಯಗಳು ಕಟ್ಟಿ ಕೊಡಲಾಗದೇ ಇರುವ ಸಂಗತಿಗಳನ್ನು ನಮಗೆ ಮೌಖಿಕ ಆಕರಗಳು ತಿಳಿಸಿಕೊಡುತ್ತವೆ. ಡಾ|| ಪುರುಷೋತ್ತಮ ಬಿಳಿಮಲೆ ಹಾಗೂ ಚಲುವರಾಜು ಅವರ ಸಂಶೋಧನೆಗಳು ಲಿಖಿತ ಇತಿಹಾಸಕ್ಕಿಂತ ಭಿನ್ನವಾದ ಎಷ್ಟೋ ಸ್ವಾರಸ್ಯಕರ ಸಂಗತಿಗಳನ್ನು ನಮ್ಮ ಮುಂದಿಡುತ್ತವೆ. ಇದು ನಿಜಕ್ಕೂ ಕತ್ತಲ ಇತಿಹಾಸದಲ್ಲೊಂದು ಬೆಳ್ಳಿಗೆರೆಯಂತೆ. ಆ ಪುಸ್ತಕದಲ್ಲಿನ ಕೆಲವು ಉಲ್ಲೇಖಗಳು ಹೀಗಿವೆ :

''ವಿಜಯನಗರ ಸಂಸ್ಥಾನವನ್ನು ನಾವು ಎಷ್ಟೇ ದೇಶೀಯವೆಂದು ಕರೆದರೂ ಅದು ಮಾತ್ರ ಹಾಗಿರುವುದಕ್ಕೆ ಸಾಧ್ಯವಿರಲಿಲ್ಲ. ವಿದೇಶಿ ಜನರೊಡನೆ ಅದಕ್ಕಿದ್ದ ಸಂಪರ್ಕದಿಂದಾಗಿ ಸಮ್ಮಿಶ್ರ ಸಂಸ್ಕೃತಿಯೊಂದು ಅಲ್ಲಿ ರೂಪುಗೊಂಡಿತ್ತು... ವಸಾಹತು ಪೂರ್ವದಲ್ಲಿಯೇ ಸಂಸ್ಥಾನವೊಂದು ವಸಾಹತೀಕರಣಕ್ಕೆ ದಾರಿ ಮಾಡಿಕೊಡುತ್ತಿದ್ದುದಕ್ಕೆ ವಿಜಯನಗರ ಸಂಸ್ಥಾನ ಒಳ್ಳೆಯ ಉದಾಹರಣೆ.''

''ವೀರಶೈವರು ವೈಷ್ಣವ ದೇವಸ್ಥಾನಗಳನ್ನು ನಾಶ ಮಾಡಿದ ಬಗ್ಗೆ ವಿಜಯನಗರ ಪತನಾನಂತರ ಲಂಬಾಣಿಗಳು ಹಂಪಿಯನ್ನು ಲೂಟಿ ಮಾಡಿದ ಬಗ್ಗೆ ಮೌಖಿಕ ನಿರೂಪಣೆಗಳಿವೆ.''

''ಹಂಪಿ ಪರಿಸರದ ಮೊಹರಂ ಹಬ್ಬವು ಹಿಂದೂ-ಮುಸ್ಲಿಂ ಭಾವೈಕ್ಯತೆಯನ್ನು ಸೊಗಸಾಗಿ ಪ್ರತಿನಿಧಿಸುತ್ತದೆ. ಅಕ್ಷರ ಇತಿಹಾಸವು ಹೇಳುವ ಹಿಂದೂ-ಮುಸ್ಲಿಂ ಘರ್ಷಣೆ ಅಲ್ಲಿ ಇಲ್ಲ.''

''ಹಂಪಿಯ ಬಗ್ಗೆ ಲಿಖಿತ ಇತಿಹಾಸಗಳು ಯಾವ ಬಗೆಯ ವಿವರಗಳನ್ನು ನೀಡಿವೆಯೋ ಆ ವಿವರಗಳನ್ನು ಜಾನಪದ ನಿರೂಪಣೆಗಳು ಪೂರ್ತಿಯಾಗಿ ತಿರಸ್ಕರಿಸಿವೆ. ಅಕ್ಷರ ಮಾಧ್ಯಮದ ಚರಿತ್ರೆಯಲ್ಲಿ ಗೈರುಹಾಜರಾದ ಅಂಶಗಳೇ ಜಾನಪದ ಇತಿಹಾಸದಲ್ಲಿ ಭದ್ರಸ್ಥಾನ ಪಡೆದಿವೆ. ಇದಕ್ಕೆ ಅತ್ಯುತ್ತಮ ಉದಾಹರಣೆಯೆಂದರೆ 'ಕಂಪಿಲ' ಮತ್ತು 'ಕುಮಾರರಾಮ'ನ ಬಗೆಗೆ ದೊರಕುವ ವಿವರಗಳು. ಮೌಖಿಕ ನಿರೂಪಣೆಗಳಲ್ಲಿ ಇವರಿಬ್ಬರ ಬಗೆಗೆ ಗರಿಷ್ಠಮಟ್ಟದ ವಿವರಗಳು ದೊರಕುತ್ತವೆ. ಮತ್ತು ಈ ವಿವರಗಳು ಭಿನ್ನ ಬಗೆಯ ಸೈದ್ಧಾಂತಿಕತೆಯನ್ನು ಕಟ್ಟಿಕೊಡುತ್ತವೆ...''

''ಜಾನಪದ ಇತಿಹಾಸವು ಸಂಸ್ಥಾನಗಳ ಅಳಿವನ್ನು ಅವುಗಳ ಪತನಮುಖೀ ನೈತಿಕತೆಯಲ್ಲಿ ಮಂಡಿಸುತ್ತವೆ. ಇಲ್ಲಿ ಸಂಸ್ಥಾನಗಳ ನಡುವಣ ಹೋರಾಟಗಳಿಗೆ ಯಾವುದೇ ಸ್ಥಾನ ಇಲ್ಲ, ಅದರ ಬದಲು ಸಂಸ್ಥಾನದ ಯಜಮಾನನ ಅನೈತಿಕ ನಡುವಳಿಕೆಯಿಂದ ಉಂಟಾಗುವ ಅವನತಿಯನ್ನು ಇವು ವಿವರಿಸುತ್ತವೆ.''

ಚರಿತ್ರೆಯ ನಿರೂಪಣೆಯ ಸಂದರ್ಭದಲ್ಲಿ ಜಾನಪದ ನಿರೂಪಣೆಗಳು ವರ್ತಮಾನಕ್ಕೇ ಹೆಚ್ಚು ಅಂಟಿಕೊಂಡಿರುವುದು ಕಂಡುಬರುತ್ತದೆ. ಹಾಗಾಗಿ ಜಾನಪದ ನಿರೂಪಣೆಗಳಲ್ಲಿ ಹಂಪಿಯ ಈಗಿನ ಹೀನಸ್ಥಿತಿಗೇ ಹೆಚ್ಚು ಒತ್ತು ನೀಡಲಾಗಿದೆ. ಹಂಪಿಯ
ಬಗೆಗಿನ ಲಿಖಿತ ಇತಿಹಾಸಗಳು ವರ್ತಮಾನವನ್ನು ಅಷ್ಟಾಗಿ ಗಮನಿಸುವು
ಎಂಬುದು ಇಲ್ಲಿ ಉಲ್ಲೇಖಾರ್ಹ.

''ಜಾನಪದ ವಿವರಗಳನ್ನಾಧರಿಸಿ ಹಂಪಿಯ ಬಗೆಗೆ ಹೊಸ ಬಗೆಯ ವ್ಯಾಖ್ಯಾನಗ
ಮಾಡಲು ಸಾಧ್ಯ. ಅವು ವೀರಶೈವ ಮತ್ತು ವೈಷ್ಣವರ ನಡುವಿನ ಸಂಘರ್ಷಗ
ಬಯಲಿಗೆಳೆಯುತ್ತವೆ. ಭೋಜನಶಾಲೆಯ ಬಗೆಗೆ ಬೇರೆ ವಿವರಗಳನ್ನು ನೀಡುತ್ತವೆ

ಹಂಪಿಯ ಇತಿಹಾಸ ಹೀಗೂ ಇರಬಹುದಾದ ಸಾಧ್ಯತೆ ಸಾಕಷ್ಟಿರುವಾಗ ನ
ಅಂದಿನಿಂದ ಇಂದಿನವರೆಗೆ ಅದೇ ಹಳೇ ರಾಗವನ್ನು ಹಾಡುತ್ತ ಕುಳಿತಿರುವುದು ವ
ಇತ್ತೀಚೆಗೆ ಈ ಹಳೇ ರಾಗಕ್ಕೇ ಹೆಚ್ಚು ಹೆಚ್ಚು ಉತ್ತೇಜನ ಸಿಕ್ಕುತ್ತಿರುವುದು ಯಾ
ಇದನ್ನು ಸ್ಪಷ್ಟವಾಗಿ ಕೇಳಿಕೊಳ್ಳಬೇಕಾದ ಜರೂರತ್ತಿದೆ.

ಸ್ವಾತಂತ್ರ್ಯ ಪೂರ್ವದಲ್ಲಿ ತಮ್ಮ ಲೂಟಿಯನ್ನು ಸುಗಮಗೊಳಿಸಲು ಹಾಗೂ ಎ
ಜನರ ಲಕ್ಷ್ಯವನ್ನು ಬೇರೆಡೆ ತಿರುಗಿಸಲು ವಸಾಹತುಶಾಹಿಗಳು 'ಹಿಂದೂ ಮ
ಜಪಿಸಲು ಅನುವು ಮಾಡಿಕೊಟ್ಟರು. ಲಾರ್ಡ್ ವೆಲ್ಲೆಸ್ಲಿ ಬಂಗಾಳದ ವೈವಿಧ್ಯಮ
ಜನಪದ ಪರಂಪರೆಗಳನ್ನು ಕಡೆಗಣಿಸಿ ವೇದೋಪನಿಷತ್ತುಗಳಿಗೇ ಒತ್ತು ನೀಡಿದ
ಈ ಹಿನ್ನೆಲೆಯಲ್ಲಿಯೇ ಅರ್ಥೈಸಬೇಕು. ಬ್ರಿಟಿಷರು ಅಂದು ನಮ್ಮ ಹತ್ತಿರದ ಚಾರಿ
ಕಾಲಘಟ್ಟವನ್ನು ಕಡೆಗಣಿಸಿ ದೂರದ ಗತಕಾಲದ ಚರಿತ್ರೆಗೇ ಮಹತ್ವಕೊಟ್ಟು ಅದ
ಅತಿರಂಜಕವಾಗಿ ಬಣ್ಣಿಸಿ ಒಂದು ಬಗೆಯ ಕಾಲ್ಪನಿಕ ಇತಿಹಾಸ ಹುಟ್ಟುಹಾಕಿದರು.
ದೇಶದ ಶತ್ರುಗಳು ಈ ದೇಶವನ್ನು ಹಾಳುಮಾಡಿದ ಮುಸ್ಲಿಮರು ಎಂದು ಬಿಂಬಿಸಿ
ಮೂಲಕ ಅವರು ಭಾರತೀಯರ ಒಗ್ಗಟ್ಟು-ಸೌಹಾರ್ದತೆಗಳನ್ನು ಕೆಡಿಸಬಯಸಿದ
ಇದರ ಪರಿಣಾಮವಾಗಿ ನಮ್ಮ ಇತಿಹಾಸವು ಆಯಾ ಕಾಲದ ಸಾಮಾಜಿಕ, ರಾಜಕೀ
ಆರ್ಥಿಕ, ಧಾರ್ಮಿಕ, ಬೌದ್ಧಿಕ ಸಂಗತಿಗಳಿಂದ ಹೊರತುಪಟ್ಟು ಒಂದು ಬಗೆ
ರೋಮಾಂಚಕಾರೀ ಚರಿತ್ರೆಯಾಗಿ ಮಾರ್ಪಟ್ಟಿತು. ಇದರಿಂದ ಇತಿಹಾಸ
ಮುಸ್ಲಿಮರ ದಾಳಿಗಳ ವೈಭವೀಕರಣ ತುಂಬಿಕೊಂಡಿತು. ಬ್ರಿಟಿಷರ ದಾಳಿ, ಲೂ
ಶೋಷಣೆ ಹಿನ್ನೆಲೆಗೆ ಸರಿಯಿತು. ಹೀಗೆ ಶತ್ರುವಲ್ಲದ ಶತ್ರು ನಮ್ಮ ಮುಂದೆ ಧುತ್ತೆಂ
ನಿಂತ. ನಿಜವಾದ ಶತ್ರು ಮರೆಯಲ್ಲಿ ನಿಂತು ವಿಕಟನಗೆ ನಕ್ಕ!

ಈಗ ಜಾಗತೀಕರಣದ ಮೂಲಕ ನವವಸಾಹತುಶಾಹಿ ಮತ್ತೆ ಇಲ್ಲಿ ಲೂಟಿಯ
ಪ್ರಾರಂಭಿಸಿದೆ. ಮತ್ತದಕ್ಕೆ ಈ ಲೂಟಿಯನ್ನು ಮರೆಮಾಚಲು ಒಂದು ಅಸ್ತ್ರ ಬೇಕಾಗಿ
ಅದಕ್ಕೇ ಮತ್ತೆ 'ಹಿಂದೂಜಪ' ಪ್ರಾರಂಭವಾಗಿದೆ. ಇಲ್ಲಿ ಹಿಂದೂ ಜಪಿಸುವವ
ಅಧಿಕಾರ ಬೇಕು. ಅಲ್ಲವರಿಗೆ ಈ ದೇಶದ ಲೂಟಿಗೆ ಸುಗಮ ದಾರಿ ಮಾಡಿಕೊಡ
ಒಂದು ರಾಜಕೀಯ ಶಕ್ತಿ ಬೇಕು. ಹೀಗೆ ಬೆಂಕಿ-ಬಿರುಗಾಳಿ ಒಟ್ಟಾಗಿ ದೇಶಕ್ಕೆ ಕಿಚ್ಚ
ಹಚ್ಚಲು ಹೊರಟಿವೆ! ಇದನ್ನು ಎಷ್ಟು ನಾಜೂಕಾಗಿ ಸಾಧಿಸಲಾಗುತ್ತದೆಯೆಂದರೆ ಇ
ಬಗ್ಗೆ ಬಹುತೇಕ ಜನರಿಗೆ ಕೊಂಚವೂ ಅನುಮಾನ ಬರುವುದಿಲ್ಲ. ಹಾಗೆ ಅನುಮಾನದಿ
ನೋಡುವವರನ್ನೇ ಅವರು ವಿಶೇಷ ಅನುಮಾನದಿಂದ ನೋಡಿ 'ದೇಶದ್ರೋ
ಪಟ್ಟ ಕಟ್ಟಿಬಿಡುತ್ತಾರೆ! ಇದು ನವವಸಾಹತುಶಾಹಿಯು ಮುಳ್ಳನ್ನು ಮುಳ್ಳಿನಿಂದ
ತೆಗೆಯುವ ಚಾಣಾಕ್ಷತನ! ಇಂತಹ ಚಾಣಾಕ್ಷರಿಗೆ ಯಾವತ್ತೂ ಕೊರಳೊಡ
ಕುರಿಗಳು ನಾವಾಗಬೇಕೆ? ಹಾಗಾಗಬಾರದು ಎಂದಿದ್ದರೆ ಮುಂದಿನ ದಾರಿಗಳೇನು

ಮೊಟ್ಟಮೊದಲು ನಾವು ನಮ್ಮ ಇತಿಹಾಸವನ್ನು ಅಸಾಂಪ್ರದಾಯಿಕವಾಗಿ – ಅಂ
ಮೌಖಿಕ ಪರಂಪರೆಯಂತಹ ಇತರ ಆಕರಗಳಿಂದಲೂ ವಿವೇಚಿಸಿ (ಉದಾ: ಹ
ಜಾನಪದ) ಅದಕ್ಕೊಂದು ವಸ್ತುನಿಷ್ಠತೆಯನ್ನು ತರಬೇಕು. ಇಷ್ಟಾದರೆ ಇದರಿಂದ ಎಳೆ
ಮನಸ್ಸುಗಳು ಕಲುಷಿತಗೊಳ್ಳುವ ಒಂದು ದೊಡ್ಡ ಗಂಡಾಂತರದಿಂದ ನಾವು ಪಾರಾದಂ
ಎರಡನೆಯದಾಗಿ, ಹಿಂದೂ-ಮುಸ್ಲಿಂ ಹೀಗೆ ಯಾವುದೇ ಕೋಮುವಾದವ
ಹುಂಬರಂತೆ ಯಾವುದೇ ಒಂದು ಜಾತಿಗಾಗಲೀ, ಜನಾಂಗಕ್ಕಾಗಲೀ ಸೀಮಿ
ಗೊಳಿಸದೇ ಇದರ ಹಿಂದಿರುವ ಭೂಮಾಲಿಕರ ಹಾಗೂ ಬಂಡವಾಳಶಾಹಿಗಳ ಹುನ
ಗಳನ್ನು ಬಯಲಿಗೆಳೆಯಬೇಕು ಮತ್ತು ಎಲ್ಲಾ ಬಗೆಯ ಕೋಮುವಾದಿಗಳನ್ನೂ
ನೆಲದ ಕೋಮು ಸಾಮರಸ್ಯ ಪರಂಪರೆಯ ಮೂಲಕವೇ ಎದುರಿಸಬೇ
ಮೂರನೆಯದಾಗಿ, ಹಾಗೂ ಕಡೆಯದಾಗಿ, ನಮ್ಮ ದೇಶಿಜ್ಞಾನ ಮಾದರಿಗಳ ಬೆಳ
ಹಂತ ಹಂತವಾಗಿ ಜಾಗತೀಕರಣವನ್ನು ಎದುರಿಸುವ ತಾಕತ್ತು ಬೆಳೆಸಿಕೊಳ್ಳಬೇ
ಹೀಗಾದಾಗ ಸ್ವಲ್ಪವಾದರೂ ನೆಮ್ಮದಿಯ ಬದುಕು ನಮ್ಮದಾಗಬಹುದು.

ವನಮಾಲಾ ಕಟ್ಟೇಗೌಡರ
'ಮಾತೃಕುಟೀರ', ಪುತ್ತೂರು ಆಸ್ಪತ್ರೆ ಹಿಂಭಾಗ, ಗಾಂಧಿ ಕಾಲನಿ, ಹೊಸಪೇಟೆ, ಬಳ್ಳಾರಿ - ೫೮೩ ೨೦೧

# ‘ಆಧುನಿಕೋತ್ತರ’ ಎಂದರೇನು ?

## ಡಾ॥ ಐಜಾಜ್ ಅಹಮದ್ ಅವರೊಡನೆ ಒಂದು ಸಂದರ್ಶನ

ಸಂದರ್ಶಕರು
ಅನೂರಾಧಾ ಸಿದ್ದಿಕಿ

ಕನ್ನಡ ಅನುವಾದ
ಡಾ॥ ಜೆ. ರಾಮಕೃಷ್ಣ

‘‘ಇನ್ ಥಿಯರಿ’’ ಮೊದಲಾದ ಮೌಲಿಕ ಕೃತಿಗಳ ಕರ್ತೃವಾಗಿ ಡಾ॥ ಐಜಾಜ್ ಅಹಮದ್ ಪ್ರಸಿದ್ಧರು. ಇತಿಹಾಸ ತಜ್ಞ, ಆಧುನಿಕ ತತ್ತ್ವಶಾಸ್ತ್ರದ ಚಿಂತಕ, ಸಮಕಾಲಿನ ರಾಜಕೀಯದ ವಿಶ್ಲೇಷಕ ಮತ್ತು ಸಾಹಿತ್ಯ ವಿಮರ್ಶಕರಾಗಿ ಅಪರೂಪದ ವಿದ್ವಾಂಸರಾದ ಅಹಮದ್ ದೆಹಲಿಯ ನೆಹರು ಪುಸ್ತಕ ಭಂಡಾರದಲ್ಲಿ ಫೆಲೋ ಆಗಿದ್ದರು. ಮುಂಬಯಿ ವಿಶ್ವವಿದ್ಯಾನಿಲಯದ ಅನೂರಾಧಾ ಕಲ್ಹಣ್ ಸಿದ್ದಿಕಿಯವರು ಅವರನ್ನು ಇತ್ತೀಚೆಗೆ ಸಂದರ್ಶಿಸಿ ಹಲವು ವಿಷಯಗಳನ್ನು ಅವರೊಡನೆ ಚರ್ಚಿಸಿದರು. ಅದನ್ನಿಲ್ಲಿ ಪ್ರಸ್ತುತಪಡಿಸಲಾಗಿದೆ.

**ಅನೂರಾಧಾ ಸಿದ್ದಿಕಿ :** ‘‘ಆಧುನಿಕೋತ್ತರ’’ ಎಂಬುದನ್ನು ಸಾಮಾನ್ಯವಾಗಿ ಹೇಗೆ ವ್ಯಾಖ್ಯಾನಿಸಬಹುದೆಂದು ವಿಸ್ತರಿಸುತ್ತೀರಾ ?

**ಐಜಾಜ್ ಅಹಮದ್ :** ಸ್ವಲ್ಪ ಕಷ್ಟ. ಆ ಪದವೇ ಸೂಚಿಸುವಂತೆ ಅದು ಆಧುನಿಕದ ನಂತರ ಬರುವಂಥದು. ಆದರೆ ಅದೇನೆಂದು ಸ್ಪಷ್ಟಗೊಳಿಸಲಾಗಿಲ್ಲ. ಆಧುನಿಕ ಎಂದರೆ ನಾವು ಸಾಮಾನ್ಯವಾಗಿ ಗ್ರಹಿಸುವುದು ಕಲೆ ಮತ್ತು ಸಾಹಿತ್ಯಗಳಲ್ಲಿ ಪ್ರತಿಫಲಿತವಾಗಿರುವ ಕೆಲವು ನಿರ್ದಿಷ್ಟ ದೃಷ್ಟಿಕೋನಗಳು. ಸೆಜ಼ಾನ್‌ನಿಂದ ಹಿಡಿದು ಪಿಕಾಸೊವರೆಗೆ, ಬೋದಲೇರ್‌ನಿಂದ ಹಿಡಿದು ಬೆಕೆಟ್‌ವರೆಗೆ ಎನ್ನೋಣ. ಹಾಗೆ ನೋಡಿದರೆ ಆಧುನಿಕೋತ್ತರವು ಆ ಕ್ಷೇತ್ರಗಳಿಗೆ ಅನ್ವಯವಾಗಬೇಕು. ಆದರೆ ಆಧುನಿಕೋತ್ತರ ಎಂಬುದನ್ನು ಕೆಲವು ತತ್ತ್ವಶಾಸ್ತ್ರೀಯ ಹಾಗೂ ರಾಜಕೀಯ ಪ್ರಮೇಯಗಳಿಗೆ ಅನ್ವಯಿಸಿರುವುದುಂಟು; ಉದಾಹರಣೆಗೆ, ಲ್ಯೋಟಾರ್ಡ್, ಫೂಕೋ, ದರಿದ, ಇತ್ಯಾದಿ. ಆಧುನಿಕೋತ್ತರತೆ ಎಂಬುದು ವಿಶೇಷವಾಗಿ ಈ ಕ್ಷೇತ್ರಗಳಲ್ಲೇ ಹೆಚ್ಚು ಪ್ರಚಲಿತವಾಗಿದೆ. ಲ್ಯೋಟಾರ್ಡ್‌ನ ಮಾತನ್ನು ಗಮನಿಸಿ : ‘‘ಯಾವುದೇ ವಿಜ್ಞಾನದ ಶಾಖೆಯು ತನ್ನ ಸಮರ್ಥನೆಗಾಗಿ ಒಂದು ಸುಸಂಬದ್ಧ ವ್ಯಾಖ್ಯಾನಧಾರೆಯನ್ನು ಹರಿಯಬಿಡಬಹುದು. ಅದನ್ನು ನಾನು ಆಧುನಿಕ ಎನ್ನುತ್ತೇನೆ. ಅದೊಂದು ಮಹತ್ವದ ಸಂಪ್ರಬಂಧಕ್ಕೆ ಆತುಕೊಂಡಿರುವಂತಿರುತ್ತದೆ. ಉದಾಹರಣೆಗೆ, ಅಂತರಾತ್ಮನ ಗತಿತಾರ್ಕಿಕತೆ, ಕಾರ್ಯಾರೂಢ ವ್ಯಕ್ತಿಯ ವಿಮುಕ್ತಿ, ಸಂಪತ್ತಿನ ಸೃಷ್ಟಿ, ಇತ್ಯಾದಿ. ಇದು ಪ್ರತಿಬೋಧಕ್ಕೆ ಸಂಬಂಧಿಸಿದ್ದು.’’ ಹಾಗೆಂದು ಹೇಳಿ, ಕೂಡಲೆ ಒಂದು ಮಾತು ಸೇರಿಸುತ್ತಾನೆ : ‘‘ಅಂತಹ ಸಂಪ್ರಬಂಧಗಳಲ್ಲಿ ನಂಬಿಕೆ ಇರಿಸದಿರುವುದನ್ನು ನಾನು ಆಧುನಿಕೋತ್ತರ ಎನ್ನುತ್ತೇನೆ.’’

ಹಾಗಿದ್ದರೆ ಇಲ್ಲಿ ನಿರಾಕರಿಸಿರುವುದು ಏನನ್ನು? (ಅಂತರಾತ್ಮನ ಗತಿತಾರ್ಕಿಕತೆಯ ಬಗ್ಗೆ ವ್ಯಾಖ್ಯಾನ ನೀಡಿದ) ಹೆಗೆಲ್‌ನನ್ನು. ಆಮೇಲೆ ಕಾಂಟ್ ಮತ್ತು ಮಾರ್ಕ್ಸ್ ಇಬ್ಬರನ್ನು. ಅವರು ವ್ಯಕ್ತಿಯ ವಿಮುಕ್ತಿ ಮತ್ತು ಸಂಪತ್ತಿನ ಸೃಷ್ಟಿ ಬಗ್ಗೆ ಮಾತನಾಡುತ್ತಾರಲ್ಲ, ಅದಕ್ಕಾಗಿ. ತರ್ಕ ಶುದ್ಧತೆ, ಪ್ರತಿಬೋಧ, ಮಾರ್ಕ್ಸ್‌ವಾದ, ಇವೆಲ್ಲಾ ವಿಮುಕ್ತಿಯ ಸಾಧನಗಳಾಗಿ ಬಂದವು. ಅವನ್ನು ನಿರಾಕರಿಸುವುದು ಆಧುನಿಕೋತ್ತರತೆಯ ಪ್ರಮುಖ ವೈಶಿಷ್ಟ್ಯ. ಸ್ವಾತಂತ್ರ್ಯ ಮತ್ತು ತಾರ್ಕಿಕತೆಗಳನ್ನು ಬೆಳೆಸುವ ಆಶ್ವಾಸನೆಯನ್ನು ಪ್ರತಿಬೋಧದ ಹಿನ್ನೆಲೆಯಲ್ಲಿ ನೀಡಲಾಗುತ್ತದೆ. ಆದರೆ ಅದು ಕೇವಲ ಭ್ರಾಮಕವಾದ್ದೆಂದು ಆಧುನಿಕೋತ್ತರತೆಯು ಭಾವಿಸುತ್ತದೆ.

**ಅ.ಸಿ. :** ಚಾರಿತ್ರಿಕವಾಗಿ ಅಥವಾ ಕಾಲಕ್ರಮವಾಗಿ ನೋಡುವುದಾದರೆ ಆಧುನಿಕೋತ್ತರತೆಯ ಮೂಲ ಎಲ್ಲಿದೆ ?

**ಐ.ಅ. :** ಅದೊಂದು ಸಂಕೀರ್ಣವಾದ ಚರಿತ್ರೆ. ಪ್ರತಿಬೋಧದ ವಿರುದ್ಧ ಕಿಡಿಕಾರುವುದು ಪ್ರತಿಬೋಧದಷ್ಟೇ ಹಳೆಯದೆನ್ನಬಹುದು. ವೈಜ್ಞಾನಿಕ ತಾರ್ಕಿಕತೆಗೆ ವಿರುದ್ಧವಾಗಿ ಮತಧರ್ಮವು ನಿಲ್ಲುವುದು, ಮಾನವತೆ ಮತ್ತು ಸಾರ್ವತ್ರಿಕತೆಯ ವಿರುದ್ಧ ಕೋಮುವಾದಿ ಅಥವಾ ವರ್ಣಭೇದದ ಸಿದ್ಧಾಂತಗಳು ನಿಲ್ಲುವುದು, ಇವೆಲ್ಲಾ ಅದರ ಮೂಲ. ಯೂರೋಪಿನಲ್ಲಿ ಈ ಅತಾರ್ಕಿಕತೆಯ ವಂಶಾವಳಿಯೇ ಕಡೆಗೆ ಫ್ಯಾಸಿಸಂಗೆ ಹಾದಿ ಮಾಡಿಕೊಟ್ಟಿತೆಂಬುದನ್ನು ಮರೆಯಬಾರದು. ಈ ನಿಟ್ಟಿನಿಂದ ನೋಡಿದರೆ ಆಧುನಿಕೋತ್ತರವೆಂಬುದು ಹಳೆಯ ಸಂಪ್ರದಾಯದ ಭಾಗವಾದ ತರ್ಕವಿರೋಧ ಮತ್ತು ಶೂನ್ಯವಾದಗಳ ಇತ್ತೀಚಿನ ಸಂತತಿ ಎನ್ನಬಹುದು. ೧೮೭೦ರಿಂದಲೂ ಆಧುನಿಕೋತ್ತರ ಎಂಬ ಪದವು ಪದೇಪದೇ ಬೇರೆಬೇರೆ ಪ್ರಕರಣಗಳಲ್ಲಿ ಬಳಕೆಯಾಗುತ್ತಲೇ ಬಂದಿದೆ. ಸಮಕಾಲೀನ ಸಂದರ್ಭದಲ್ಲಿ ನೋಡುವುದಾದರೆ, ಈ ದೃಷ್ಟಿಕೋನದ ಪ್ರಾದುರ್ಭಾವವನ್ನು ಅಮೆರಿಕಾದ ಸಮಾಜಶಾಸ್ತ್ರಜ್ಞರಾದ ಸಿ. ರೈಟ್ ಮಿಲ್ಸ್, ಡೇನಿಯಲ್ ಬೆಲ್ ಹಾಗೂ ಮಾಧ್ಯಮದ ಸಿದ್ಧಾಂತಿಗಳ ಪೈಕಿ ಮಾರ್ಷಲ್ ಮೆಕ್‌ಲೂಹನ್, ಅರ್ಥಶಾಸ್ತ್ರಜ್ಞ ಗಾಲ್‌ಬ್ರೆತ್, ಮುಂತಾದವರಲ್ಲಿ ಕಾಣಬಹುದು. ೧೯೫೦ರ ದಶಕದಲ್ಲಿ ಇವರೆಲ್ಲಾ ಸಾಮಾನ್ಯವಾಗಿ ಹೂಡಿದ ವಾದದ ಸಾರಾಂಶವನ್ನು ಹೀಗೆ ಗ್ರಹಿಸಬಹುದು : ಉತ್ಪಾದನೆಯಲ್ಲಿ ಸ್ವಯಂಚಾಲಿತ ಯಂತ್ರಗಳಿವೆ, ಮಾಹಿತಿ ತಂತ್ರಜ್ಞಾನವಿದೆ. ಇದರಿಂದಾಗಿ ಹಿಂದಿನ ಔದ್ಯೋಗಿಕ ಸಂದರ್ಭವನ್ನು ಮೀರಿದ ಶ್ರೀಮಂತ ಸಮಾಜ ಉದ್ಭವಿಸಿದೆ, ಅಲ್ಲಿ

ವ್ಯಾಪಕವಾಗಿ ಗ್ರಾಹಕರಿದ್ದಾರೆ. ಈ ಸಂದರ್ಭದಲ್ಲಿ ಉತ್ಪಾದನೆಗಿಂತಲೂ ಹೆಚ್ಚು ಪ್ರಮುಖವಾಗಿರುವುದು ಮಾಹಿತಿ ಮತ್ತು ಗ್ರಾಹಕನ ಕೊಳ್ಳುವಿಕೆ. ಆದ್ದರಿಂದ ಬಂಡವಾಳಗಾರರು ಮತ್ತು ದುಡಿಯುವವರ ನಡುವಿನ ಸಂಘರ್ಷದಲ್ಲಿ ಹಿಂದೆ ಇರುತ್ತಿದ್ದ ರಾಜಕೀಯ ಸೆಣೆಸಾಟ ಈಗಿಲ್ಲ. ಸಾಮಾಜಿಕ ಪ್ರಜ್ಞೆಯನ್ನು ಮೂಡಿಸುವಲ್ಲಿ ಮಾಧ್ಯಮಗಳು ಪರಿಣಾಮಕಾರಿ ಪಾತ್ರವನ್ನು ನಿರ್ವಹಿಸುತ್ತಿವೆ. ಹೀಗಾಗಿ ರಾಜಕೀಯವು, ಅದರಲ್ಲೂ ವಿಶೇಷವಾಗಿ ಸಮಾಜವಾದಿ ರಾಜಕೀಯವು, ಕಳೆಗುಂದಿ, ಆಗೊಮ್ಮೆ ಈಗೊಮ್ಮೆ ಪೇಲವವಾಗಿ ತನ್ನ ಇರುವಿಕೆಯನ್ನು ತೋರ್ಪಡಿಸಿಕೊಳ್ಳಬೇಕಾಗಿದೆ.

೧೯೬೮ರಲ್ಲಿ ಬೃಹತ್ ಸಾರ್ವಜನಿಕ ಚಳುವಳಿಗಳು ಫ್ರಾನ್ಸಿನಲ್ಲಿ ಸೋಲನ್ನುಂಡವು. ಆಗ ಲ್ಯೋಟಾರ್ಡ್, ಕ್ರಿಸ್ತೆವಾ ಹಾಗೂ ನೂತನ ತತ್ತ್ವಜ್ಞಾನಿಗಳೆಂಬ ಹೆಸರನ್ನು ಪಡೆದ ಗುಂಪಿನವರು ಸಮಾಜವಾದಿ ರಾಜಕೀಯವು ಕೃಶವಾಯಿತೆಂಬ ನಿಲುವನ್ನು ತಳೆದರು. ಆವರೆಗೆ ಈ ತತ್ತ್ವಜ್ಞಾನಿಗಳೆಲ್ಲಾ ರಾಜಕೀಯವಾಗಿ ತೀವ್ರಗಾಮಿಗಳಾಗಿದ್ದವರು; ಈಗ ಉದಾರವಾದಿ ಬಂಡವಾಳಶಾಹಿಯೊಡನೆ ಸಂಬಂಧ ಕುದುರಿಸಿಕೊಂಡರಲ್ಲದೆ ಫ್ರಾನ್ಸಿನ ಪ್ರತಿಗಾಮಿಗಳೊಡನೆ ಸೇರಿಕೊಂಡರು.

**ಆ.ಸಿ. :** ಸಮಾಜಶಾಸ್ತ್ರ, ಸಾಂಸ್ಕೃತಿಕ ಅಧ್ಯಯನಗಳು ಹಾಗೂ ಸಾಹಿತ್ಯಕ ಸಿದ್ಧಾಂತಗಳ ಮೇಲೆ ಅದರ ಗಮನಾರ್ಹ ಪ್ರಭಾವ ಹೇಗಿದೆ ? ಮುಂದುವರಿದ ಬಂಡವಾಳಶಾಹಿ ದೇಶಗಳಲ್ಲಿ ಈ ಸಿದ್ಧಾಂತಗಳು ರೂಪುಗೊಳ್ಳುತ್ತಿವೆಯಲ್ಲವೆ ?

**ಐ.ಅ. :** ಪ್ರಭಾವಶಾಲಿಯೇನೋ ಹೌದು. ಅವೇ ಪ್ರತಿಷ್ಠಿತ ಸಿದ್ಧಾಂತಗಳೆಂದರೂ ತಪ್ಪಲ್ಲ. ವಿಶೇಷತಃ ಅಮೆರಿಕಾದಲ್ಲಿ. ಅಮೆರಿಕಾದಲ್ಲಿ ತಮ್ಮ ಪ್ರಭಾವ ಇದೆಯೆಂಬುದರಿಂದಾಗಿಯೇ ಫ್ರಾನ್ಸಿನ ಮಹತ್ವದ ಆಧುನಿಕೋತ್ತರ ಪ್ರತಿಪಾದಕರನೇಕರು ಪ್ರಸಿದ್ಧರಾಗಿದ್ದಾರೆ. ಸಮಾಜಶಾಸ್ತ್ರ ಮತ್ತು ಮಾನವಿಕ ಅಧ್ಯಯನಗಳ ಕ್ಷೇತ್ರದಲ್ಲಿ ಅಮೆರಿಕಾ ಎಷ್ಟರಮಟ್ಟಿನ ಏಕಸ್ವಾಮ್ಯ ಹೊಂದಿದೆಯೆಂದರೆ ಅಲ್ಲಿಯ ಶೈಕ್ಷಣಿಕ ಸಂಸ್ಥೆಗಳಲ್ಲಿ ಯಾವ ಅಂಶಗಳಿಗೆ ಒತ್ತು ಕೊಡಲಾಗುತ್ತದೋ ಅದೇ ಅಧ್ಯಯನದ ದಿಕ್ಕನ್ನು ನಿರ್ಧರಿಸಿಬಿಡುವಂತಾಗಿದೆ. ಫ್ರಾನ್ಸಿನ ಚಿಂತಕರು ಸಹ ಅಮೆರಿಕಾದಲ್ಲಿ ಯಶಸ್ಸು ಕಂಡಾದ ಮೇಲೆ ಫ್ರಾನ್ಸಿನಲ್ಲಿ ಪ್ರಸಿದ್ಧರಾಗುತ್ತಾರೆ !

**ಆ.ಸಿ.:** ಅಭಿವೃದ್ಧಿ ಹೊಂದಿದ ದೇಶಗಳನ್ನು ನೋಡಿ. ಅಲ್ಲಿ ಹಾಗೂ ಇತರೆಡೆಗಳಲ್ಲಿ ಭಾಷೆಯ ಬಳಕೆಯಲ್ಲಿ ಜನಸಾಮಾನ್ಯರು ಏನೋ ಒಂದು ರೀತಿಯ ದಾರಿದ್ರ್ಯ ಅನುಭವಿಸುತ್ತಿರುವಂತೆ ತೋರುತ್ತದೆ. ಹೀಗಿರುವಾಗ ಆಧುನಿಕೋತ್ತರ ಶಾಖೆಯು ಅರ್ಥವಾಗದಂತಹ ಪದಪುಂಜವನ್ನು ತನ್ನ ಭಾಷೆಯಲ್ಲಿ ಬೆಳೆಸಿಕೊಂಡಿದೆ. ಇದೊಂದು ವಿಪರ್ಯಾಸವೆನಿಸುತ್ತದೆ. ಇದಕ್ಕೆ ಮೂಲಕಾರಣ ಏನು ?

**ಐ.ಅ. :** ವಿಶಿಷ್ಟ ಜ್ಞಾನವೊಂದಿದ್ದಾಗ ಅದರ ಸಂವಹನಕ್ಕೆ ಅಸಾಧಾರಣ ಪದಪುಂಜದ ಬಳಕೆ ಬೇಕಾಗುತ್ತದೆ. ವಿಶೇಷ ಕಲಿಕೆಯಿಂದ ಅದನ್ನು ರೂಢಿಮಾಡಿಕೊಳ್ಳಬಹುದು. ಭೌತಶಾಸ್ತ್ರದಂತಹ ವಿಜ್ಞಾನ ವಿಭಾಗದಲ್ಲಿ ಇದು ಸುಲಭವಾಗಿ ತಿಳಿಯುತ್ತದೆ. ಸಮಾಜ ವಿಜ್ಞಾನ ವಿಭಾಗದಲ್ಲಿ ಅರ್ಥಶಾಸ್ತ್ರದಂತಹ ಶಿಸ್ತಿನ ವಲಯದಲ್ಲೂ ತಾಂತ್ರಿಕವಾಗಿ ಇದು ನಿಜ. ಉದಾಹರಣೆಗೆ, ಇಕನಾಮೆಟ್ರಿಕ್ಸ್ ತೆಗೆದುಕೊಳ್ಳಿ. ತರಬೇತಿ ಪಡೆದಿರುವವರಿಗೆ ಮಾತ್ರ ಅದು ಅರ್ಥವಾಗುತ್ತದೆ. ತತ್ತ್ವಶಾಸ್ತ್ರದಲ್ಲೂ ತಾಂತ್ರಿಕ ವಿಭಾಗವಿರಲು ಶಕ್ಯವಿದೆ. ಅದರಿಂದಲೇ ವಿಟ್‌ಗೆನ್‌ಸ್ಟೈನ್‌ನಂಥವರನ್ನು ಎಲ್ಲರೂ ಅರ್ಥಮಾಡಿಕೊಳ್ಳಲಾರರು. ಕ್ಲಿಷ್ಟವಾದ ಭಾಷೆ ಬೇಡವೇ ಬೇಡವೆಂದು ಆಗ್ರಹಿಸುವುದು ನನ್ನ ಉದ್ದೇಶವಲ್ಲ. ಮಾರ್ಕ್ಸ್‌ನ ಗ್ರಂಥ 'ಬಂಡವಾಳ' ಇದೆ. ಅದರ ಆರಂಭಿಕ ಅಧ್ಯಾಯಗಳನ್ನು ಓದಲು ಯತ್ನಿಸಿ. ನಾನು ಹೇಳುತ್ತಿರುವುದು ಆಗ ನಿಮಗೆ ತಿಳಿಯುತ್ತದೆ. ಆದರೆ ಅದೇ ಮಾರ್ಕ್ಸ್ ಬರೆದ ಇತರ ಗ್ರಂಥಗಳಲ್ಲಿ ಕಮ್ಯುನಿಸ್ಟ್ ಪ್ರಣಾಲಿಕೆ ಇದೆ, ಫ್ರಾನ್ಸಿನಲ್ಲಿ ಅಂತರ್ಯುದ್ಧ ಇದೆ. ಅವನ್ನು ಅದೆಷ್ಟು ಸರಳವಾದ ಭಾಷೆಯಲ್ಲಿ ಬರೆದಿದ್ದಾನೆ ನೋಡಿ. ಇದರಿಂದ ನಾನು ತೀರ್ಮಾನಿಸುವುದೇನು ? ಭಾವ ಮತ್ತು ಅರ್ಥ ಕ್ಲಿಷ್ಟವಾಗಿದ್ದಾಗ ಭಾಷೆಯೂ ಕಷ್ಟವಾಗಿರುತ್ತದೆ. ಆದರೆ ಈ ಆಧುನಿಕೋತ್ತರರ ಪದಪುಂಜಗಳಿವೆಯಲ್ಲ, ಅದು ಅನಗತ್ಯವಾದ ಸಂಕೀರ್ಣತೆಯ ಭಾಷೆಯಾಗಿಬಿಟ್ಟಿದೆ. ಹೋಗಲಿ ಎಂದರೆ, ಅದರಲ್ಲಿ ಕ್ಲುಪ್ತತೆಯೂ ಇಲ್ಲ. ವಾಸ್ತವವಾಗಿ ಏನಾಗಿದೆಯೆಂದರೆ ಇಲ್ಲಿ ಪಂಡಿತೋತ್ತಮರು ಬೇರೆ ಪಂಡಿತೋತ್ತಮರಿಗಾಗಿಯೇ ಬರೆಯುತ್ತಿದ್ದಾರೇನೋ ಎನಿಸುತ್ತದೆ. ಇವರೆಲ್ಲಾ ಯಾವುದಾದರೂ ಗುಪ್ತ ಸಂಸ್ಥೆಯ ಒಡನಾಡಿಗಳೆ ? ಜನ ಸಾಮಾನ್ಯರ ಬಹುಭಾಗಕ್ಕೆ ತಲುಪುವಂತಾಗಲು ಯಾವ ಭಾಷೆಯನ್ನು ಬಳಸಬೇಕೋ ಅದನ್ನು ರಾಜಕೀಯ ಬದ್ಧತೆ ಇರುವ ವಿದ್ವಾಂಸರು ಮಾತ್ರ ಪ್ರಭಾವಶಾಲಿಯಾಗಿ ಬಳಸುತ್ತಾರೆ. ಆಧುನಿಕೋತ್ತರರಾದರೋ ಒಂದು ರೀತಿ ವೃತ್ತಿಪರತೆ ಇರುವವರು; ಅವರ ವೃತ್ತಿಯವರಿಗೆ ಬರೆಯುವುದಷ್ಟೇ ಅವರ ಕೆಲಸ. ಅವರ ಪದಪುಂಜ ಯಾವುದಾದರೂ ಪುರೋಹಿತ ವರ್ಗವು ತನ್ನ ಪ್ರಭಾವಳಿ ಕಂಗೊಳಿಸಲು ಬಳಸುವ ಭಾಷೆಯಂತೆ ಆಗಿಬಿಟ್ಟಿದೆ.

**ಆ.ಸಿ. :** ಲಘುವಾದ ಚಿಂತನೆಗೆ ಗಹನತ್ವವನ್ನು ಆರೋಪಿಸುವ ಪ್ರವೃತ್ತಿಯನ್ನು ಆಧುನಿಕೋತ್ತರರು ಬೆಳೆಸಿಕೊಂಡಿದ್ದಾರೆಯೆ ? ಅಥವಾ ಮತಧರ್ಮದ ಜಡ್ಡುತನಕ್ಕೆ ಅವರೇನಾದರೂ ಗಟ್ಟಿತನ ತಂದುಕೊಟ್ಟಿದ್ದಾರೆಯೆ ?

**ಐ.ಅ. :** ನಿಜವಾಗಿ ಹೇಳಬೇಕಾದರೆ ಆಧುನಿಕೋತ್ತರರು ಆಧುನಿಕೋತ್ತರ ಸಮಸ್ಯೆಗಳಿಗೆ ಆಧುನಿಕಪೂರ್ವವನ್ನು ಪರಿಹಾರವಾಗಿ ಕೊಡುತ್ತಾರೆ. ನಾನು 'ಇತಿಹಾಸದಲ್ಲಿ ಆಧುನಿಕೋತ್ತರತೆ' ಎಂಬ ಲೇಖನವನ್ನು ಪ್ರಕಟಿಸಿದ್ದೇನೆ. ಲ್ಯೋಟಾರ್ಡ್ ಮತ್ತು ಫೂಕೋ ಹೇಗೆ ಮತಧರ್ಮ ಮತ್ತು ಸಂಪ್ರದಾಯ ಇತ್ಯಾದಿಗಳಿಗೆ ಮಾರುಹೋಗಿದ್ದಾರೆಂಬುದನ್ನು ನಾನದರಲ್ಲಿ ತೋರಿಸಿಕೊಟ್ಟಿದ್ದೇನೆ. ಏಷ್ಯ ಮತ್ತು ಆಫ್ರಿಕಾ ಸಮಾಜಗಳ ವಿಶ್ಲೇಷಣೆಯಲ್ಲಂತೂ ಇದೇ ತುಂಬಿದೆ. ದರಿದಾ ಹೇಗೆ ಯೆಹೂದಿ ಗೂಢಜ್ಞಾನದಲ್ಲಿ ಆಳವಾಗಿ ತಲ್ಲೀನನಾಗಿದ್ದನೆಂದು ತಿಳಿದೇ ಇದೆ. ತೋರಿಕೆಗೆ ಅವರೆಲ್ಲಾ ಗೊಡ್ಡು ಜಡ್ಡುತನದ ವಿರೋಧಿಗಳೇ; ಆದರೆ ಅವರು ಮಾಡುವುದೇನು ? ಇಡೀ ಆಧುನಿಕತೆಯನ್ನು ಮಹಾ ತಪ್ಪು ಎಂದು ಜರಿಯುವುದು, ಇಡೀ ವಿಜ್ಞಾನವನ್ನು ಸರ್ವಾಧಿಕಾರಿ ಚಿಂತನೆ ಮತ್ತು ಕ್ರಿಯೆಗೆ ಸಾಧನವೆಂದು ಮೂದಲಿಸುವುದು, ತರ್ಕವನ್ನು ಸರ್ವಾಧಿಕಾರಿತ್ವದ ಚಿಹ್ನೆಯೆಂದು ಸಾರುವುದು. ಹೀಗೆ ಮಾಡುವುದರ ಪರಿಣಾಮವೇನು ? ಅತಾರ್ಕಿಕತೆಯ ಮೃಗೀಯ ಮಹಾಪೂರವನ್ನು ಹರಿಯಬಿಡುವುದು, ಅದನ್ನೇ ಪರಂಪರೆ ಎನ್ನುವುದು ಇಲ್ಲವೇ ಪರಂಪರಾಗತ ಜ್ಞಾನ ಎಂದು ಶ್ಲಾಘಿಸುವುದು. ವಿಜ್ಞಾನವನ್ನು ಅ-ವಿಜ್ಞಾನದಿಂದ ಪ್ರತ್ಯೇಕಿಸಲು ಆಧಾರವೇ ಇಲ್ಲವೆಂದಾದರೆ ಜ್ಯೋತಿಷ್ಯವನ್ನು ವಿಜ್ಞಾನವೆಂದು ಘೋಷಿಸಲು ಅಡ್ಡಿ ಏನಿದೆ ? ಹಿಂದುತ್ವವನ್ನು ಮೆರೆಯಬೇಕೆನ್ನುವವರು ಮಾಡುವುದೇ ಅದನ್ನು. ಅಥವಾ ಅಮೆರಿಕಾದ ಕ್ರೈಸ್ತಧರ್ಮೀಯ ಗೊಡ್ಡು ಮತಾಂಧರನ್ನು ನೋಡಿ; ಅವರು ಜೀವಶಾಸ್ತ್ರೀಯ ವಿಕಾಸವಾದದ ಸಿದ್ಧಾಂತದ ಬದಲು ಬೈಬಲ್ಲಿನಲ್ಲಿರುವ ಸೃಷ್ಟಿಯ ಪುರಾಣ ಕತೆಗಳನ್ನು ದೊಡ್ಡದು ಮಾಡುತ್ತಾರೆ.



### ಅನಾವರಣ

ಮಸೀದಿಯ ಮುಂದೆ
ಮೆಕ್ಕೆ ತೆನೆಗಳ ಸುಟ್ಟು
ಹೊಟ್ಟೆ ತುಂಬಿಸಿಕೊಳ್ಳುವ
ಫಾತೀಮಳ ಹರಿದ ಬುರ್ಕಾದಿಂದ
ಹೊರಸೂಸುವ ಬಡತನ
ಹಚ್ಚಿದ ತೇಪೆಗಳು
ಬಿಳಿಚಿಕೊಂಡ ಬಣ್ಣಗಳು
ಕಿತ್ತಿರುವ ಗುಂಡಿಗಳು
ಆವಳ ಬದುಕಿನ ಚಿತ್ರವನ್ನು
ಅನಾವರಣಗೊಳಿಸುತ್ತಿದ್ದವು.

ಕೆ. ಷರೀಫಾ
ಎ.ಪಿ.ಎಂ.ಸಿ., ಹರಿಹರ - ೫೭೭ ೬೦೧

ಅ.ಸಿ. : ಆಧುನಿಕಪೂರ್ವ ಎನ್ನಬಹುದಾದ ದೇಶಗಳ ಬುದ್ಧಿಜೀವಿಗಳು ಆಧುನಿಕೋತ್ತರ ರಥವನ್ನೇರಿ ಸಾಗಲೆಳಸುವುದು ಒಂದು ವಿಪರ್ಯಾಸವೆನಿಸುತ್ತದೆಯೆ ? ಅದೂ ಕೇವಲ ವಿದ್ವತ್ಪ್ರಪಂಚದಲ್ಲಿ ಪಾರಂಗತರೆನಿಸಿಕೊಳ್ಳುವ ಸಂಕುಚಿತ ಉದ್ದೇಶದಿಂದ !

ಐ.ಅ. : ವಿಪರ್ಯಾಸ ಹೌದು, ಆದರೆ ಅದರಲ್ಲಿ ನೀವು ಸೂಚಿಸಿರುವಂತೆ ತಮ್ಮ ಸ್ವಂತದ ವರ್ಚಸ್ಸು ಮತ್ತು ಪುರೋಗಮನ ದೃಷ್ಟಿಯೂ ಇದೆ. ಬೇರೆ ಕೆಲವು ಒತ್ತಡಗಳೂ ಇವೆ. ನಾನಾಗಲೇ ಹೇಳಿದಂತೆ ಫ್ರಾನ್ಸಿನ ಆಧುನಿಕೋತ್ತರತೆಯ ಪ್ರಮುಖಾಂಶಗಳು ಅಮೆರಿಕಾದ ಸಮಾಜ ವಿಜ್ಞಾನಿಗಳಿಂದ ನಿರ್ಧರಿತವಾದುವು. ಫ್ರಾನ್ಸಿನ ಆಧುನಿಕೋತ್ತರತೆಯ ಪ್ರತಿಪಾದಕ ಪ್ರತಿಭೆಗಳು ವಿಶ್ವದಲ್ಲಿ ಪ್ರಸಿದ್ಧರಾಗಬೇಕಾದರೆ ಅವರ ಕೃತಿಗಳು ಭಾಷಾಂತರಗೊಳ್ಳಬೇಕಾಯಿತು. ಅದು ನಡೆದದ್ದೂ ಅಮೆರಿಕಾದಲ್ಲಿ, ಜೊತೆಗೆ ಅವಕ್ಕೆ ಮೆರುಗು ಕಟ್ಟಿ ಭಾಷ್ಯಸಮೇತ ಬೇರೆ ದೇಶಗಳಿಗೆ ಕಳಿಸಲಾಯಿತು. ಅಮೆರಿಕಾದ ಮತ್ತು ಫ್ರಾನ್ಸಿನ ಆಧುನಿಕೋತ್ತರರು ತಾವು ರಾಜಕೀಯ ತೀವ್ರಗಾಮಿಗಳೆಂದು ಹೇಳಿಕೊಳ್ಳುತ್ತಾರೆ; ಆದರೆ ಫ್ರಾನ್ಸಿನ ಕ್ರಾಂತಿಯಿಂದ ಹಿಡಿದು ಬಾಲ್ಶೆವಿಕ್ ಕ್ರಾಂತಿಯವರೆಗೆ ಎಲ್ಲ ಕ್ರಾಂತಿಕಾರಿ ಪರಂಪರೆಯನ್ನೂ ನಿರಾಕರಿಸುತ್ತಾರೆ. ಭಾರತದಲ್ಲಿ ಇದೆಲ್ಲಾ ಪ್ರಾಯೋಗಿಕವಾಗಿ ಅಭಿವ್ಯಕ್ತಿ ಪಡೆಯುತ್ತದೆ. ಆಧುನಿಕೋತ್ತರ ಪದಗುಚ್ಛಗಳನ್ನು ಹೇರಳವಾಗಿ ಬಳಸುತ್ತಾ ರಾಜಕೀಯ ತೀವ್ರಗಾಮಿತ್ವವು ತಮ್ಮದೆಂದು ಅವರು ಘೋಷಿಸಿಕೊಳ್ಳುತ್ತಿರಬಹುದು; ಆದರೆ ವಾಸ್ತವಿಕವಾಗಿ ಯಾವುದೇ ಸಮಾಜವಾದಿ ರಾಜಕೀಯ, ಕಾರ್ಮಿಕ ಸಂಘಟನೆ, ರಾಜಕೀಯ ಪಕ್ಷ, ಇವುಗಳೊಡನೆ ಗುರುತಿಸಿಕೊಳ್ಳದೆ ಉಳಿದುಬಿಡಬಹುದು. ಅಮೆರಿಕಾದಲ್ಲಿ ಆರಂಭವಾದ ಬೌದ್ಧಿಕ ಭೂಷಣ ಲಕ್ಷಣಕ್ಕೆ ಒಂದು ರೀತಿಯ ಯಾಜಮಾನ್ಯ ದಕ್ಕಿದೆ; ಅದನ್ನೇ ಇಲ್ಲಿಯವರು ಪ್ರಚಾರ ಮಾಡುತ್ತಾರೆ. ಅಮೆರಿಕಾದ ಬೌದ್ಧಿಕ ಒಡೆತನಕ್ಕೆ ಮಾನ್ಯತೆ ನೀಡುತ್ತಲೇ ಅದನ್ನು ಸ್ವತಃ ತಮ್ಮಿಂದ ಮರೆ ಮಾಚಿಕೊಳ್ಳಲು ಯತ್ನಿಸುತ್ತಾರೆ ಕೂಡ. ಅವರು ಹೆಸರಿಸುವುದು ಫ್ರಾನ್ಸಿನ ಬುದ್ಧಿಜೀವಿಗಳನ್ನು. ಮತ್ತು ಅವರ ಪದಗುಚ್ಛಗಳ ಭಾಷೆ ಫ್ರೆಂಚ್. ತಾವು ಬಳಸುವ ಕ್ಲಿಷ್ಟ ಪದಗುಚ್ಛಗಳನ್ನು ಬಳಸದವರಿಗಿಂತ ತಾವು ಬೌದ್ಧಿಕವಾಗಿ ಉಚ್ಚಮಟ್ಟದವರೆಂದು ಬೀಗಲು ಸಹ ಇದು ಅನುವು ಮಾಡಿಕೊಡುತ್ತದೆ. ಸಾರಾಂಶವಿಷ್ಟೆ: ತಮ್ಮ ಪುರೋಗಮನದ ಆಶಯವನ್ನು ಸಾಧಿಸಿಕೊಳ್ಳುತ್ತಾ ತಾವು ಬೇರೆಯವರಿಗಿಂತ ಹೆಚ್ಚು ವಿದ್ವತ್ತಿನ ಖನಿಗಳು ಎಂಬ ಒಣಜಂಭವನ್ನು ಈ ಆಧುನಿಕೋತ್ತರ ವಿದ್ವಾಂಸರು ತಳೆಯಲು ಸಾಧ್ಯವಿದೆ.

ಅ.ಸಿ. : ಆಧುನಿಕೋತ್ತರ ಸಿದ್ಧಾಂತಗಳು ಪ್ರಚಾರಕ್ಕೆ ಒಂದು ಅಂತರ್ಗತವಾಗುತ್ತಿರುವ ಸಂದರ್ಭದಲ್ಲಿ ಅಭಿವೃದ್ಧಿ ಹೊಂದುತ್ತಿರುವ ದೇಶಗಳ ವಿದ್ವತ್ ಸಂಸ್ಥೆಗಳು ಆಧುನಿಕೋತ್ತರತೆಯನ್ನು ಹೇಗೆ ಚರ್ಚಿಸಬೇಕೆನ್ನುತ್ತೀರಿ ?

ಐ.ಅ. : ಬೇರೆಡೆಗಳಲ್ಲಿ ಮತ್ತು ಬೇರೆಲ್ಲಾ ಹೇಗೆ ಚರ್ಚಿತವಾಗುತ್ತವೋ ಹಾಗೇ ಇದನ್ನೂ ಚರ್ಚಿಸಬೇಕು. ಅಂದರೆ, ಒಂದು ಚಾರಿತ್ರಿಕ ವಾಸ್ತವ ಸಂಗತಿ ಎಂಬಂತೆ. ಅದಕ್ಕೆ ತನ್ನದೇ ಆದ ಬೌದ್ಧಿಕ ಮತ್ತು ರಾಜಕೀಯ ಆಯಾಮವಿದೆ, ಸಂಕೀರ್ಣ ಇತಿಹಾಸವಿದೆ. ಬೇರೆ ಬೌದ್ಧಿಕ ಮತ್ತು ರಾಜಕೀಯ ಗ್ರಹಿಕೆಗಳನ್ನು ಅದು ಪ್ರಶ್ನಿಸುತ್ತದೆ. ಆಧುನಿಕೋತ್ತರವೆಂಬುದರ ಚರ್ಚೆ ನಿರ್ದಿಷ್ಟ ಪಠ್ಯಗಳ, ಲೇಖಕರ, ಪ್ರತಿಪಾದನೆಗಳ ಮತ್ತು ಪರಿಣಾಮಗಳ ಸಂದರ್ಭದಲ್ಲಿ ನಡೆಯಬೇಕು. ಜ್ಞಾನದ ಸಾಮಾಜಿಕತೆಯನ್ನು ಚರ್ಚಿಸಲು ಒಂದು ಸುಸಂಬದ್ಧ ಪದ್ಧತಿ ಇದೆ. ಹಾಗೆ ಇದನ್ನು ಚರ್ಚೆಗೆ ಗುರಿಪಡಿಸಬೇಕೇ ವಿನಾ ತಾನೇ ಹೇಳಿಕೊಳ್ಳುವ ತನ್ನ ಇತಿಹಾಸ ಮತ್ತು ಉದ್ದೇಶಗಳ ಆಧಾರದಲ್ಲಿ ಅಲ್ಲ. ವಾಸ್ತವಿಕವಾಗಿ ಅದು ಹೇಗೆ ಅಸ್ತಿತ್ವಕ್ಕೆ ಬಂದಿದೆ, ಏನು ಮಾಡುತ್ತದೆ ಎಂಬುದು ಮುಖ್ಯ. ಒಂದು ಉದಾಹರಣೆ ನೋಡಿ : ಫೂಕೋ ಹೇಳುತ್ತಾನೆ, ಎಲ್ಲ ಜ್ಞಾನವೂ ಅಧಿಕಾರದ ಪರಿಣಾಮ ಎಂದು; ಆಧುನಿಕೋತ್ತರತೆಯು ಇದನ್ನು ಗಂಭೀರವಾಗಿ ಪರಿಗಣಿಸುವುದಾದರೆ ಮೊದಲಿಗೆ ಅದು, ಅಂದರೆ ಆಧುನಿಕೋತ್ತರತೆಯು, ಸ್ವತಃ ತಾನು ಯಾವ ಅಧಿಕಾರದ ಪರಿಣಾಮವೆಂಬುದನ್ನು ತಿಳಿಸಿಕೊಡಬೇಕಾಗುತ್ತದೆ. ನಮ್ಮ ಸಮಾಜವು ಔದ್ಯಮಿಕ ಸಮಾಜವಲ್ಲ, ಅಂತಹ ಸಮಾಜಗಳಲ್ಲಿ ಆಧುನಿಕೋತ್ತರತೆಯು ಹೆಚ್ಚು ಅಸಂಗತವಾಗಿ ಕಾಣುತ್ತದೆ. ಶ್ರೀಮಂತ ಸಮಾಜ, ಗ್ರಾಹಕ ಸಮಾಜ, ಮಾಹಿತಿ ಸಮಾಜ, ಔದ್ಯಮಿಕೋತ್ತರ ಸಮಾಜ, ಇಂತಹವುಗಳ ಸಿದ್ಧಾಂತಗಳು ನಮ್ಮ ಸಮಾಜದಲ್ಲಿ ಕುಸಿದುಬೀಳುತ್ತವೆ. ನಮ್ಮ ದೇಶದ ಶೇಕಡ ಹತ್ತರಷ್ಟು ಮಂದಿ ಸಹ ಆ ಬೇರೆ ಸಮಾಜಗಳ ಸವಲತ್ತುಗಳನ್ನು ಅನುಭವಿಸುತ್ತಿಲ್ಲ. ಅನಕ್ಷರತೆ, ಹಸಿವು, ಅನಾರೋಗ್ಯ, ಜಾತಿ, ಮತೀಯ ಪೂರ್ವಗ್ರಹಗಳು, ಎಲ್ಲ ಬಗೆಯ ಅವೈಜ್ಞಾನಿಕತೆ, ಇವೆಲ್ಲಾ ನಮ್ಮ ದೇಶದ ಮೂರನೆಯ ಒಂದು ಭಾಗದಿಂದ ಅರ್ಧಭಾಗದಷ್ಟು ಜನರನ್ನು ಬಾಧಿಸುತ್ತಿರುವ ಪಿಡುಗುಗಳು. ಒಟ್ಟು ಸುಮಾರು ೫೦ ಕೋಟಿ ಹತಭಾಗ್ಯ ಪರಿಸ್ಥಿತಿ ಇದು. ಯೂರೋಪ್ ಮತ್ತು ಉತ್ತರ ಅಮೆರಿಕಾಗಳ ಒಟ್ಟು ಜನಸಂಖ್ಯೆ ಹೆಚ್ಚು ಕಡಿಮೆ ಸಮಾನವಾಗಿದೆ ಇದು.

ಅ.ಸಿ. : ಆಧುನಿಕೋತ್ತರತೆಯ ಉತ್ತರದಾಯಿತ್ವ ಹೇಗಿರುತ್ತದೆ ? ಅಥವಾ ಅದ ಸಮರ್ಥನೆಯಾಗಿ ಏನನ್ನು ಹೇಳಬಹುದು ?

ಐ.ಅ. : ಇದು ಅಂತರ-ಖಂಡಗಳ ಬೌದ್ಧಿಕ ಚಳುವಳಿ. ಅದರಲ್ಲಿ ಬಹಳ ಮಂ ತೊಡಗಿದ್ದಾರೆ. ಅವರಲ್ಲಿ ವಿವಿಧ ಮಾದರಿಯ ದಾರ್ಶನಿಕ ಪರಿಪಕ್ವತೆ ಇದೆ, ಉದಾ ಆಕಾಂಕ್ಷೆಗಳಿವೆ, ಬುದ್ಧಿವಂತಿಕೆ ಇದೆ, ಶೈಕ್ಷಣಿಕ ಶಿಸ್ತು ಇದೆ. ಹಾಗಿರುವಾಗ ಸಹ ವಾಗಿಯೇ ಆಕ್ಷೇಪಾರ್ಹವಾದ ಅಂಶಗಳೊಂದಿಗೆ ಬಹಳಷ್ಟು ಒಳ್ಳೆಯ ಸಂಗತಿಗಳ ಇದ್ದೇ ತೀರಬೇಕು. ಫೂಕೋ ಅವರಂತಹ ವಿದ್ವಾಂಸರಿಂದ ಸ್ವತಃ ನಾನು ಸಹ ಎಷ್ಟೋ ವಿಷಯಗಳನ್ನು ತಿಳಿದುಕೊಂಡಿದ್ದೇನೆ. ಆದರೆ ಎರಡು ಅಂಶಗಳನ್ನು ಸೇರಿ ಬಯಸುತ್ತೇನೆ. ಮೊದಲನೆಯದಾಗಿ, ಆಧುನಿಕೋತ್ತರರಲ್ಲಿ ಕೆಲವರಲ್ಲಿ ಕಂಡ ಬರುವ ಮೇರು ವಿಷಯಗಳು ಆಧುನಿಕೋತ್ತರತೆಯಿಂದ ಬಂದವಲ್ಲ; ಅ ಬೇರಿನ್ನೆಲ್ಲಿಂದಲೋ ಬಂದಂಥವು. ಉದಾಹರಣೆಗೆ, ಆಧುನಿಕೋತ್ತರ ಸ್ತ್ರೀವಾ ಎಂಬುದೊಂದು ಖಂಡಿತ ಇದೆ; ಆದರೆ ಅದರಲ್ಲಿನ ಗುಣಾಂಶವು ಸ್ತ್ರೀವಾದದಿಂ ಬಂದದ್ದೇ ಹೊರತು ಆಧುನಿಕೋತ್ತರತೆಯ ಕೊಡುಗೆಯಲ್ಲ. ಎರಡನೆಯದಾಗಿ ಫುಕೋನಂಥವರು ಪ್ರಕಟಿಸಿರುವ ವಿಶಿಷ್ಟ ಚರಿತ್ರೆ, ಅವಲೋಕನ, ಇವುಗಳಿಂ ಕಲಿಯಬಹುದಾದ್ದು ಸಾಕಷ್ಟಿದೆ; ಆದರೆ ಆತನ ತಾತ್ವಿಕ ಮತ್ತು ರಾಜಕೀಯ ಮೂ ಆಶಯಗಳಿಂದ ಇವನ್ನು ಪ್ರತ್ಯೇಕಿಸಿ ನೋಡಬೇಕು. ಆ ಆಶಯಗಳು ಎಲ್ಲಿಂದಲೋ ಕಡ ತಂದಂಥವು ಇಲ್ಲವೇ ಸಮಸ್ಯಾತ್ಮಕವಾದವು.

ಅ.ಸಿ. : ಆಧುನಿಕೋತ್ತರರು ಮತ್ತು ಎಡ ವಿಚಾರಧಾರೆಯವರು, ಇವರ ನಡು ಒಂದು ಸಂವಾದದ ಅಗತ್ಯವಿದೆಯೆಂಬುದನ್ನು ನೀವು ಒಪ್ಪುತ್ತೀರಾ ?

ಐ.ಅ. : ಪ್ರಜಾಪ್ರಭುತ್ವಾತ್ಮಕ ಸಮಾಜ ಮತ್ತು ವಿಮರ್ಶಾತ್ಮಕ ಬೌದ್ಧಿಕತೆ, ಇವುಗ ಒಂದು ಸಲ್ಲಕ್ಷಣ ಸಂವಾದ. ಆ ಅರ್ಥದಲ್ಲಿ ಎಡ ವಿಚಾರಧಾರೆಯವರ ಎಲ್ಲರೊಡನೆಯೂ ಸಂವಾದ ನಡೆಸಬೇಕು, ತೀವ್ರ ಪ್ರತಿಗಾಮಿಗಳನ್ನು ಮಾತ್ರ ಹೊರತುಪಡಿಸಿ. ನನಗೆ ತಿಳಿದಿರುವಂತೆ ಭಾರತದಲ್ಲಿ ಎಷ್ಟೋ ಮಂದಿ ದ್ವಿಧಾಭಾವದ ವರಿದ್ದಾರೆ : ಒಂದು ಕಡೆ ಅವರಿಗೆ ಆಧುನಿಕೋತ್ತರತೆಯ ಬೌದ್ಧಿಕ ಬೆಡಗಿನ ಆಕರ್ಷಣ ಇದೆ ಮತ್ತು ಇನ್ನೊಂದು ಕಡೆ ತಳಮಟ್ಟದಿಂದ ಉದ್ಭವಿಸುವ ಜನಸಮುದಾಯದ ರಾಜಕೀಯ ಹೋರಾಟದಲ್ಲಿ ಆಸಕ್ತಿ ಇದೆ. ಅಂಥವರನೇಕರನ್ನು ನಾನು ಭೇಟಿ ಯಾಗಿದ್ದೇನೆ. ಅವರ ಮಾತಿನಲ್ಲಿ ಪದೇಪದೇ ಅಸಂಬದ್ಧತೆ ಇಣುಕುತ್ತಿರುತ್ತದೆ; ಆದರ ತಮ್ಮ ಸ್ಥಳೀಯ ಜವಾಬ್ದಾರಿಗಳ ನಿರ್ವಹಣೆಯಲ್ಲಿ ಅವರು ಅಚ್ಚುಕಟ್ಟಾಗಿ ಕೆಲಸ ಮಾಡುತ್ತಾರೆ. ಅಂಥವರ ಬಗ್ಗೆ ನಾವು ಸಹಾನುಭೂತಿ ತಳೆಯಬೇಕು, ಸಹಕಾರ ಸಾಧ್ ವಿದ್ದಾಗೆಲ್ಲಾ ಅವರೊಡನೆ ಸಹಕರಿಸಬೇಕು. ಯಾವುದೋ ಒಂದು ನಿರ್ದಿಷ್ ಸಂದರ್ಭದಲ್ಲಿ ಸಹಕಾರ ಸಾಧ್ಯವಾಗದಿದ್ದರೂ ಅವರಿಗಾಗಿ ಸದಾ ನಾವು ಬಾಗಿಲು ತೆರೆದಿಟ್ಟಿರಬೇಕು. ಎಡ ವಿಚಾರಧಾರೆಯ ದೃಷ್ಟಿಯಿಂದ ಬೌದ್ಧಿಕವಾಗಿ ದಾರಿ ತಪ್ಪಿರುವ ವರೆಂದು ಕೆಲವರನ್ನು ಗುರುತಿಸುವುದೇ ಬೇರೆ, ಕಾರ್ಯಕ್ರಮದ ದೃಷ್ಟಿಯಿಂದ ಎಡ- ವಿರೋಧಿ ಮತ್ತು ಪ್ರತಿಗಾಮಿ-ಪರ ಎಂದು ಗುರುತಿಸುವುದೇ ಬೇರೆ. ಅವರಿಬ್ಬರನ್ನೂ ಪ್ರತ್ಯೇಕಿಸಿ ನೋಡಬೇಕು. ನಮ್ಮ ಮುಂದೆ ಅಗಾಧವಾದ ಸವಾಲುಗಳಿವೆ : ಸಾಮ್ರಾಜ್ ಶಾಹಿ ವಿರೋಧ, ಕೋಮುವಾದದ ವಿರೋಧ, ಜಾತಿ ವಿರೋಧ, ಇತ್ಯಾದಿ. ಜೊತೆಗೆ ಮಹಿಳಾ ವಿಮೋಚನೆಯ ಕೆಲಸವಿದೆ, ದುಡಿಯುವ ವರ್ಗದ ವಿಮೋಚನೆಯ ಪ್ರಶ್ ಇದೆ. ಇದಕ್ಕೆಲ್ಲಾ ನಾವು ಐಕ್ಯತೆ ಸಾಧ್ಯವಿರುವ ಕಡೆಗಳಲ್ಲೆಲ್ಲಾ ಅದನ್ನು ಸಾಧಿಸಬೇಕು. ಅ ಐಕ್ಯತೆ ಅಲ್ಪಕಾಲೀನವಾದರೂ ಸರಿ, ಸ್ಥಳೀಯವಾದರೂ ಸರಿ, ಸೀಮಿತವಾದದ್ದಾದರೂ ಸರಿ; ನಾವದನ್ನು ಸಾಧಿಸಬೇಕು. ತರ್ಕದ ಮೂಲಭೂತ ಅಭಿವ್ಯಕ್ತಿಯಾಗುವುದು ಸಂವಾದದಲ್ಲಿ. ಆದ್ದರಿಂದ ಎಡ ವಿಚಾರಧಾರೆಯವರು ತರ್ಕವನ್ನು ಸ್ವಾಗತಿಸಬೇಕು – ಚಿಂತನೆಯಲ್ಲಿ ಹಾಗೂ ಕ್ರಿಯೆಯಲ್ಲಿ.

(ಸೌಜನ್ಯ : ಟೀಚರ್ಸ್ ಆಫ್ ದಿ ವರ್ಲ್ಡ್, ಸಂಪುಟ ೫, ಸಂಚಿಕೆ ೪)

ಕನ್ನಡಕ್ಕೆ : ಡಾ॥ ಜಿ. ರಾಮಕೃಷ್ಣ

# ಕೌತುಕದ ಕೌದಿ

ಮನೆಯಲ್ಲಿ ಉಟ್ಟು ಬಿಟ್ಟ ಸೀರೆ, ಧೋತರ, ಅಂಗಿ, ಚಡ್ಡಿ ಮತ್ತು ಇತರ ಉಪಯೋಗಕ್ಕಾಗಿ ಉಪಯೋಗಿಸಿದ ಬಟ್ಟೆಗಳ ಗಂಟು ಸದಾಕಾಲ ಮನೆಯ ನಾಗೊಂದಿಯ ಮೇಲಿರುತ್ತಿತ್ತು. ಕಾಲದಿಂದ ಕಾಲಕ್ಕೆ ಅದು ದೊಡ್ಡದಾಗುತ್ತಾ ಬಂದಂತೆಲ್ಲಾ ಅದನ್ನು ಕೆಳಗಿಳಿಸಿಕೊಂಡು ಕೌದಿ ತಯಾರಿಸಲು ಅಜ್ಜಿ ಕೊಡಿಹಾಳದ ಬುಡಬುಡಿಕೆ ಹೆಣ್ಣುಮಕ್ಕಳಿಗೆ ಕೊಡುತ್ತಿದ್ದುದು ನೆನಪು. ಅದು ಒಂದು ರೀತಿ ಒಂಭತ್ತು ತಿಂಗಳು ಹೊತ್ತು ದಿನದೊಳಗೆ ಬಿದ್ದ ಮೇಲೆ ಹೆರಿಗೆ ಆಗುವ ಬಾಣಂತಿತನದ ತರಹ ಈ ಕ್ರಿಯೆ ನಡೆಯುತ್ತಿತ್ತು. ಕೂಡಿಟ್ಟ ಬಟ್ಟೆಯನ್ನೆಲ್ಲ ಕೌದಿ ಹೊಲಿಯುವವರಿಗೆ ಕೊಟ್ಟ ಮೇಲೆ ಮೈಭಾರವನ್ನು ಹೆರಿಗೆ ಮೂಲಕ ಇಳಿಸಿಕೊಂಡ ಬಾಣಂತಿಯಂತೆ ನಾಗೊಂದಿಗೆ ಕಾಣುತ್ತಿತ್ತು. ಮತ್ತೆ ಮನೆಯಲ್ಲಿ ಉಟ್ಟ ಬಟ್ಟೆಗಳು ಜಾಸ್ತಿಯಾದಂತೆ ಆ ಗಂಟು ಪುನಃ ಪ್ರತ್ಯಕ್ಷವಾಗುತ್ತಿತ್ತು.

ಕೌದಿಯು ನನ್ನ ಬಾಲ್ಯದೊಂದಿಗೆ ಬೆಸೆದುಕೊಂಡಿದ್ದ ಕೆಲವೇ ಕೆಲವು ಮರೆಯಲಾಗದ ವಸ್ತುಗಳಲ್ಲಿ ಒಂದು. ಈಜು ಹೊಡೆಯಲು ಬಾವಿಗೆ ಧುಮುಕುತ್ತಿದ್ದುದು, ಅಜ್ಜಿ ಮತ್ತು ಅವ್ವ ಹೇಳುವ ಜಾನಪದ ಕತೆಯನ್ನು ರಾತ್ರಿಯಿಡೀ ಬಿಟ್ಟಕಣ್ಣು ಬಿಟ್ಟಂತೆ ತದೇಕ ಚಿತ್ತದಿಂದ ಆಲಿಸುತ್ತಿದ್ದುದು, ಬುಗರಿ, ಚಿನ್ನಿದಾಂಡು, ಗೋಲಿ ಗುಂಡುಗಳು ಮತ್ತು ನೆನಪಿಸಿಕೊಂಡರೆ ಬಾಯಲ್ಲಿ ನೀರು ಬರುವಂತಹ ಕಟಕ್ ರೊಟ್ಟಿ, ಪುಂಡಿಪಲ್ಲೆ, ಖಾರಬ್ಯಾಳಿ, ಮಸಾಲಿಖಾರ, ಉಳ್ಳಾಗಡ್ಡಿ, ಒಂದೇ-ಎರಡೇ ಪಟ್ಟಿ ಬೆಳೆಯುತ್ತಲೇ ಹೋಗುವದು. ಇವತ್ತಿಗೂ ಕಟಕ್ ರೊಟ್ಟಿ, ಖಾರಪುಡಿ, ಕುಸುಬಿ ಎಣ್ಣೆ ಮತ್ತು ಉಳ್ಳಾಗಡ್ಡಿ ನೆನಪಾದರೆ ಬಾಯಲ್ಲಿ ನೀರೂರುತ್ತದೆ. ಪಂಚತಾರಾ ಹೋಟೆಲ್‌ನ ಕಾಂಟಿನೆಂಟಲ್ ಫುಡ್ ಕೂಡ ಸಪ್ಪೆ ಎನಿಸುತ್ತದೆ. ಬಾಲ್ಯದ ದಿನಗಳಲ್ಲಿ ಕಂಡುಂಡು ಅನುಭವಿಸಿದ ವಸ್ತುಗಳ ಬಗ್ಗೆ ಒಮ್ಮೆ ಮೆಲುಕು ಹಾಕಿದಾಗ ನಮ್ಮ ದಿನನಿತ್ಯದ ಬಹು ಸಮಯದ ಸಂಗಾತಿ ಕೌದಿಯದು. ತುಂಬಾ ವಿಸ್ಮಯದ ಒಡನಾಟ. ಸಂಜೆಯಾಗುತ್ತಲೇ ದಣಿವಾದ ದೇಹಕ್ಕೆ ಹಾಸಿಗೆ ಮತ್ತು ಮೇಲುಹೊದಿಕೆಯಾಗುತ್ತಿದ್ದ ಕೌದಿಯು ದಣಿದ ದೇಹಕ್ಕೆ ಮೆತ್ತನೆ ಮಲಗುವ ಅನುಭವ ನೀಡುವುದಲ್ಲದೆ, ಕಣ್ಣುರೆಪ್ಪೆ ಮುಚ್ಚುವುದೊಂದೇ ತಡ ಗಾಢ ನಿದ್ದೆಯೊಂದಿಗೆ ಅರಳುತ್ತಿದ್ದ ಚಿತ್ರ- ವಿಚಿತ್ರ ಕನಸುಗಳನ್ನು ಹೊತ್ತುಕೊಂಡು ಬರುತ್ತಿದ್ದ ಟೂರಿಂಗ ಟಾಕೀಜಿನಂತೆ ಅದು ಗೋಚರಿಸುತ್ತಿತ್ತು. ಮೈಮೇಲೆ ಕೌದಿಯನ್ನು ಹೊದ್ದೊಡನೆ ಒಳಗೆ ಕತ್ತಲಾವರಿಸಿದಂತೆ ದಣಿವಾದ ದೇಹವು ನಿದ್ರೆಯನ್ನರಸುತ್ತಿತ್ತು. ಯಾವಾಗ ನಿದ್ರೆ ಹತ್ತುತ್ತಿತ್ತೊ ಗೊತ್ತಾಗುತ್ತಿರಲಿಲ್ಲ. ಆದರೆ ರಾತ್ರಿ ಮಾತ್ರ ಕನಸುಗಳ ಲೋಕದಲ್ಲಿ ವಿಹರಿಸಿದಂತೆ ಹೊಸದೊಂದು ಪ್ರಪಂಚ ತೆರೆದುಕೊಳ್ಳುತ್ತಿತ್ತು. ಅದೊಂದು ರೋಮಾಂಚಕ ಅನುಭವ. ಅದರೊಂದಿಗೆ ಕೆಲವು ಬಾರಿ ಕೆಟ್ಟ ಕನಸು ಬಿದ್ದು ಎಚ್ಚೆತ್ತುಕೊಂಡು ಕಣ್ಣುಬಿಟ್ಟರೆ ಕತ್ತಲೆಯಲ್ಲಿ ಹೊದ್ದ ಕೌದಿಯು ಆಸರೆಯ ಅಭಯಹಸ್ತವನ್ನು ನೀಡುತ್ತಿತ್ತು. ಮತ್ತೆ ಸಮಾಧಾನದ ನಿಟ್ಟುಸಿರು ಬಿಟ್ಟು ಕೌದಿಯನ್ನು ಮುಖದ ಮೇಲೆಳೆದುಕೊಂಡು ಮಲಗುತ್ತಿದ್ದೆವು.

ಕೌದಿಯು ಸಾಮಾನ್ಯ ಜನರ ಲಕ್ಷುರಿಯಸ್ ಹಾಸಿಗೆ-ಹೊದಿಕೆಯಾಗಿತ್ತು. ನಮ್ಮ ಕೇರಿಯಲ್ಲಿ ಬಹುತೇಕ ಜನ ಕೌದಿಯನ್ನು ಉಪಯೋಗಿಸುತ್ತಿದ್ದರು. ಉಟ್ಟು ಬಿಟ್ಟ ಬಟ್ಟೆ ಮತ್ತು ಹೊಸ ಚಿಂದಿಯ ಬಟ್ಟೆಗಳನ್ನು ಹೊಂದಿಸಿಟ್ಟುಕೊಂಡು ಕೌದಿಯನ್ನು ಕೊಡಿಹಾಳದ ಬುಡಬುಡಿಕೆ ಹೆಂಗಸರಿಂದ ಹೊಲಿಸುವುದು ವಾಡಿಕೆಯಾಗಿತ್ತು. ಪ್ರತಿವರ್ಷ ನಿಗದಿತ ತಿಂಗಳು ಗಳಲ್ಲಿ ಬರುತ್ತಿದ್ದ ಬುಡಬುಡಿಕೆಯವರು ವಡ್ಡರ ಓಣಿಯ ದುರ್ಗಮ್ಮನ ದೇವಸ್ಥಾನದಲ್ಲಿ ಬಿಡಾರ ಹೂಡಿರುತ್ತಿದ್ದರು. ಮೊದಮೊದಲು ಒಂಟೆತ್ತಿನ ಬಂಡಿಯಲ್ಲಿ ಬರುತ್ತಿದ್ದ ಅವರು ತದನಂತರ ಹುನಗುಂದದಿಂದ ಕರಡಿಗೆ ಬಸ್‌ಗಳು ಓಡಾಡಲು ಪ್ರಾರಂಭಿಸಿದ ನಂತರ ಬಂಡಿಯನ್ನು ತರುವದು ನಿಲ್ಲಿಸಿದರು. ತಿಂಗಳುಗಟ್ಟಲೆ ಬಿಡಾರ ಹೂಡಿರುತ್ತಿದ್ದ ಬುಡಬುಡಿಕೆ ಹೆಂಗಸರನ್ನು ಹುಡುಕಿಕೊಂಡು ಹೋಗುತ್ತಿದ್ದ ನಮ್ಮ ಅಜ್ಜಿ ಅವರು ಮನೆಗೆ ಬಂದು ಬಳಸಿದ ಬಟ್ಟೆ ಗಂಟು ಒಯ್ಯುವವರೆಗೆ ದುಂಬಾಲು ಬಿದ್ದಿರುತ್ತಿದ್ದಳು. ತಿಂಗಳೋ ಒಂದೂವರೆ ತಿಂಗಳೋ ಅವರು ಗುಡಿಯ ಹತ್ತಿರವಿರುತ್ತಿದ್ದುದರಿಂದ ಕೌದಿ ಹೊಲಿಸುವವರ ಒಂದು ದಂಡೇ ಅವರ ಬರುವಿಕೆಗಾಗಿ ಕಾಯುತ್ತಿತ್ತು. ಬಿಡಾರ ಹೂಡಿದ ದಿವಸದಿಂದಲೇ ಕೌದಿ ಹೊಲಿಸುವವರು ದುಂಬಾಲುಬಿದ್ದು ಅದನ್ನು ಹೊಲಿಯುವ ಹೆಂಗಸರನ್ನು ಮನೆಗೆ ಕರೆದೊಯ್ಯುತ್ತಿದ್ದರು. ಮೊದಮೊದಲು ಈ ರೀತಿ ನಾಮುಂದು-ತಾಮುಂದು ಎಂದು ಸ್ಪರ್ಧಿಸುತ್ತಿದ್ದವರ ಸಂಖ್ಯೆ ಕ್ರಮೇಣ ಇಳಿಮುಖವಾಗುತ್ತಿತ್ತು. ಆ ನಂತರ ಕೌದಿ ಹೊಲಿಯುವವರೆ ಮನೆ ಮನೆಗೆ ಹೋಗಿ ಕೌದಿ ಹೊಲಿಸುವವರಿಗಾಗಿ ಬೇಟೆಯಾಡುತ್ತಿದ್ದುದುಂಟು. ಕೌದಿ ಹೊಲಿಯುವ ಗಂಟು ನಾಗೊಂದಿಯಿಂದ ಕೆಳಗಿಸಿಳಿ ಕೊಡುವಾಗ ಪ್ರತಿಯೊಂದು ಅರಿವೆಯನ್ನು ಮತ್ತೊಮ್ಮೆ ಪರಿಶೀಲಿಸಿ ಕೊಡಲಾಗುತ್ತಿತ್ತು. ಅದು ಒಂದು ರೀತಿ ಇದ್ದಬದ್ದ ಬಟ್ಟೆಗಳ ಉಪಯೋಗ, ಯೋಗ್ಯತೆ ಮತ್ತು ಅವು ನಿರುಪಯುಕ್ತವೋ, ಉಪಯುಕ್ತವೋ ? ಎನ್ನುವ ಬಗ್ಗೆ ವಿಮರ್ಶೆ, ಪರಾಮರ್ಶೆ ಮತ್ತು ವಾರ್ಷಿಕ ಆಡಿಟಿಂಗ್ ರೀತಿ ನಡೆಯುತ್ತಿತ್ತು. ಮನೆಯಲ್ಲಿ ಎಲ್ಲರೂ ಹಾಜರಿದ್ದು, ಗಂಟಿನಲ್ಲಿ ಕೂಡಿಟ್ಟ ಯಾವುದಾದರೂ ಬಟ್ಟೆ ಮರು ಉಪಯೋಗಕ್ಕೆ ಬರುವುದೋ ಹೇಗೆಂದು ಪುನರ್‌ಪರಿಶೀಲಿಸಿ





## ರಂಗೋಲಿ

ನಲ್ಲ
ಏನಿದು
ವಿಚಿತ್ರ !
ದಿನಾಲು
ಅದೇ
ಚಿತ್ರ
ನಲ್ಲಾ
ಹಳೆಯದಾದರೇನು
ಬಣ್ಣ
ನವನವೀನ
ಅಲ್ಲವೆ ?
ಎಂದಳು.

ಎಸ್. ಬಿ. ಜೋಗುರ
ಸಮಾಜಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಕಾಲೇಜು, ಹಿರೇಕೆರೂರು, ಹಾವೇರಿ ಜಿಲ್ಲೆ - ೫೮೧ ೧೧೧

ಕೊನೆಗೆ ಕೌದಿಗಾಗಿ ಬಟ್ಟೆ ಕೊಡಲಾಗುತ್ತಿತ್ತು. ನಾನು ಒಂದೆರಡು ಬಾರಿ ಉಪಯೋಗಕ್ಕೆ ಬಾರದ್ದೆಂದು ಅಜ್ಜಿ ಗಂಟಿನಲ್ಲಿ ಕಟ್ಟಿಟ್ಟ ಅಂಗಿ ಚೆಡ್ಡಿಯನ್ನು ಮತ್ತೊಮ್ಮೆ ಹಾಕಿಕೊಂಡು ನೋಡಿ ಇನ್ನೂ ಉಪಯೋಗಿಸಬಹುದೆಂದು ತೀರ್ಮಾನಿಸಿ ತೆಗೆದುಕೊಂಡಿದ್ದು ನೆನಪು. ಕೌದಿ ಹೊಲಿಯುವುದಕ್ಕಾಗಿ ಸಿದ್ಧಪಡಿಸಿದ ಗಂಟನ್ನು ಬುಡುಬುಡಿಕೆ ಹೆಂಗಸರ ಕೈಗೆ ಕೊಡುವುದಕ್ಕಿಂತ ಮುಂಚೆ ಅವರಿಗೆ ಭಾಜ ಕೊಡುತ್ತಿದ್ದ ನೆನಪು ಇನ್ನೂ ಮಾಸಿಲ್ಲ. ಯಾವುದೇ ಕೆಲಸಕ್ಕಾಗಿ ನೀಡುವ ಅಡ್ವಾನ್ಸ್ ರೀತಿಯಂತಿರುತ್ತಿದ್ದ ಭಾಜಕ್ಕೆ ಪ್ರತಿಯಾಗಿ ಅವರು ಕಟ್ಟುನಿಟ್ಟಾಗಿ ಹೇಳಿದ ದಿವಸದಂದೋ ಇಲ್ಲವೇ ಒಂದೆರಡು ದಿವಸ ತಡಮಾಡಿಯೋ ಕೌದಿ ಸಿದ್ಧಪಡಿಸಿ ಹಿಂತಿರುಗಿಸುತ್ತಿದ್ದರು. ಕೌದಿ ಸಿದ್ಧಗೊಂಡು ಬಂದಾಗ ಯಾರ್‍ಯಾರ ಬಟ್ಟೆಯನ್ನು ಯಾವ ರೀತಿ ಉಪಯೋಗಿಸಿದ್ದಾರೆ ಎನ್ನುವ ಸಂಭ್ರಮ ಎಲ್ಲರಲ್ಲೂ ಇರುತ್ತಿತ್ತು. ಹಾಸ್ಟೆಲ್‌ನಲ್ಲಿ ಕೊಡುತ್ತಿದ್ದ ಖಾಕಿ ಹಾಫ್‌ಪ್ಯಾಂಟ್ ಮತ್ತು ಖಾದಿ ಅಂಗಿಗಳು ಗಟ್ಟಿಮುಟ್ಟಾಗಿರುತ್ತಿದ್ದರಿಂದ ಅಲ್ಲಲ್ಲಿ ಅವುಗಳನ್ನು ತೇಪಿಹಚ್ಚಿ ಹೊಲಿಯಲಾಗಿರುತ್ತಿದ್ದು ನನ್ನ ಸಂತೋಷಕ್ಕೆ ಪಾರವೇ ಇರುತ್ತಿರಲಿಲ್ಲ. ಆಗಾಗ ಹಬ್ಬಗಳಲ್ಲಿ ಹೊಲಿಸುತ್ತಿದ್ದ ಬಣ್ಣದ ಬಟ್ಟೆಯ ತುಣುಕುಗಳು ಅಲ್ಲಲ್ಲಿ ರಾರಾಜಿಸುತ್ತಿದ್ದವು.

ಕೌದಿಯನ್ನು ತುಂಬಾ ಜಾಗರೂಕತೆ ಮತ್ತು ನಾಜೂಕಿನಿಂದ ತಯಾರಿಸುತ್ತಾರೆ. ಯಾವುದೇ ಒಂದು ವಸ್ತು/ಕಟ್ಟಡ ತಯಾರಿಸುವಾಗ ಕಟ್ಟುನಿಟ್ಟಾಗಿ ಪಾಲಿಸಬೇಕಾದ ಮೂಲಭೂತ ನಿಯಮಗಳು ಹೇಗಿರುತ್ತದೆಯೋ ಹಾಗೆಯೇ ಕೌದಿ ತಯಾರಿಕೆಗೂ ಒಂದು ಆಕಾರ/ವಿನ್ಯಾಸವಿರುತ್ತದೆ. ಸಾಮಾನ್ಯವಾಗಿ ಐದು ಪದರು ಮತ್ತು ಮೂರು ಪದರುಗಳ ಕೌದಿಯನ್ನು ಕೌಶಲ್ಯದಿಂದ ತಯಾರಿಸುವುದುಂಟು. ಪದರುಗಳನ್ನು ವಿವಿಧ ನಮೂನೆಯ ಬಟ್ಟೆಯಿಂದ ದೊಡ್ಡದೊಡ್ಡ ಕೈ ಹೊಲಿಗೆಯನ್ನು ಹಾಕಿ ಸಿದ್ಧಪಡಿಸಿಕೊಳ್ಳಲಾಗುತ್ತದೆ.

ಮೊದಲನೇ ಪದರಿನಲ್ಲಿ ಎಲ್ಲೂ ಹರಿಯದ ಗಟ್ಟಿಮುಟ್ಟಾದ ಸೀರೆಗಳನ್ನು ಉಪಯೋಗಿಸುತ್ತಾರೆ. ನಮ್ಮ ಕಡೆಯಲ್ಲೆಲ್ಲ ನಮ್ಮ ಅಜ್ಜಿ, ಅವ್ವ, ಚಿಕ್ಕವ್ವ, ದೊಡ್ಡವ್ವ, ಅತ್ತೆಯಂದಿರು ಉಪಯೋಗಿಸುತ್ತಿದ್ದುದು ಇಳಕಲ್ಲ ಸೀರೆಗಳು. ಬಹುತೇಕ ಗಾಡದಡಿ, ಚಿಕ್ಕಿ ಪರಾಸಪೇಟಿ, ಜರಿದಡಿಯ ಆಟುವಾರಿ ಸೀರೆ ಉಪಯೋಗಿಸುತ್ತಿದ್ದುದರಿಂದ ಮತ್ತು ಆ ಸೀರೆಗಳಿಗೆ ಉಪಯೋಗಿಸಿದ ಬಣ್ಣಗಳು ಯಾವ ಕಾರಣಕ್ಕೂ ಕುಂದಾಗುತ್ತಿರಲಿಲ್ಲ. ಆ ಕಾರಣದಿಂದ ಅವುಗಳನ್ನು ಮೇಲ್ಪದರಕ್ಕೆ ಉಪಯೋಗಿಸುತ್ತಿದ್ದರು. ಎರಡನೇ ಪದರಿನಲ್ಲಿ ಅಲ್ಲಲ್ಲಿ ಹರಿದ ಸೀರೆ ಮತ್ತು ಧೋತರ ಉಪಯೋಗಿಸುತ್ತಿದ್ದರು. ಮೂರನೇ ಪದರಿನಲ್ಲಿ ಅದು ಮೂರು ಪದರಿನ ಕೌದಿಯಾದರೆ ಗಟ್ಟಿಮುಟ್ಟಾದ ಬಣ್ಣ ಬಣ್ಣ ತುಂಡು ಬಟ್ಟೆಗಳನ್ನು ತೇಪೆ ಹಚ್ಚಿ ಚೆಂದ ಕಾಣುವಂತೆ ಮಾಡುತ್ತಿದ್ದುದು ವಾಡಿಕೆ. ಈ ಚಿಕ್ಕಪುಟ್ಟ ತುಂಡು ಹಚ್ಚಿ ಹೊಲಿಯುವದರಲ್ಲಿಯೇ ಕೌದಿ ಹೊಲಿಯುವಾಕೆಯ ಕ್ರಿಯಾಶೀಲತೆ, ಕೈಚಳಕ ಮತ್ತು ವೃತ್ತಿ ಕೌಶಲ್ಯ ಅರಳಿರುತ್ತಿದ್ದುದನ್ನು ನಾನು ನೋಡಿದ್ದೇನೆ. ಮೂರು ಪದರಿನ ಕೌದಿ ಒಂದು ರೀತಿ ಶಾಲಿನಂತಿರುತ್ತಿತ್ತು. ಸಾಮಾನ್ಯವಾಗಿ ಮೂರು ಪದರಿನ ಕೌದಿಯನ್ನು ಜನ ಹೆಗಲಮೇಲೆ ಹೊತ್ತುಕೊಂಡು ಹೊಲ ಕಾಯಲು/ರಾತ್ರಿ ಕಾವಲು ಕಾಯಲು/ಹೊಲದ ಗುಡಿಸಲುಗಳಲ್ಲಿ ಬಳಸುತ್ತಿದ್ದುದು ಸಾಮಾನ್ಯ. ಬೇಸಿಗೆಯಲ್ಲಿ ಬಿಸಿಲಿನ ತಾಪ ತಾಳಲಾದ್ದಕ್ಕೆ ಈ ಕಡಿಮೆ ಭಾರದ ಕೌದಿಯನ್ನು ಕೆಲವರು ಉಪಯೋಗಿಸುತ್ತಿದ್ದರು.

ಐದು ಪದರಿನ ಕೌದಿಯಾದರೆ ಮೂರನೇ ಮತ್ತು ಎರಡನೇ ಪದರಿನಲ್ಲಿ ಉಪಯೋಗಿಸಿದ ತುಂಡು ಸೀರೆ ಮತ್ತು ಧೋತರಗಳಿಗಿಂತ ಕಡಿಮೆ ಆಕಾರದವುಗಳಾದ ಗಟ್ಟಿಮುಟ್ಟಾದ ಬಟ್ಟೆಯನ್ನು ಉಪಯೋಗಿಸುತ್ತಿದ್ದರು. ನಾಲ್ಕನೇ ಪದರಿನಲ್ಲಿ ಚಿಕ್ಕ ತುಂಡುಗಳನ್ನು ವಿವಿಧ ವಿನ್ಯಾಸಗಳಲ್ಲಿ ಕತ್ತರಿಸಿ ಹೊಲಿಯುತ್ತಿದ್ದರು. ಕೊನೆಯ ಪದರಿನಲ್ಲಿ ಈ ಮೊದಲೇ ಹೇಳಿದಂತೆ ಕಲಾತ್ಮಕ ರೀತಿಯಲ್ಲಿ ಬಟ್ಟೆಗಳನ್ನು ಕತ್ತರಿಸಿ ಬಣ್ಣ, ಆಕಾರ, ವಿನ್ಯಾಸ ಮತ್ತು ಅವುಗಳ ಅಳತೆಗೆ ತಕ್ಕಂತೆ ಅವುಗಳನ್ನು ಹೊಂದಿಸಿ ಹೊಲಿಗೆಯನ್ನು ಹಾಕುತ್ತಿದ್ದರು. ತುಂಬಾ ನಾಜೂಕಿನಿಂದ ಕೂಡಿದ ಕುಸುರಿ ಕೆಲಸವಿರುವುದೇ ಈ ಕೊನೆಯ ಪದರಿನ ಮೇಲೆ. ತುಂಡು ಬಣ್ಣ ಬಣ್ಣದ ಬಟ್ಟೆಗಳನ್ನು ತೇಪೆ ಹಚ್ಚಿ ದಾರ ಹೆಣೆಯುವುದು ಅಷ್ಟು ಸುಲಭದ ಕೆಲಸವಲ್ಲ.

ಕೌದಿಯನ್ನು ಸಿದ್ಧಗೊಳಿಸಿ ಮನೆಗೆ ತಂದುಕೊಟ್ಟಾಗ ನಮ್ಮ ಅಜ್ಜಿಗೆ ಆಗುತ್ತಿದ್ದ ಸಂತೋಷ ಅಷ್ಟಿಷ್ಟಲ್ಲ. ಏಕೆಂದರೆ ಹಳೆಯ ಕೌದಿಯ ಹರಿದ ಪದರುಗಳನ್ನು ಹೊಂದಿಸಿ ಹೊಂದಿಸಿ ಹೊದೆದು/ಹಾಸಿಕೊಳ್ಳುವ ತಾಪತ್ರಯ ತಪ್ಪಿತಲ್ಲ ಅಂತ ಇರಬೇಕು. ಇಂಗ್ಲೆಂಡಿನ ಮಹಾರಾಣಿ ಜಹಗೀರುಗಳನ್ನು ತಮ್ಮ ಅಧೀನ ದೊರೆಗಳಿಗೆ ನೀಡಿದಂತೆ ಯಾವ ಕೌದಿ ಯಾರಿಗೆ ಎಂದು ನಿರ್ಧರಿಸುವ ಜವಾಬ್ದಾರಿ ನಿಭಾಯಿಸುವಾಗ ಅಜ್ಜಿ ಮಾತ್ರ ಇಡೀ ಮನೆಯ ಸಂಬಂಧಗಳನ್ನು ತುಲನೆ ಮಾಡಿ, ಪರಿಶೀಲಿಸಿ ಮತ್ತು ಪುನರ್ ವಿಮರ್ಶಿಸಿ ಕೌದಿ ಕೊಡುತ್ತಿದ್ದುದು ಆಕೆಯ ನಾಯಕತ್ವ ಗುಣಕ್ಕೆ ಹಿಡಿದ ಕನ್ನಡಿಯಿದ್ದಂತಿತ್ತು. ಕೌದಿಯನ್ನು ಮನೆಯ ಮಂದಿಗೆಲ್ಲ ಹಂಚುವದು ಅಷ್ಟು ಸುಲಭಸಾಧ್ಯವಾದ ಕೆಲಸವಲ್ಲ. ಅದನ್ನು ಅನುಭವಿಸಿದವರಿಗೇ ಗೊತ್ತು ಅದರ ಗೋಜಲು, ಜಂಜಾಟ, ಕ್ರಿಯೆ-ಪ್ರತಿಕ್ರಿಯೆಗಳು. ಕೌದಿಯನ್ನು ಹಂಚುವಾಗ ಆಗುವ ಗೊಂದಲ ಮತ್ತು ಸರಿಯಾಗಿ ನಿರ್ಧರಿಸಲಾಗದ ಮನೆಯ ಒಡೆಯ/ಒಡತಿಯ ಅಸಹಾಯಕತೆಯಿಂದ ಮನೆಗಳು, ಮನಗಳು ತುಂಡು ತುಂಡಾಗಿದ್ದೂ ಉಂಟು. ಅಜ್ಜಿ ಕೌದಿ ಹಂಚುವಾಗ, ಹಂಚಿದ ಮೇಲೆ ಒಂದೆರಡು ದಿವಸಕಾಲ ಎಲ್ಲ ಗೊಂದಲ, ಗೋಜಲು ತಿಳಿಯಾಗುವವರೆಗೆ ಸ್ವಲ್ಪ ಮಾನಸಿಕ ಉದ್ವೇಗಕ್ಕೆ ಒಳಗಾಗಿದ್ದುದು ಆಕೆಯು ಎಲ್ಲರ ಮೇಲೆ ವಿನಾಕಾರಣ ರೇಗಾಡುತ್ತಿದ್ದುದನ್ನು ನಾನು ಕಂಡೂ ಕಾಣದಂತೆ ಗಮನಿಸುತ್ತಿದ್ದೆ. ಅಂತಹ ಸಂದರ್ಭಗಳಲ್ಲಿ ಆಕೆಯೊಂದಿಗೆ ಸಲುಗೆಯಿಂದ ವರ್ತಿಸುವ ಧಾರ್ಷ್ಟ್ಯವನ್ನು ನಾನು ತೋರಿಸುತ್ತಿರಲಿಲ್ಲ.

ಕೌದಿಯನ್ನು ಎಲ್ಲರೂ ಹೊಲಿಸುವುದಿಲ್ಲವೆಂಬುದೊಂದು ಕೌತುಕದ ವಿಷಯ. ಕೆಲವು ಮನೆಯವರು ಕೌದಿಯನ್ನು ಉಪಯೋಗಿಸಿದರೆ ಕೆಡಕಾಗುವುದು ಎಂದು ನಂಬುತ್ತಾರೆ. ಹೀಗಾಗಿ ಅಂತಹವರು ಕೌದಿಯನ್ನು ಹೊಲಿಸುವುದೇ ಇಲ್ಲ; ಉಪಯೋಗಿಸುವುದೂ ಇಲ್ಲ. ನನ್ನ ಹೆಂಡತಿಯು ಅಂತಹವಳೇ. ನಾನು ಮದುವೆಯಾದ ನಂತರ ಕೌದಿ ಹೊಲಿಸಬೇಕೆಂಬ ನನ್ನ ಇಚ್ಛೆಯನ್ನು ಹೊಸತರಲ್ಲಿ ಅತೀ ನವುರಾಗಿಯೇ ಚಿವುಟಿದವಳು ನನ್ನ ಶ್ರೀಮತಿ. ಹೊಸ ಮದುವೆ ಮತ್ತು ಹೊಸ ಸಂಬಂಧ ಹೆಂಡತಿಗೂ ಮತ್ತು ಆಕೆಯ ಬಂಧು-ಬಳಗಕ್ಕೂ ಮುಜುಗರವನ್ನುಂಟುಮಾಡಬಾರದೆಂಬ ನಿರ್ಧಾರ ಇಲ್ಲಿಯವರೆಗೆ ಕೌದಿಯನ್ನು ಹೊಲಿಸುವ ಸಾಹಸಕ್ಕೆ ನಾನು ಕೈ ಹಾಕದಂತೆ ತಡೆದಿತ್ತು. ಏಕೋ ಏನೋ ಕೌದಿ ಹೊಲಿಸಿ ಉಪಯೋಗಿಸಬೇಕೆಂಬ ಹಂಬಲ ಮಾತ್ರ ಹಚ್ಚಹಸಿರಾಗಿಯೇ ಮನಸ್ಸಿನ ಯಾವುದೋ ಮೂಲೆಯಲ್ಲಿ ಅವಿತುಕೊಂಡಿದೆ. ಅದು ಆಗಾಗ ಪ್ರಕಟವಾಗಿ ನನ್ನನ್ನು ಧರ್ಮಸಂಕಟಕ್ಕೀಡುಮಾಡುವುದುಂಟು. ನಾನು ರಾಯಚೂರು ಜಿಲ್ಲೆಯಲ್ಲಿ ಕೆಲಸ ಮಾಡುವಾಗ ಲಿಂಗಸುಗೂರ ಹತ್ತಿರದ ಹಳ್ಳಿಗೆ ಹೋಗಿದ್ದೆ. ಮನೆಗಳ ಮುಂದೆ ಓರಣವಾಗಿ ಕೌದಿಗಳನ್ನು ತೂಗು ಹಾಕಲಾಗಿತ್ತು. ಅವುಗಳನ್ನು ನೋಡಿ ಮತ್ತೆ ನನ್ನ ನೆನಪು ಚಿಗುರ ತೊಡಗಿತು. ಜೀಪ್ ಡ್ರೈವರ್‌ಗೆ ಕೇಳಿದೆ : ''ಕೌದಿ ಭಾಳ ಕಾಣಾಕ ಹತ್ಯಾವು, ಇಲ್ಲಿ ಕೌದಿ ಹೊಲಿತಾರೇನು ?'' ಅವನು ನನ್ನ ಮುಖವನ್ನೊಮ್ಮೆ ದಿಟ್ಟಿಸಿ ನೋಡಿ ಆಶ್ಚರ್ಯಚಕಿತನಾಗಿ ''ಹೌದ್ರಿ ಸಾಹೇಬ್ರ, ಇಲ್ಲಿ ಮಸಗಿಯೊಳಗೆ ಕೌದಿ ಹೊಲಿತಾರ್ರಿ''. ಅಲ್ಲಿಂದ ಕೌದಿ ಹೊಂದುವ ನನ್ನ ಇಚ್ಛೆ ಪ್ರಬಲವಾಯಿತು. ''ನನಗೂ ಒಂದು ಕೌದಿ ಬೇಕು. ಹೊಲಿಸಿ ಕೊಡ್ತಿಯೇನು ?'' ಅಂತಾ ಕೇಳಿದೆ. ಆಗಲಿ ಅಂದ. ಮುಂದೆ ರಾಯಚೂರಿನಿಂದ ಬೆಂಗಳೂರಿಗೆ ವರ್ಗವಾಗಿದ್ದರಿಂದ ನನ್ನ ಕೌದಿ ಹೊಂದುವ ಕನಸು ನನಸಾಗಲೇ ಇಲ್ಲ.

## ಸಾದರ ಸ್ವೀಕಾರ

**ಆಕಲನ** (ಗೋವಿಂದ ಪೈ ಸಾಹಿತ್ಯ ಸಮೀಕ್ಷೆ)
ಎಸ್. ಶಿವಾಜಿ ಜೋಯಿಸ್
ಪುಟ : ೨೦೮ ಬೆಲೆ : ರೂ. ೧೦೦
ಸಮರಸ ಪ್ರಕಾಶನ, ೧೬೬, ಕೆಸರೆ ೩ನೇ ಹಂತ, ಆರ್. ಎಸ್. ನಾಯ್ಡು ನಗರ, ಮೈಸೂರು - ೫೭೦ ೦೦೭

**ಅಂಬರದ ಹನಿಗಳು** (ಕವನ ಸಂಕಲನ)
ಡಾ|| ಎಂ. ಬಿ. ರೇವಡಿಗಾರ
ಪುಟ : ೪೬ ಬೆಲೆ : ರೂ. ೪೦
ಹಂಬಲ ಪ್ರಕಾಶನ, ಪ್ರಧಾನ ಅಂಚೆ ಕಚೇರಿ ಹಿಂಭಾಗ, ಬಾಗಲಕೋಟೆ - ೫೮೭ ೧೦೧

**ಮಾತೃವಾಣಿ** ಅನು : ಶಿಶು ಮಧುರಚೆನ್ನ
ಪುಟ : ೯೬ ಬೆಲೆ : ರೂ. ೪೦
ಕರ್ನಾಟಕ ನಿಲಯಂ ಟ್ರಸ್ಟ್, ಮಾಂಟೋರ್‌ಸಿಯರ್ ಬೀದಿ, ಪಾಂಡಿಚೆರಿ - ೬೦೫ ೦೦೧

**ಆರಾಧನೆ** (ಕವನ ಸಂಕಲನ) ಜಿ. ವೆಂಕಪ್ಪ ಸಾಹುಕಾರ
ಪುಟ : ೬೦ ಬೆಲೆ : ರೂ. ೫೦
ಶಾಂತವೀರ ಪ್ರಕಾಶನ, ಹೆಗ್ಗಾಪೂರ ಓಣಿ, ಮಲ್ಲಿಕಾರ್ಜುನ ನಿಲಯ, ಸಿಂಧನೂರು, ರಾಯಚೂರು ಜಿಲ್ಲೆ

**ವೈಚಾರಿಕ ಚಿಂತನೆಗಳು** (ಲೇಖನ ಸಂಕಲನ)
ಡಾ|| ವೆಂಕಟಯ್ಯ ಅಪ್ಪಗೆರೆ
ಪುಟ : ೧೨೪ ಬೆಲೆ : ರೂ. ೬೦
ಸಂಸ್ಕೃತಿ ಪ್ರಕಾಶನ, ಸುಭಾಷ್ ಭರಣಿ ಸಾಂಸ್ಕೃತಿಕ ವೇದಿಕೆ, ಬಳ್ಳಾರಿ

**ಸಾಧಕ ಜೀವಿ - ಗುಡ್ಲಮನಿ** (ಜೀವನ ಸಾಧನೆ)
ಡಾ|| ಅಶೋಕ ನರೋಡೆ
ಪುಟ : ೧೨೪ ಬೆಲೆ : ರೂ. ೫೦
ಅಪೂರ್ವ ಪ್ರಕಾಶನ ನಂ.೧೭, ಬಸವನಗರ, ಮಹಾಲಿಂಗಪುರ - ೫೮೭ ೩೧೨

**ಶೈವತತ್ತ್ವ** (ಶಿವಯೋಗ ಸೂತ್ರ) ಸದಾಶಿವಯೋಗಿ
ಪುಟ : ೯೨ ಬೆಲೆ : ರೂ. ೨೦
ಶಿವಾನಂದ ಯೋಗಾಶ್ರಮ, ಹಂಪಿ - ೫೮೩ ೨೩೯. ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ

**ಶಿರವೇ ಬ್ರಹ್ಮಾಂಡ ಜಗವೇ ಪಿಂಡಾಂಡ** ಸದಾಶಿವಯೋಗಿ
ಪುಟ : ೧೧೩ ಬೆಲೆ : ರೂ. ೮೦
ಗುರುಕುಲ ಪ್ರಕಾಶನ, ಗುರುಕುಲಾನಂದಾಶ್ರಮ, ಕೆ. ಆರ್. ಎಕ್ಸ್‌ಟೆನ್ಷನ್, ತಿಪಟೂರು - ೫೭೨ ೨೦೨

**ಧರೆ ಮೇಲೆ ಬರಿಪಾದ** (ಕವನ ಸಂಕಲನ)
ಕೃಷ್ಣಮೂರ್ತಿ ಬಿಳಿಗೆರೆ
ಪುಟ : ೧೦೭ ಬೆಲೆ : ರೂ. ೪೦
ನಮ್ಮ ಪ್ರಕಾಶನ, ಬಿಳಿಗೆರೆ, ತಿಪಟೂರು ತಾ. ತುಮಕೂರು ಜಿಲ್ಲೆ

**ಚಿತ್ತ ಚಿತ್ರ** (ಕವನ ಸಂಕಲನ) ಅಶೋಕ್ ಕುಮಾರ್ ಎಂ. ಬಿ.
ಪುಟ : ೧೨೪ ಬೆಲೆ : ರೂ. ೬೦
ಕಲಾನಿಕೇತನ ಪ್ರಕಾಶನ, ಶ್ರೀ ಬಸವೇಶ್ವರ ಚಿತ್ರಕಲಾ ಮಹಾವಿದ್ಯಾಲಯ, ಬಸವಕಲ್ಯಾಣ, ಬೀದರ್ ಜಿಲ್ಲೆ

**ನೀತಿ ಸುಧೆ** (ಮಕ್ಕಳ ಗೀತೆಗಳು) ಜಿ. ಪಿ. ಭಟ್ಟ, ಬೆತ್ತಗೇರಿ
ಪುಟ : ೩೨ ಬೆಲೆ : ರೂ. ೧೮
ಪುಸ್ತಕ ನಿಧಿ, ಗಾವಳಿ ಶಾಲೆ ಹತ್ತಿರ, ಅಂಚೆ : ಹಳ್ಳಾಡಿ - ಹರ್ಕಾಡಿ, ಕುಂದಾಪುರ - ೫೭೬ ೨೧೦

## ಪುಸ್ತಕ ಅನಾವರಣ ಮತ್ತು ವಿಚಾರಗೋಷ್ಠಿ



ದಿನಾಂಕ ೨೯.೦೫.೨೦೦೫ರಂದು 'ಕೋಮುವಾದದ ಕರಾಳ ಮುಖಗಳು' ಕೃತಿ ಅನಾವರಣ ಸಮಾರಂಭ ನೆರವೇರಿತು. ಡಾ|| ಜಿ. ರಾಮಕೃಷ್ಣ ಅಧ್ಯಕ್ಷತೆ ವಹಿಸಿ ಪುಸ್ತಕ ಅನಾವರಣಗೊಳಿಸಿದರು. ತರುವಾಯ ನಡೆದ ವಿಚಾರಗೋಷ್ಠಿಯಲ್ಲಿ ಕೃತಿಯ ಲೇಖಕರಾದ ಶ್ರೀ ಜಿ. ರಾಜಶೇಖರ, ಶ್ರೀ ಕೆ. ಫಣಿರಾಜ್ ಮತ್ತು ಪ್ರೊ|| ಬರಗೂರು ರಾಮಚಂದ್ರಪ್ಪ, ಡಾ|| ಲಿಂಗದೇವರು ಹಳೆಮನೆ ಹಾಗೂ ಡಾ|| ಸಿದ್ದನಗೌಡ ಪಾಟೀಲರು ಭಾಗವಹಿಸಿದ್ದರು.

ಇತ್ತೀಚೆಗೆ ನನ್ನದೇ ಜಿಲ್ಲೆಗೆ ವರ್ಗವಾಗಿ ಬಂದಿದ್ದೆ. ಕೆಲಸದೊತ್ತಡದಲ್ಲಿ ಅದರ ಬಗ್ಗೆ ಗಮನಹರಿಸಲಾಗಿರಲಿಲ್ಲ. ಧಾರವಾಡದಲ್ಲಿ ಸ್ನೇಹಿತರೊಬ್ಬರು ದೆಹಲಿಯಲ್ಲಿ ರಜಾಯಿ ತೆಗೆದುಕೊಳ್ಳಲು ಹೋದದ್ದು, ಸಿಗದೇ ವಾಪಸ್ಸು ಬಂದದ್ದು, ಮನಸ್ಸಿಗೆ ಬೇಜಾರು ಮಾಡಿಕೊಂಡಿದ್ದ ಅವರನ್ನು ಸಮಾಧಾನ ಮಾಡಲೆತ್ನಿಸಿದಾಗ ರಜಾಯಿಕ್ಕಿಂತ ಕೌದಿ ಭಾಳ ಛೋಲೊ ನೋಡ್ರಿ ಅಂದರು. ಅಲ್ಲಿಯ ವರೆಗೆ ಅದುಮಿಟ್ಟಿದ್ದ ಆಸೆ ಛಗಿಲ್ಲೆಂದು ಮೇಲೆದ್ದು ನರ್ತನ ಮಾಡತೊಡಗಿತು. ಕೋಡಿಹಾಳ ಮತ್ತು ಕಮತಗಿ ಕೌದಿ ನೆನಪಾಗಿ ''ನಿಮಗ ಬೇಕಂದ್ರ ಒಂದ ಕೌದಿ ಹೊಲಿಸಿ ಕೊಡ್ತೇನಿ'' ಅಂದೆ. ''ಹಾಗೆ ಆಗಲಿ'' ಅಂತ, ಅವರು ಹೇಳಿ ಖಂಡಿತ ತಂದು ಕೊಡಬೇಕೆಂದು ತಾಕೀತು ಮಾಡಿ ಹೊರಟುಹೋದರು.

ಕೌದಿಯ ನೆನಪು ಆಗಾಗ ಕಾಡುವುದಕ್ಕೆ ಶುರುವಾಯಿತು. ಆಫೀಸಿನಲ್ಲಿ, ಮನೆಯಲ್ಲಿ ಮತ್ತು ಕಚೇರಿ ಕೆಲಸದ ನಿಮಿತ್ತ ಪ್ರವಾಸ ಹೋದಾಗಲೊಮ್ಮೆ ಹಳ್ಳಿಗಳಲ್ಲಿ ಮನೆ-ಮನೆಗಳ ಮುಂದೆ ಕೌದಿ ಹಾಕಿದ್ದು ನೋಡಿ ಕೌದಿ ಹೊಲಿಸಿಯೇ ತೀರಬೇಕೆಂದು ತೀರ್ಮಾನಿಸಿ ಒಂದು ಬಾರಿ ಕೋಡಿಹಾಳಕ್ಕೂ ಭೆಟ್ಟಿ ನೀಡಿಯೇಬಿಟ್ಟೆ. ಗ್ರಾಮ ಚಾವಡಿಗೆ ಹೋಗಿ ಅಲ್ಲಿಯ ಸಿಬ್ಬಂದಿಗೆ ನನ್ನ ಇಂಗಿತ ತಿಳಿಸಿದೆ. ಸಾಹೇಬ್ರು ಕೌದಿ ಹೊಲಸೊ ಸಲುವಾಗಿ ಖುದ್ದಾಗಿ ಕೋಡಿಹಾಳಕ್ಕೆ ಭೆಟ್ಟಿ ಕೊಟ್ಟದ್ದಕ್ಕೆ ಒಳಗೊಳಗೆ ಸಂತಸಗೊಂಡಿದ್ದ ಸಿಬ್ಬಂದಿ ಕೌದಿ ಹೊಲಿಯುವ ರುಕ್ಮಮ್ಮಾ ಮತ್ತು ದುರ್ಗಮ್ಮನನ್ನು ನಾನಿದ್ದ ಕಡೆ ಕರೆದುಕೊಂಡುಬಂದರು. ತಮ್ಮೊಂದಿಗೆ ತಂದಿದ್ದ ಕೌದಿಯನ್ನು ಬಿಚ್ಚಿ ತೋರಿಸಿದ ಹಣ್ಣು ಹಣ್ಣು ಮುದುಕಿ ರುಕ್ಮಮ್ಮ ''ಇದು ನೋಡ್ರಿ ಸಾಹೇಬ್ರ, ಮೂರು ಪದರಿನಿಂದ ಮಾಡಿದ್ದು, ತೆಳ್ಳಗಿರತ್ತೈತಿ ಮತ್ತು ಶಾಲು ಇದ್ದಂಗ ಐತಿ ನೋಡ್ರಿ'' ಎಂದು ಮಡಿಕೆಗಳನ್ನು ಬಿಚ್ಚಿ ತೋರಿಸಿದಳು. ದುರ್ಗಮ್ಮ ಬಲು ಭಾರವಾದ ಕೌದಿಯನ್ನು ಪ್ರಯಾಸದಿಂದ ಎತ್ತಿ ಬಿಚ್ಚಿ ತನ್ನ ಕೈಯಿಂದ ಮಾಡಿದ ಕುಸುರಿ ಕೆಲಸದ ಬಗ್ಗೆ ವಿವರ ನೀಡಿದಳು. ಅಂತೂ ನನ್ನ ಹೆಂಡತಿಗೆ ಗೊತ್ತಿಲ್ಲದಂತೆ ನನಗೆರಡು ಕೌದಿಗೆ ಮತ್ತು ಸ್ನೇಹಿತರಿಗಾಗಿ ಒಂದು ಕೌದಿಯನ್ನು ಹೊಲಿಯಲು ತಿಳಿಸಿ ಅದಕ ಎಂಥೆಂಥ ಬಟ್ಟೆ ಬೇಕು ಅಂತ ವಿವರ ಕೇಳಿದೆ.

ರುಕ್ಮಮ್ಮ, ''ನೋಡ್ರಿಯಪ್ಪಾ ದೊಡ್ಡ ಕೌದಿಗೆ ಎರಡು ಗಂಟು ಅರಿವೆ ಮತ್ತು ಸಣ್ಣ ಕೌದಿಗೆ ಒಂದು ಗಂಟು ಬೇಕ್ರಿ, ಹಳೆ ಅರಿವೆಯಾದ್ರ ಛೋಲೋ'' ಅಂದಳು. ನನಗೆ ಮತ್ತೊಂದು ಆಘಾತ. ನನ್ನ ಶ್ರೀಮತಿಗೆ ಗೊತ್ತಿಲ್ಲದಂತೆ ಅರಿವೆ ಎಲ್ಲಿಂದ ತರುವದು ? ಮತ್ತೊಂದು ಖೆಡ್ಡಾಕ್ಕೆ ಬಿದ್ದಂತೆ ಅನುಭವ. ಸ್ನೇಹಿತರಿಗಾದರೂ ಹಳೆ ಅರಿವೆ ಗಂಟು ಕಳಿಸ್ರಿ ಅಂತ ಹ್ಯಾಂಗ ಹೇಳೂದು ? ಒಂದೂ ತಿಳಿಯದಂತಹ ಅನುಭವ.

''ನೋಡಬೇ ಯವ್ವ ಹಳೆ ಅರಿವಿ ಕೌದಿ ನಮಗ ಬ್ಯಾಡ. ಹೊಸ ಅರಿವಿ ಕೊಡಸ್ತೀನಿ. ಏನೇನು ಬೇಕು ನೀನು ಹೇಳಿದ್ರ ನಾನು ಅದರ ವ್ಯವಸ್ಥೆ ಮಾಡ್ತೀನಿ'' ಅಂತ ಒಂದೇ ಉಸಿರಿನಲ್ಲಿ ಬಡಬಡನೆ ಉಸಿರಿದೆ. ಮುದುಕಿ ರುಕ್ಮಮ್ಮ ತದೇಕ ದೃಷ್ಟಿಯಿಂದ ನನ್ನನ್ನು ಒಮ್ಮೆ ನೋಡಿ ''ಯಪ್ಪಾ, ಹಳೆ ಅರಿವಿ ಅಂದ್ರ ಅದರಾಂಗ ತಾಯಿಯ ಅಕ್ಕರೆ, ಅಕ್ಕ-ತಂಗಿ ಪ್ರೀತಿ, ಹೆಂಡತಿಯ ಹರಕೆ ಇರತೈತಿ, ನೀನು ಹಾಸಿಕೊಂಡಾಗ, ಹೊದ್ದುಕೊಂಡಾಗ ಅಜ್ಜಿ, ಅವ್ವ, ಅಕ್ಕ-ತಂಗಿ ನೆನಪಿಗೆ ಬರತಾರ, ನೀನು ಉಟ್ಟು ನಲಿದಾಡಿದ ಚಿಂದಿಯ ತೇಪೆ ನೋಡಿದಾಗೊಮ್ಮೆ ನಿನ್ನ ನೆನಪು ನಿನಗ ಕಾಡತಾವ. ಚಿಂದಿ ಅರಿವಿ ಸ್ಪರ್ಶ ನಿನಗೊಂದು ನಮೂನೆ ಸುಖಾ ಕೊಡತೈತಿ, ಪ್ರೀತಿ, ಪ್ರೇಮ ಅಂತಃಕರಣ, ಆನಂದ, ಭಾವನಾತ್ಮಕತೆಯಿಂದ ಕೂಡಿದ ದಾರಗಳಿಂದ ಹೊಲಿದಿರುವ ಈ ಕೌದಿ, ಕೌದಿ ಅಷ್ಟ ಅಲ್ಲ. ನನಗನ ಅದು ನೆನಪಿನ ಬುತ್ತಿಯ ಚೀಲ'', ಅಂದಾಗ ಮುದುಕಿ ರುಕ್ಮಮ್ಮಳ ಸುಕ್ಕು ಗಟ್ಟಿದ ಮುಖದ ಮೇಲಿನ ಒಂದೊಂದು ಗೆರೆ ಆಳವಾದ ಅನುಭವದ ರೇಖೆಗಳಂತೆ ಕಂಡವು.

ಸದಾಶಿವ ಮರ್ಜಿ
ಉಪನಿರ್ದೇಶಕರು, ಆನಾಸ ಇಲಾಖೆ, ಬಾಗಲಕೋಟ

# ಭಾಷೆಯ ದೃಷ್ಟಿಯಿಂದ ಇಂದಿನ ಸಣ್ಣಕತೆಗಳು

ಯಾವುದೇ ಕೃತಿಯ ಅನುಭವದ ನಿರೂಪಣೆಯಲ್ಲಾಗಲೀ ಆಯ್ಕೆ ಮಾಡಿಕೊಂಡ ವಸ್ತುವಿನಲ್ಲಾಗಲೀ ಬಳಸಿಕೊಂಡ ತಂತ್ರದಲ್ಲಾಗಲೀ ಮುಖ್ಯವಾಗಿ ಆ ಅನುಭವಕ್ಕೆ, ವಸ್ತುವಿಗೆ, ತಂತ್ರಕ್ಕೆ ತಕ್ಕನಾದ ಭಾಷೆಯನ್ನು ಬಳಸಬೇಕಾಗುತ್ತದೆ. ಅದರಲ್ಲೂ ಸೃಜನಶೀಲತೆಯಲ್ಲಿ ಭಾಷೆಯೇ ಪ್ರಮುಖ. ಸೃಜನಶೀಲತೆಯಲ್ಲಿ ಇದಕ್ಕೆ ಮಿತಿಯೂ ಇರುವುದಿಲ್ಲ. ಆಡುಮಾತಿನ ಪ್ರಯೋಗ ಜಾಸ್ತಿಯಾಗಿ ಮಣ್ಣಿನ ವಾಸನೆ ಮುಖ್ಯವಾಗಿಬಿಡುತ್ತದೆ.



**ಡಾ|| ಜಿ. ಆರ್. ತಿಪ್ಪೇಸ್ವಾಮಿ**

ಯಾವುದೇ ಭಾಷೆಯನ್ನು ಕುರಿತು ಮಾತನಾಡುವುದೆಂದರೆ ಆ ಭಾಷೆಯನ್ನಾಡುವವರ ಬದುಕನ್ನು ಕುರಿತು ಮಾತನಾಡುವುದೆಂದೇ ಅರ್ಥ. ಭಾಷೆ ಸಾಮಾಜಿಕ ಸೃಷ್ಟಿ ಎನಿಸಿದಾಗ ಸಾಹಿತ್ಯ ಮತ್ತು ಭಾಷೆ ಬೇರೆ ಬೇರೆಯಾಗಿರಲು ಸಾಧ್ಯವಿಲ್ಲ ಎನ್ನುವಂತಾಯಿತು. ಅನುಭವಗಳ ಸುಂದರವಾದ ನಿರೂಪಣೆಯೆಲ್ಲ ಸಾಹಿತ್ಯವೆಂದಾಗ ಅಂಥ ಸಾಹಿತ್ಯ ಸಂಭವಿಸುವುದು ಭಾಷೆಯಲ್ಲಿ. ಒಂದು ಸಾಹಿತ್ಯ ಕೃತಿಯ ವಸ್ತು, ಭಾಷೆ, ತಂತ್ರದ ಅಧ್ಯಯನವೆಂದರೆ ಆ ಸಮಾಜದ ಒಟ್ಟು ಸಂಸ್ಕೃತಿಯ ಅಧ್ಯಯನವೇ ಆಗಿರುತ್ತದೆ. ಬರಹಗಾರ ಕಟ್ಟಿಕೊಟ್ಟ ಅಖಂಡ ಬದುಕಿನ ಅಧ್ಯಯನವೂ ಆಗುತ್ತದೆ.

ಯಾವುದೇ ಕೃತಿಯ ಅನುಭವದ ನಿರೂಪಣೆಯಲ್ಲಾಗಲೀ ಆಯ್ಕೆ ಮಾಡಿಕೊಂಡ ವಸ್ತುವಿನಲ್ಲಾಗಲೀ ಬಳಸಿಕೊಂಡ ತಂತ್ರದಲ್ಲಾಗಲೀ ಮುಖ್ಯವಾಗಿ ಆ ಅನುಭವಕ್ಕೆ, ವಸ್ತುವಿಗೆ, ತಂತ್ರಕ್ಕೆ ತಕ್ಕನಾದ ಭಾಷೆಯನ್ನು ಬಳಸಬೇಕಾಗುತ್ತದೆ. ಅದರಲ್ಲೂ ಸೃಜನಶೀಲತೆಯಲ್ಲಿ ಭಾಷೆಯೇ ಪ್ರಮುಖ. ಸೃಜನಶೀಲತೆಯಲ್ಲಿ ಇದಕ್ಕೆ ಮಿತಿಯೂ ಇರುವುದಿಲ್ಲ. ಆಡುಮಾತಿನ ಪ್ರಯೋಗ ಜಾಸ್ತಿಯಾಗಿ ಮಣ್ಣಿನ ವಾಸನೆ ಮುಖ್ಯವಾಗಿಬಿಡುತ್ತದೆ. ಆಧುನಿಕ ಸಣ್ಣಕಥಾ ಕ್ಷೇತ್ರದಲ್ಲಿ ಕೆಲವರು ಪ್ರಜ್ಞಾಪೂರ್ವಕವಾಗಿ ಬಳಸಿದರು. ನವೋದಯ ಕತೆಗಾರರಲ್ಲಿ ಪ್ರಮುಖರಾದ ಮಾಸ್ತಿ, ಗೊರೂರು, ಆನಂದಕಂದ – ಮುಂತಾದವರು ತಮ್ಮ ಕತೆಗಳಲ್ಲಿ ಅಭಿವ್ಯಕ್ತಿಯ ಸಂದರ್ಭ, ಪಠ್ಯದ ರೂಪಕ್ಕೆ ತಕ್ಕಂತೆ ಪದವಿನ್ಯಾಸಕ್ರಮ ಬದಲಾಯಿಸುವ ವಿಶಿಷ್ಟ ಶೈಲಿಯನ್ನು ರೂಢಿಗೆ ತಂದರು. ಆದರೆ ಅದು ಜಾಹಿರಾತಾಗಿ ಮೂಡಿಬರದೆ ಸಹಜ ಅಭಿವ್ಯಕ್ತಿಯಾಗಿ ಸರಳ ಸಂವಹನ ಕ್ರಮವಾಗಿ ಗೋಚರವಾಯಿತು. ಸಣ್ಣಕತೆಗೆ ಒಂದು ಸ್ವರೂಪವನ್ನು ತಂದುಕೊಟ್ಟು ಅದನ್ನು ಜೀವ ಚಿಂತನೆಯ ಮಾಧ್ಯಮವಾಗಿಸಿ ಭಾಷೆಯನ್ನು ಅದಕ್ಕೆ ಹದಗೊಳಿಸಿದವರೆಂದರೆ ಮಾಸ್ತಿ. ಇವರು ಸಂಸ್ಕೃತವನ್ನು ಬಲ್ಲವರಾದರೂ ಭಾರವಾದ ಸಂಸ್ಕೃತ ಪದಗಳನ್ನು ತಮ್ಮ ಕತೆಗಳಲ್ಲಿ ಬಳಸುವುದಿಲ್ಲ. ಹಳ್ಳಿಗಾಡಿನ ಆಡುಮಾತಿನ ಪರಿಚಯವೂ ಅವರಿಗಿದೆ. ಅದನ್ನು ಎಲ್ಲಿ ಬೇಕೋ ಅಲ್ಲಿ ಬಳಸಿ ಯಶಸ್ವಿಯಾಗಿದ್ದಾರೆ. ಇವರ ಕತೆಗಳಲ್ಲಿ ಬರುವ ರಂಗಪ್ಪ, ರಂಗಸ್ವಾಮಿ, ರಾಮಸ್ವಾಮಿ, ಉಗ್ರಪ್ಪ, ಜೋಗೇರ ಅಂಜಪ್ಪ, ಮೊಸರಿನ ಮಂಗಮ್ಮ, ವೇಲೂರಿನ ಲಕ್ಷ್ಮಮ್ಮ, ಮೇಷ್ಟ್ರ ಹೆಂಡತಿ, ಬೈಚೇಗೌಡ ಮುಂತಾದವರೆಲ್ಲ ನಿಜಜೀವನದಲ್ಲಿ ಕಾಣುವ ವ್ಯಕ್ತಿಗಳೇ ಆಗಿರುವುದರಿಂದ ಅವರ ಅನುಭವಗಳೂ ಸಾಮಾನ್ಯವಾದಂಥವೇ ಆಗಿರುತ್ತವೆ. ಆದರೆ ಮಾಸ್ತಿಯವರದು ಸಾಮಾನ್ಯತೆಯ ಹಿಂದೆ ಅಸಾಮಾನ್ಯತೆಯನ್ನು ಕಾಣುವ ಸ್ವಭಾವ. ಕೆ. ಡಿ. ಕುರ್ತಕೋಟಿ ಹೇಳುವಂತೆ ''ನಾವು ದಿನನಿತ್ಯ ಓಡಾಡುವ ನೆಲದ ಕೆಳಗೇ ಭೂಗರ್ಭಶಾಸ್ತ್ರಜ್ಞ ಬಂಗಾರದ ನೆಲೆಯನ್ನು ಗುರುತಿಸುವಂತೆ ಶ್ರೀನಿವಾಸರು ಈ ವ್ಯಕ್ತಿಗಳ ಜೀವನದ ಹಿಂದಿನ ಉನ್ನತಿಯನ್ನು ತಟ್ಟನೆ ಗುರುತಿಸುತ್ತಾರೆ. ಮುಖದ ಮೇಲಿನ ಗೆರೆಗಳಿಂದ ಮನುಷ್ಯನ ವಯಸ್ಸನ್ನು ಗುರುತಿಸುವಂತೆ ಓರ್ವ ವ್ಯಕ್ತಿಯ ಸ್ವಭಾವದ ಗೆರೆಗಳಲ್ಲಿಯೇ ಅವರು ಆ ವ್ಯಕ್ತಿಯ ತಾತ್ವಿಕ ರೂಪವನ್ನೂ ನಿರ್ಮಿಸುತ್ತಾರೆ.''

ಯಾವುದೇ ಬರವಣಿಗೆಯ ಭಾಷೆ ತನ್ನ ಜಾತಿ ಮತ್ತು ಪರಿಸರವನ್ನು ಅವಲಂಬಿಸದೇ ಇರುವುದಿಲ್ಲ. ತನ್ನ ಸಮುದಾಯದ ವಿವರಗಳು ತಮ್ಮ ಕತೆಗಳಲ್ಲಿ ಅನಾವರಣಗೊಂಡಂತೆಯೇ ಪ್ರಾದೇಶಿಕ ವಿವರಗಳೂ ಹಾಸುಹೊಕ್ಕಾಗಿರುತ್ತವೆ. ಮೇಲ್ಜಾತಿಯ ಕತೆಗಾರರು ಕೆಳಜಾತಿಯವರ ಭಾಷೆಯನ್ನು ಕತೆಗಳಲ್ಲಿ ಬಳಸುವುದುಂಟು. ನವೋದಯದ ಪ್ರಸಿದ್ಧ ಬರಹಗಾರರಾದ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ತಮ್ಮ ಕತೆಗಳಲ್ಲಿ ಆರಿಸಿಕೊಂಡ ವಸ್ತು ಗ್ರಾಮ ಪರಿಸರದ್ದು. ಸಂವಹನಕ್ಕೆ ಗ್ರಾಮ ಪರಿಸರದ ಭಾಷೆ ಅವರಿಗೆ ಅನಿವಾರ್ಯವಾಯಿತು. ತುಕ್ಕು ಹಿಡಿದಿದ್ದ ಪದಗಳನ್ನು ಚಲಾವಣೆಗೆ ತಂದದ್ದು ಅಲ್ಲದೆ ಗ್ರಾಮ್ಯ ಪದಗಳಲ್ಲಿ ಚೈತನ್ಯ ಉಕ್ಕಿಸಿದರು. ಬದುಕಿನ ಸೂಕ್ಷ್ಮ ಸಂವೇದನೆಗಳನ್ನು ಗಾದೆ, ಪಡೆನುಡಿ, ನುಡಿಗಟ್ಟು, ಜನಪದ ಭಾಷೆಗಳ ಮೂಲಕ ವ್ಯಕ್ತಪಡಿಸಿದರು. ಇವರ ಅನೇಕ ನಗೆಬರಹಗಳಂತೆ ಹಲವಾರು ಕತೆಗಳು ಜಾನಪದ ಜೀವನದ ಹಿನ್ನೆಲೆಯಿಂದ ಬಂದಂಥವು. ಅವುಗಳಲ್ಲೂ ತಮಾಷೆಯ ಸಂಗತಿಗಳು ಇವೆ. ಗರುಡಗಂಬದ ದಾಸಯ್ಯ, ಬೆಸ್ತರ ಕರಿಯ, ಶಿವರಾತ್ರಿ, ಹಳ್ಳಿಯ ಛತ್ರ ಮುಂತಾದ ಸಂಕಲನದಲ್ಲಿನ ಕತೆಗಳು, ಹಾಸ್ಯ ಪ್ರತಿಭೆ, ಸಾಮರಸ್ಯಕ್ಕೆ ಸಂಬಂಧಿಸಿದವಾಗಿವೆ. ''ಜೀವನದ ಸರಳ ಸೌಂದರ್ಯವನ್ನು ಭಾವನೆಯ ಹನಿಗಣ್ಣಿನಿಂದ ನೋಡಿ ತದ್ರೂಪವಾಗಿ ಮೂಡಿಸುವ ಕುಶಲಕಲೆಗಾರಿಕೆ ಅವರದಾಗಿದೆ. ಆದ್ದರಿಂದ ಓದುವುದು ಕತೆಯೋ, ಹರಟೆಯೋ ಎಂಬ ವಿಚಾರ ಕೂಡಾ ಮನಸ್ಸಿಗೆ ಬರುವುದಿಲ್ಲ. ಇನ್ನು ವೈಚಾರಿಕತೆಯನ್ನಾಗಲಿ, ಕಲ್ಪಕಶಕ್ತಿಯನ್ನಾಗಲಿ ಅವರಿಂದ ಅಪೇಕ್ಷಿಸಲಾಗದು. ವಾಸ್ತವತೆಯ ಒಂದು ಕಾರ್ಯವಾದ ಜೀವನ-ಚಿತ್ರಣದಲ್ಲಿ ಅವರು ಯಶಸ್ಸನ್ನು ಪಡೆದಿದ್ದಾರೆ.'' ಧಾರವಾಡದ ಕಡೆಯವರಲ್ಲಿ ಹೆಚ್ಚು ಕತೆಗಳನ್ನು ಬರೆದ ಆನಂದಕಂದರು ತಮ್ಮ ಕತೆಗಳಲ್ಲಿ ಉತ್ತರ ಕರ್ನಾಟಕದ ಭಾಷೆಯನ್ನು ಬಳಸಿಕೊಳ್ಳುವುದರ ಮೂಲಕ ಪ್ರಾದೇಶಿಕ ವೈಶಿಷ್ಟ್ಯವನ್ನು ಮೆರೆದರು. ಅಲ್ಲಿಯ ಜೀವನವನ್ನು ವಸ್ತುವನ್ನಾಗಿ ಮಾಡಿಕೊಂಡರು. ಇವರಿಗೆ ಕಥಾ ವಸ್ತುವಿಗಿಂತ ಹೆಚ್ಚಾಗಿ ಗ್ರಾಮೀಣರು ಬದುಕುವ ಕ್ರಮವೇ ಹೆಚ್ಚು ಮಹತ್ವದ್ದೆಂದು ಕಾಣಿಸುತ್ತದೆ. ಜೋಗತಿಕಲ್ಲು, ಸೀಮೆಯಕಲ್ಲು, ಮಲ್ಲಮ್ಮನ ಮಹಾಭಾರತ, ಇಬ್ಬಣದ ದಿಬ್ಬಣ ಮುಂತಾದ ಕತೆಗಳಲ್ಲಿ ಈ ಸಂಗತಿಯನ್ನು ಗಮನಿಸಬಹುದು. ಇಬ್ಬಣದ ದಿಬ್ಬಣದ ಕತೆಯು ಗೌಡರಿಬ್ಬರ ಮನೆತನಗಳ ದಾಯಾದಿತನದ ಕತೆ. ಕಾಲಕ್ರಮದಲ್ಲಿ ವ್ಯಕ್ತಿತ್ವಗಳು ಬದಲಾಗುತ್ತವೆ. ಸ್ನೇಹ ದ್ವೇಷಗಳ ನಡುವೆಯೆ ಚೆಲುವಕ್ಕ ಸೋಮನಾಥರ ಮದುವೆ ನಡೆದು ದ್ವೇಷಿಸುತ್ತಿದ್ದ ಮನೆತನಗಳು ಹತ್ತಿರವಾಗುತ್ತವೆ. ಇದು ತಾತ್ಕಾಲಿಕ ಪ್ರಕ್ರಿಯೆ. ಕಾರಹುಣ್ಣಿಮೆಯ ಕರಿಯಲ್ಲಿ ಎತ್ತಿನ ಸೋಲು ಆ ದ್ವೇಷವನ್ನು ಕೆಣಕಿ ಎಬ್ಬಿಸುತ್ತದೆ. ನಾಗರಪಂಚಮಿಗೆ ತವರಿಗೆ ಹೋದ ಚೆಲುವಕ್ಕ ಮೈನೆರೆದರೂ ಗಂಡನಾದವನು ಅವಳ ಮನೆಗೆ ಹೋಗದಂಥ ಪರಿಸ್ಥಿತಿ ಬರುತ್ತದೆ. ಅದೇ ರೀತಿ ಮನೆತನಗಳ ಬಡಿದಾಟದಲ್ಲಿ ಸೋಮನಾಥ ಬಲಿಯಾಗುತ್ತಾನೆ. ಈ ಕತೆಯಲ್ಲಿ ಕಂಡುಬರುವ ದ್ವೇಷ, ಅಸೂಯೆಗಳ ರೊಚ್ಚು, ಕೊಡಲಿ ಏಟಿನಂತಿರುವ ಸಂಭಾಷಣೆ, ಶೃಂಗಾರದ ಸುಕುಮಾರತೆ ಕನ್ನಡದಲ್ಲಿ ಕೆಲವು ಕತೆಗಳಲ್ಲಿ ಮಾತ್ರ ಕಂಡುಬರುವ ಗುಣವಾಗಿದೆ. ಭಾಷೆಯ ಉಪಯೋಗದಲ್ಲಿ ಆನಂದಕಂದರು ಹೆಚ್ಚಿನ ಜಾಣ್ಮೆಯನ್ನು ತೋರಿದ್ದಾರೆ. ''ಸೀಮೆಯ ಕಲ್ಲಿನ ಶಾಸನದ ಭಾಷೆ', 'ಜೋಗತಿಕಲ್ಲು'ನಲ್ಲಿನ ಧರಮಣ್ಣನ ಕೆಚ್ಚು ತುಂಬಿದ ಕನ್ನಡ 'ಕಂಕಣದ ಕೈ'ಯ ಐತಿಹಾಸಿಕತೆಯನ್ನು ಹೊರಸೂಸುವ ಭಾಷೆ ಇವೆಲ್ಲ ಆನಂದಕಂದರ ಭಾಷಾ ಪ್ರಭುತ್ವನ್ನು ಸಾರುತ್ತವೆ'' (ಯುಗಧರ್ಮ ಹಾಗೂ ಸಾಹಿತ್ಯದರ್ಶನ, ಪುಟ ೨೦೫). ವಡ್ಡಾರಾಧನೆಯ ಕತೆಗಳ

ಸ್ವರೂಪವನ್ನು ನೆನಪಿಸುವ ಸೇಡಿಯಾಪು ಕೃಷ್ಣಭಟ್ಟರ ಭಾಷೆಯಂತೂ ''ಹೊಸನೀರು ಕೂಡಿಸಿದ ಹಳೆಯ ಉಕ್ಕಾಗಿದೆ' ಎಂಬ ಮಾತು ಸತ್ಯ. ಚನ್ನೆಮಣೆ, ನಾಗರಬೆತ್ತ ಇತ್ಯಾದಿ ಅವರ ಕತೆಗಳಲ್ಲಿ ಗೋಚರವಾಗುವ ಗದ್ಯಶೈಲಿಯ ಸೊಗಸು ಅನನ್ಯವಾದುದು.

ನಮ್ಮ ದೇಶಕ್ಕೆ ಆಂಗ್ಲರ ಆಗಮನದಿಂದಾಗಿ ರಾಜಕೀಯ ಆರ್ಥಿಕ ರಂಗಗಳಲ್ಲಿ ಹಲವಾರು ಏರುಪೇರುಗಳುಂಟಾದವು. ಆದರೆ ಶೈಕ್ಷಣಿಕ, ಸಾಹಿತ್ಯಿಕ, ಸಾಂಸ್ಕೃತಿಕ, ವೈಜ್ಞಾನಿಕ ಕ್ಷೇತ್ರಗಳಲ್ಲಿ ಯಾರೂ ಮರೆಯಲಾರದ ಮಹತ್ವದ ಕಾರ್ಯಗಳಾಗಿವೆ. ಇಂಗ್ಲಿಷ್ ಶಿಕ್ಷಣ ಇಲ್ಲಿ ಆರಂಭವಾದ ಮೇಲೆ ಅನೇಕ ಕ್ಷೇತ್ರಗಳಲ್ಲಿ ಮಹತ್ವಪೂರ್ಣ ಬದಲಾವಣೆಯೇ ಆಗಿಬಿಟ್ಟಿತು. ಕನ್ನಡ ಸಾಹಿತ್ಯವೂ ಈ ಬದಲಾವಣೆಗೆ ಹೊರತಾಗಲಿಲ್ಲ. ಈ ಹಿನ್ನೆಲೆಯಲ್ಲಿ ನೋಡಿದಾಗ ಒಂದು ಸಾಹಿತ್ಯ ಪರಂಪರೆ ತನ್ನೆಲ್ಲಾ ಸಾಧ್ಯತೆಗಳನ್ನೂ ಮುಗಿಸಿಕೊಂಡು ಸ್ಥಗಿತವಾಗುವ ಸಮಯಕ್ಕೆ ಮತ್ತೊಂದು ಸಾಹಿತ್ಯ ಪರಂಪರೆಯ ಹುಟ್ಟಿಗೆ ಕಾರಣವಾದ ಅಂಶಗಳನ್ನು ತನ್ನ ಆಂತರ್ಯದಲ್ಲಿಯೇ ಅಡಗಿಸಿಕೊಂಡಿರುತ್ತದೆ. ಇದರೊಂದಿಗೆ ಬೇರೆ ಬೇರೆ ದೇಶದ ಬೇರೆ ಸಂದರ್ಭದ ಅನೇಕ ಸಂಗತಿಗಳು ನೂತನ ಸಾಹಿತ್ಯ ಸೃಷ್ಟಿಗೆ ಕಾರಣವಾಗುತ್ತವೆ. ಹೀಗೆ ನೋಡಿದರೆ ನವೋದಯ ಸಾಹಿತ್ಯಕ್ಕಿದ್ದ ಪ್ರೇರಣೆಗಳು ಹಲವಾರು. ವಸಾಹತುಶಾಹಿಯ ಸಂಸ್ಕೃತಿಯನ್ನು ಹತ್ತಿಕ್ಕುವ, ಸ್ವದೇಶಿ ಸಂಸ್ಕೃತಿಯನ್ನು ವೈಭವೀಕರಿಸುವ, ತುರ್ತು ಮತ್ತು ತುಡಿತಗಳಿದ್ದವು. ನಂತರ ಬಂದ ಪ್ರಗತಿಶೀಲರಿಗೆ ವಾಸ್ತವ ಬದುಕು ಮುಖ್ಯವಾಯಿತು. ಮೊದಮೊದಲು ರಷ್ಯನ್ ಹಾಗೂ ಹಿಂದಿ ಕತೆಗಳ ಅನುವಾದದಿಂದ ಪ್ರಗತಿಶೀಲ ಕತೆಗಳ ಪರಿಚಯ ವಾಗತೊಡಗಿತು. ಈ ಪ್ರಭಾವದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗದೆ ಕಾವ್ಯ ಮತ್ತು ನಾಟಕಗಳಿಂದ ದೂರ ಸರಿದು ತರಾಸು, ನಿರಂಜನ, ಕಟ್ಟೀಮನಿ, ಚದುರಂಗರು ಕತೆಗಳನ್ನು ಬರೆಯಲು ತೊಡಗಿದರು. ಇದಕ್ಕೂ ಮುನ್ನ ದೀನ ದಲಿತರು ಕಾರ್ಮಿಕರು ಮತ್ತು ಶೂದ್ರರ ಬಗ್ಗೆ ಸಾಹಿತ್ಯ ರಚನೆ ಯಾಗಿರಲಿಲ್ಲ. ಈ ಕಾರಣವನ್ನು ಪ್ರಮುಖವಾಗಿಟ್ಟುಕೊಂಡು ಕನ್ನಡ ಪ್ರಗತಿಶೀಲರು ಹಿಂದಿನ ಸಾಹಿತ್ಯಕ್ಕೆ ಗಂಭೀರ ಪ್ರತಿಕ್ರಿಯೆಯನ್ನು ಸೂಚಿಸತೊಡಗಿದರು. ಇವರ ದೃಷ್ಟಿಯಲ್ಲಿ ಹಳೆಯ ಸಾಹಿತ್ಯ ವೆಲ್ಲ ಬೂರ್ಜ್ವಾ ಸಾಹಿತ್ಯವಾಯಿತು. ಈ ವಾದಕ್ಕೆ ಆಕರ್ಷಿತರಾದ ಅನೇಕರು ಮನೋಧರ್ಮದ ದೃಷ್ಟಿಯಿಂದಲೇ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದರು. ಎಲ್ಲರಿಗೂ ಅರ್ಥವಾಗಬೇಕೆಂಬ ಉದ್ದೇಶ ದಿಂದಲೇ ಮೆಲೋ ಡ್ರಮಾಟಿಕ್ ಆಗುವುದು ಅನಿವಾರ್ಯವಾಯಿತೇನೋ ಎಂಬ ರಾಘವೇಂದ್ರ ರಾವ್ ಅವರ ಮಾತು ನಿಜ. ನಿರಂಜನರಂಥ ಪ್ರಜ್ಞಾವಂತ ಲೇಖಕರೂ ಸಹ ಉಪ ಭಾಷೆಗಳನ್ನು ಬಳಸುವಲ್ಲಿ ಹಿಂಜರಿದದ್ದನ್ನು ನೋಡಿದರೆ ಆ ಮಾತು ನಿಜವೆನಿಸುತ್ತದೆ.

ಹೆಚ್ಚು ಸಂಕೀರ್ಣವಾದ – ಸಮೃದ್ಧ ರೀತಿಯಲ್ಲಿ ಕನ್ನಡ ಭಾಷೆಯಲ್ಲಿ ಸೃಜನಶೀಲತೆಯನ್ನು ತಂದವರೆಂದರೆ ನವ್ಯಕತೆಗಾರರು. ಮಾತನಾಡುವ ಭಾಷೆಯೇ ಭಾವಾಭಿನಯವಾಗಬೇಕು ಎಂಬುದರಲ್ಲಿಯೇ ನವ್ಯದವರು ಉಳಿದವರಿಗಿಂತ ಭಿನ್ನರೆನಿಸಿದರು. ಕಾಲ್ಪನಿಕ ಅನುಭವ, ಕನಸು, ಭ್ರಮೆ, ಭ್ರಾಂತಿ – ಇವು ಬದುಕಿನ ಭಾಗವಾಗಿರುವುದರಿಂದ ಅವನ್ನು ನವ್ಯ ಬರಹಗಾರರು ಬಳಸಿ ಕೊಳ್ಳತೊಡಗಿದರು. ಅಲ್ಲದೆ ಕನ್ನಡ ಭಾಷೆಯ ಸೂಕ್ಷ್ಮತೆಗಳನ್ನು ಹೇಗೆ ಬಳಸಿಕೊಳ್ಳಬಹು ದೆಂಬುದನ್ನು ಸಾರ್ಥಕ್ಯಪಡಿಸಿದರು. ಭಾಷೆಯ ವಿವಿಧ ಬಗೆಯ ಲಯಗಳನ್ನು ಬಳಸುವುದರಲ್ಲಿ ಅನಂತಮೂರ್ತಿ, ಲಂಕೇಶ್, ಚಿತ್ತಾಲ, ಶಾಂತಿನಾಥ ದೇಸಾಯಿ, ರಾಮಚಂದ್ರ ಶರ್ಮಾ, ಸದಾಶಿವ, ಪೂರ್ಣಚಂದ್ರ ತೇಜಸ್ವಿ, ಬೆಸಗರಹಳ್ಳಿ ರಾಮಣ್ಣ, ದೇವನೂರ ಮಹಾದೇವ – ಮುಂತಾದವರು ಸಿದ್ಧಹಸ್ತರೆನಿಸಿದರು. ಪ್ರಗತಿಶೀಲರ ನಂತರ ಬಂದ ಈ ನವ್ಯರು ಭಾಷೆಯನ್ನು ದುಡಿಸಿಕೊಳ್ಳುವ ರೀತಿಯಲ್ಲಿ ಹೊಸತನ ಕಾಣಿಸಿತು. ಈ ಹಿನ್ನೆಲೆಯಿಂದ ನೋಡಿದಾಗ ''ಅನಂತಮೂರ್ತಿಯವರ ಕತೆಗಳಲ್ಲಿ ಕಾಣುವುದು ಅವರ ಭಾಷೆಯ ಕಾವ್ಯ ಸೂಕ್ಷ್ಮತೆ, ಭಾವಾನುವರ್ತಿಯ ಲಯ, ಉದ್ದಕ್ಕೂ ಕಾಣುವ ಸಾಂಕೇತಿಕತೆ ಬಂಧ ಪ್ರಜ್ಞೆ. ಹೀಗಾಗಿ ಅನಂತಮೂರ್ತಿ ಕತೆಗಳು ಒಂದು ಕವಿತೆಯ ಹಾಗೆ ಓದಿಸಿಕೊಳ್ಳುತ್ತವೆ.'' ಆದರೆ ನಗರ ಪ್ರಜ್ಞೆಯ ಮುಖ್ಯಲೇಖಕರಾದ ಶಾಂತಿನಾಥ ದೇಸಾಯಿಯವರ ಕತೆಗಳ ಭಾಷೆಗೆ ಕಾವ್ಯ ಸೂಕ್ಷ್ಮತೆಯಿಲ್ಲ, ಇವರ ಕತೆಗಳಲ್ಲಿ ಉದ್ವೇಗವಿಲ್ಲ. ಆದರೆ 'ಕ್ಷಿತಿಜ'ದಂಥ ಕತೆಯಲ್ಲಿ ಸ್ಪಷ್ಟ ಶಿಲ್ಪ, ಭಾಷೆಯಲ್ಲಿ ಹೆಚ್ಚು ನಯವಿರುವುದನ್ನು ಕಾಣಬಹುದು. ಸುಧಾಕರರ ಕತೆಗಳಲ್ಲಿ ನವೋದಯ ನವ್ಯ ಮಾರ್ಗಗಳ ಪ್ರಭಾವವಿರುವುದು ಗೋಚರವಾಗುತ್ತದೆ. ವಾಸ್ತವಲೋಕದ ಜೀವನವನ್ನು ಕಲೆಯಾಗಿಸಲು ಅವರು ಬಳಸಿದ ಭಾಷೆ ಓದುಗರನ್ನು ಆಕರ್ಷಿಸಿತು. ಗ್ರಾಮೀಣ ಪರಿಸರದ ನಾಣ್ಣುಡಿ, ನುಡಿಗಟ್ಟು, ಗಾದೆ ಮಾತು, ವಾಕ್ಯಸರಣಿಯನ್ನು ಬಳಸುವುದರಿಂದ ಇವರ ಕತೆಗಳಿಗೆ ಒಂದು ವಿಶಿಷ್ಟ ಆಯಾಮ ದೊರಕಿದಂತಾಯಿತು. ಯಶವಂತ ಚಿತ್ತಾಲರ ಕತೆಗಳು ನವ್ಯ ಕಥಾಕ್ಷೇತ್ರದಲ್ಲಿ ಹೊಸ ಅಧ್ಯಾಯವನ್ನೇ ಸೃಷ್ಟಿಸಿದವು. ಸೆರೆ, ಆಬೋಲಿನ, ಬೇನ್ಯಾ ಮುಂತಾದ ಸಂಕಲನಗಳ ಕತೆಗಳಲ್ಲಿ ಭಾಷೆಯ ಬಗೆಗಿನ ಹೊಸ ಅರಿವು, ಭಾವನೆ, ವಿಚಾರಗಳು ಜೊತೆ ಜೊತೆಯಲ್ಲಿ ಹರಿಯುವ ಕ್ರಮಬದ್ಧ ಬೆಳವಣಿಗೆಯನ್ನು ಕಾಣಬಹುದಾಗಿದೆ. ಭಾಷೆಯ ಅತಿಸಂಕೀರ್ಣ ಪ್ರಯೋಗಗಳ ಸತ್ವಶಾಲೀ ಪ್ರಯತ್ನಕ್ಕೆ ಇವು ಸಾಕ್ಷಿಯಾಗಿವೆ. ಇಂಥವರ ನಡುವೆ ಗ್ರಾಮಜೀವನವನ್ನು ಹೊಸ ರೀತಿಯಲ್ಲಿ ಬರೆದರು ಬೆಸಗರಹಳ್ಳಿ ರಾಮಣ್ಣ. ಹಳ್ಳಿಯ ಬದುಕಿನ ಪ್ರೀತಿ, ಪ್ರೇಮ, ದ್ವೇಷ, ವಾತ್ಸಲ್ಯ, ಭ್ರಷ್ಟತೆಗಳು ಅವರ ಕತೆಗಳ ಸ್ಥಾಯಿಭಾವಗಳಾದವು. ಭಾಷೆಯ ನಿರ್ವಹಣ ಕ್ರಮದಲ್ಲೂ ಹೊಸತನವನ್ನು ಮೆರೆದರು. ಗ್ರಾಮ್ಯ ಭಾಷೆಯ ವೈವಿಧ್ಯತೆ ಅವರ ಕತೆಗಳ ಅಂತಃಸತ್ವ. 'ಗಾಂಧಿ'ಯಂತಹ ಕತೆಗಳಲ್ಲಿ ಸಂಯಮದ ಭಾಷೆಯನ್ನು ಬಳಸಿದ್ದಾರೆ. ಬೆಸಗರಹಳ್ಳಿ ರಾಮಣ್ಣ, ದೇವನೂರು ಮಹಾದೇವ ಅವರು ಜನಪದ ಭಾಷೆಯನ್ನು ಕತೆಗಳಲ್ಲಿ ಬಳಸಿ ಹೊಸ ಸಂವೇದನೆಗೆ ಅಳವಡಿಸುವುದರ ಮೂಲಕ ನವ್ಯ ಕತೆಗಳಿಗೆ ಹೊಸ ಕಸುವನ್ನು ಮೂಡಿಸಿದರು. ಅಸಾಧ್ಯವಾದ ಸಂಯಮ, ನಿರ್ಲಿಪ್ತತೆ, ತೀವ್ರ ಏಕಾಂತತೆ, ಏಕಾಗ್ರತೆ ನವ್ಯಕತೆಗಳ ಭಾಷೆ ಹಾಗೂ ತಂತ್ರವನ್ನು ರೂಪಿಸಿದವು. ನವೋದಯ ಕತೆಗಾರರಿಗೆ ಭಾಷೆ ಭಾವನಾತ್ಮಕವಾಯಿತು. ನವ್ಯರಿಗೆ ಹಾಗಾಗಲಿಲ್ಲ. ಪ್ರಗತಿಶೀಲ ಬರಹಗಾರರು ಬಳಸುವ ಹಾಗೆ ಅದು ಬರೀ ಸಾಮಾಜಿಕ ಅನ್ಯಾಯದ ವಿರುದ್ಧ ಕೆಂಡಕಾರುವ ವಾಹಕವೂ ಅಲ್ಲ. ನವ್ಯಕತೆಗಾರರಿಗೆ ಭಾಷೆಯೆ ಮುಖ್ಯವಾಗಿ ಶೋಧಕದ ಸ್ಫಟಿಕದ ಸಲಾಕೆಯಾಯಿತು. ನವ್ಯದ ನಂತರದಲ್ಲಿ ಕನ್ನಡ ಭಾಷೆಯ ಬಳಕೆಯ ಬಗೆಗೆ ಎಚ್ಚರ ತೋರಿದ ಕತೆಗಾರರಿದ್ದಾರೆ. ದಲಿತ ಬಂಡಾಯದ ಸಂದರ್ಭದಲ್ಲಿ ಬಂದ ಕತೆಗಳಲ್ಲಿ ಏಕತಾನತೆ ಕತೆಗೆ ಪ್ರಾಪ್ತವಾಗಲಿಲ್ಲ. ಏಕೆಂದರೆ ಭಿನ್ನಭಿನ್ನ ಪ್ರದೇಶಗಳ ಭಾಷಾ ಬಳಕೆಯಿಂದಾಗಿ ಇಂತಹ ಏಕತಾನತೆ ಸ್ವಲ್ಪಮಟ್ಟಿಗಾದರೂ ಮರೆಯಾಯಿತು. ಈ ಸಂದರ್ಭದ ಕತೆಗಳು ಕನ್ನಡ ಕಥಾಸಾಹಿತ್ಯದಲ್ಲಿ ಹೊಸ ಅಲೆಯನ್ನು ಉಂಟುಮಾಡಿದವು. ಹಸಿವು, ದುಃಖ ದುಮ್ಮಾನ, ಶೋಷಣೆ ಕಥೆಯ ವಸ್ತುಗಳಾದವು. ದಲಿತರ ಮೇಲಿನ ಕ್ರೌರ್ಯ ಹಲ್ಲೆಗಳು, ಅವಮಾನದ ಪ್ರಸಂಗಗಳು ಕತೆಯೊಳಗೆ ಪ್ರವೇಶಿಸಿದವು. ಈ ರೀತಿಯ ಘಟನೆಗಳನ್ನು ಅತ್ಯಂತ ಕಲಾತ್ಮಕವಾಗಿ ಸೆರೆಹಿಡಿದವರೂ ಇದ್ದಾರೆ. ದೇವನೂರರ 'ದ್ಯಾವನೂರು', ಚೆನ್ನಣ್ಣ ವಾಲೀಕಾರರ 'ಕಪ್ಪು ಕಲೆಗಳು' 'ಕುತ್ತದಲ್ಲಿ ಕುದ್ದವರ ಕತೆಗಳು' ಬರಗೂರು ರಾಮಚಂದ್ರಪ್ಪ ನವರ 'ಕಪ್ಪು ನೆಲದ ಕೆಂಪು ಕಾಲು', 'ಬಯಲಾಟದ ಭೀಮಣ್ಣ', ಮೊಗಳ್ಳಿ ಗಣೇಶರ 'ಬುಗುರಿ', 'ಕಥನ' ಇವೆಲ್ಲ ದಲಿತ ಪ್ರಜ್ಞೆಯನ್ನು ಉಳಿಸಿಕೊಂಡ ಕಲಾತ್ಮಕ ಕೃತಿಗಳಾಗಿವೆ. ದಲಿತರ ಬದುಕನ್ನು ಸ್ಥಳೀಯ ಭಾಷೆಯಲ್ಲಿ ಅಭಿವ್ಯಕ್ತಿಸಿರುವ ರೀತಿಯನ್ನು ಇಲ್ಲಿ ಕಾಣಬಹುದು. ಬರಗೂರರು 'ಕ್ಷಾಮ', 'ಸತ್ತವನು', 'ಸ್ಫೋಟ', 'ಕಪ್ಪು ನೆಲದ ಕೆಂಪು ಕಾಲು' ಮೊದಲಾದ ಕತೆಗಳ ಮೂಲಕ ಶ್ರೀಮಂತರ ಮತ್ತು ಭೂಮಾಲೀಕರ ದಬ್ಬಾಳಿಕೆಯನ್ನು, ದಲಿತರ ದುಃಖವನ್ನು ಸಮರ್ಥವಾಗಿ ನಿರೂಪಿಸಿದರು. ಬಿ. ಟಿ. ಲಲಿತಾ ನಾಯಕ್‌ರು ಲಂಬಾಣಿ ಜನಾಂಗದ ಬಡತನ, ಆ ಬದುಕಿನ ಅಭದ್ರಸ್ಥಿತಿ, ಅಜ್ಞಾನ – ಇವೆಲ್ಲವನ್ನು ತಮ್ಮ ಕತೆಗಳಲ್ಲಿ ಚಿತ್ರಿಸಲು ಪ್ರಯತ್ನಿಸಿದರು. ಇವರಿಂದ ದಲಿತ ಸಾಹಿತ್ಯಕ್ಕೆ ಲಂಬಾಣಿ ಸಂಸ್ಕೃತಿಯ ವಿವರಗಳು ಹೊಸ ಸೇರ್ಪಡೆಯಾದಂತಾಯಿತು. ಇಂಥ ಹೊಸ ಸೇರ್ಪಡೆಗೆ ದಲಿತ ಬಂಡಾಯ ಚಳವಳಿಯೂ ಕಾರಣವೆನ್ನಬಹುದು. ವಾಲೀಕಾರರು ತಮ್ಮ ಅನುಭವದ ಗ್ರಹಿಕೆಯ ಅಭಿವ್ಯಕ್ತಿಗಾಗಿ ಉತ್ತರ ಕರ್ನಾಟಕದ ಜನಪದ ಭಾಷೆಯನ್ನು ಬಳಸಿ ಕೊಂಡು ಕತೆಗಳಿಗೆ ಜೀವ ತುಂಬಿದರು. ಅವರ ಕಥಾಸಂಕಲನಗಳು ಗ್ರಾಮಾಂತರ ಪ್ರದೇಶದ ದೀನದಲಿತರ ಬವಣೆಗಳನ್ನು ಕುರಿತವಾಗಿವೆ. ಅಲ್ಲಿಯ ಸಂಪರ್ಕ ದುಃಖ ಸಂಘರ್ಷ ಮಾನಸಿಕ ತಳಮಳ ಇತ್ಯಾದಿ ಗಳನ್ನು ಒಳಗೊಂಡಿರುವ ಅವರ ಕತೆಗಳು ದಲಿತ ಸಂವೇದನೆಯ ಜೊತೆಗೆ ದಲಿತ ಸಮುದಾಯಗಳಿಗೆ ಸಮಾನತೆ ಮತ್ತು ಸ್ವಾತಂತ್ರ್ಯ ಲಭಿಸಬೇಕೆಂಬ ಆಶಯವನ್ನು ಎತ್ತಿಹಿಡಿದವು. ಮನಜರು 'ಬುರುಡೆಗೆ ಸ್ವರ್ಗ' ಕಥಾ ಸಂಕಲನದಲ್ಲಿ ತಾವೊಬ್ಬ ಸಮರ್ಥ ಕತೆಗಾರರೆಂಬುದನ್ನು ಸಾಬೀತುಪಡಿಸಿದರು. ದಲಿತ ಬದುಕು ಇದರ ಆಂತರ್ಯವಾಗಿದೆ. ಇತ್ತೀಚಿನ ದಿನಗಳಲ್ಲಿ ಮೊಗಳ್ಳಿ ಗಣೇಶ ಉತ್ತಮ ಕತೆಗಾರರೆನಿಸಿದ್ದಾರೆ. ಇವರ ಪ್ರಥಮ ಕಥಾಸಂಕಲನ 'ಬುಗುರಿ'ಯಲ್ಲಿನ ಬಹಳಷ್ಟು ಕತೆಗಳು ಒಮ್ಮೆಗೇ ಆಕರ್ಷಿಸಿಬಿಡುತ್ತವೆ. ದಲಿತ ಪರಿಸರವೇ ಇಲ್ಲಿದ್ದು ಈ ಸಮುದಾಯದ ಸಂಕಷ್ಟಗಳು ಇಲ್ಲಿ ಅನಾವರಣಗೊಂಡಿವೆ. ಸೃಜನಶೀಲತೆ ಇವರಿಗೆ ಸಿದ್ಧಿಸಿದೆ ಎಂಬುದಕ್ಕೆ 'ಭತ್ತ', 'ಬುಗುರಿ',

'ಒಂದು ಹಳೇ ಚಡ್ಡಿ', 'ಈ ಮೇಳಕ್ಕುಂಟೇನಯ್ಯ ಕೊನೆ' ಕತೆಗಳನ್ನು ಹೆಸರಿಸಬಹುದು. ಹಾಗೆಯೇ ಅರವಿಂದ ಮಾಲಗತ್ತಿ, ಈರಣ್ಣ ಕೋಸಗಿ, ಜನಾರ್ದನ ಎರ್ಪಕಟ್ಟೆ, ಬಿ. ಚಿನ್ನಸ್ವಾಮಿ, ಬಿ. ಟಿ. ಜಾಹ್ನವಿ, ಬಸವಲಿಂಗಯ್ಯ, ಬಾನಂದೂರು ಕೆಂಪಯ್ಯ, ಮೋಹನ ನಾಗಮ್ಮನವರ, ಎಸ್. ಆರ್. ಗುರುನಾಥ್, ರಾಮಕೃಷ್ಣ ಗುಂದಿ, ಲಕ್ಷ್ಮಣ, ಸುಬ್ಬು ಹೊಲೆಯಾರ್, ಸೋಮಣ್ಣ ಹೊಂಗಳ್ಳಿ, ವೀರಯ್ಯ ಕಾಡುಕೊತ್ತನಹಳ್ಳಿ, ಬಸವರಾಜ ಕುಕ್ಕರಹಳ್ಳಿ, ಚಂದ್ರಕಾಂತ ವಡ್ಡು, ಭದ್ರಯ್ಯ ತಿಮ್ಮಸಂದ್ರ ಮೊದಲಾದವರು ತಮ್ಮ ಜೀವನಾನುಭವಗಳನ್ನು ಕತೆಯಾಗಿಸಲು ಪ್ರಯತ್ನಿಸಿದ್ದಾರೆ. ಕೆಲವರು ದಲಿತ ಬದುಕಿನ ಸಾಂಸ್ಕೃತಿಕ ವಿವರಗಳನ್ನು ಕಥಾಹಂದರಲ್ಲಿ ನೀಡುವಲ್ಲಿ ಸಫಲರಾಗಿದ್ದಾರೆ. ದಲಿತ ಸಂವೇದನೆ ಕಥಾಸಾಹಿತ್ಯದಲ್ಲಿ ಸ್ಪಷ್ಟರೂಪ ಪಡೆಯುವಲ್ಲಿ ಇವರು ಕಾರಣರಾಗಿದ್ದಾರೆ.

ಪ್ರಗತಿಶೀಲರು ಬಡತನದಲ್ಲಿ ಹೇಳುವ ಮಾತುಗಳಲ್ಲಿ ಕಲಾತ್ಮಕತೆ ಅಷ್ಟಾಗಿ ರುಚಿಸದು. ರಮ್ಯವಾದ ರೀತಿಯಲ್ಲಿ ಅವರು 'ಕೊನೆಯ ಗಿರಾಕಿ'ಯಂಥ ಕತೆಯಲ್ಲಿ ಬಡತನವನ್ನು ನಿರೂಪಿಸಿದರು. ದಲಿತ ಬಂಡಾಯ ಲೇಖಕರಲ್ಲಿ ಶ್ರೀಮಂತವಾದ ಬರವಣಿಗೆ ಲಭ್ಯವಾಗಿರುವುದರಿಂದ ಇಲ್ಲಿ ಕಲಾತ್ಮಕತೆ ರುಚಿಸುತ್ತದೆ. ಬಡತನ ಕಂಡು ರಾಚುವಂತೆ ತನಗೆ ತಾನೇ ಅರಳುತ್ತದೆ. ದೇವನೂರರ ಕತೆಗಳ ಭಾಷೆಯಲ್ಲಿ ಬಡತನ ಅರಳಿದರೆ ಪ್ರಗತಿಶೀಲರ ಕತೆಗಳಲ್ಲಿ ಮುದುರಿಸುತ್ತದೆ. ಆದರೆ ಮನಸ್ಸಿಗೆ ತಟ್ಟುವ ಹಾಗೆ ಭಾಷೆಯನ್ನು ಬಳಸುವವರ ಸಂಖ್ಯೆ ಇತ್ತೀಚಿನ ದಿನಗಳಲ್ಲಿ ಹೆಚ್ಚಾಗಿದೆ. ಕುಂ. ವೀರಭದ್ರಪ್ಪನವರ 'ಎಲುಗನೆಂಬ ಕೊರಚನೂ ಚವುಟನೆಂಬ ಹಂದಿಯೂ' ಕತೆಯು ಬಡತನದ ನಗ್ನ ಸ್ವರೂಪವೇ ಆಗಿದೆ. 'ಡೋಮ ಮತ್ತಿತರ ಕತೆಗಳು', 'ಭಗವತಿ' 'ಕಾಡು' ಸಂಕಲನಗಳ ಯಾವುದೇ ಕತೆ ತೆಗೆದುಕೊಂಡರೂ ಬಳ್ಳಾರಿಯ ಕನ್ನಡ ತೆಲುಗು ಮಿಶ್ರಿತ ಭಾಷೆ ಮಡುಗಟ್ಟಿರುವುದನ್ನು ಕಾಣಬಹುದು. ಬದುಕಿನ ಸಂಗತಿಗಳಿಗೆ ಸ್ಪಂದಿಸಿ ಆ ಸ್ಪಂದನಗಳನ್ನು ಭಾಷೆಯಲ್ಲಿ ಹಿಡಿದಿಡುವ ಕಲೆಗಾರಿಕೆ ಬೇಕು. ಕಲೆಯ ವೈವಿಧ್ಯತೆಗಳ ಕಡೆಗೆ ಆತನಿಗೆ ತುಡಿತವಿರಬೇಕು. ಇಷ್ಟೆಲ್ಲ ಆಗಿಯೂ ಆತ ಸೆಕ್ಯುಲರ್ ಆಗಿರಬೇಕು. ಇದನ್ನು ಬೋಳುವಾರ ಮಹಮದ್ ಕುಂಞಿ ಸಾಧಿಸಿದ್ದಾರೆನ್ನಬಹುದು. ದೇವರುಗಳ ರಾಜ್ಯದಲ್ಲಿ 'ಅತ್ತ ಇತ್ತಗಳ ಸುತ್ತಮುತ್ತ' ಸಂಕಲನದ ಕತೆಗಳಿರುವುದು ಮಂಗಳೂರು ಭಾಷೆಯಲ್ಲಿ. ಕಂಡದ್ದನ್ನು ತನಗೆ ಬರುವ ಹರಕು ಮುರುಕು ಭಾಷೆಯಲ್ಲಿ ಬರೆದರೂ ಕತೆಗೆ ಕಳೆ ಕಟ್ಟುತ್ತದೆ. ಆದರೆ ಕಾವ್ಯಕ್ಕೆ ಈ ಮಾತು ಅನ್ವಯಿಸುವುದಿಲ್ಲ. ಅದಕ್ಕೆ ತನ್ನದೇ ಆದ ಶಿಷ್ಟ ಭಾಷೆ ಬೇಕು. ಎಲ್ಲ ದಲಿತ ಕತೆಗಾರರೂ ಒಳ್ಳೆ ಕತೆಗಳನ್ನು ಬರೆದಿದ್ದಾರೆ, ನಿಜ. ಆದರೆ ಒಳ್ಳೆಯ ಕಾವ್ಯ ಕೊಟ್ಟಿದ್ದಾರೆ ಎಂದು ಹೇಳಲಿಕ್ಕೆ ಬರುವುದಿಲ್ಲ. ಅಂದರೆ ಕತೆಯಲ್ಲಿ ಭಾಷೆಯನ್ನು ಉಪಯೋಗಿಸುವುದು ಖುಷಿಯ ಸಂಗತಿ. ಅಲ್ಲಿ ವಸ್ತು ಗಹನವಲ್ಲ. ಆಯಾ ಪ್ರದೇಶದ ಭಾಷೆಯೇ ಮೀರಿ ಗೆಲ್ಲುತ್ತದೆ. ಬೋಳುವಾರ, ಮಹಮದ್ ಕಟ್ಪಾಡಿ, ಸಾರಾ ಅಬೂಬಕ್ಕರ್, ಅಬ್ದುಲ್ ರಶೀದ್, ಅಮರೇಶ್ ನುಗುಡೋಣಿ, ಕೃಷ್ಣಮೂರ್ತಿ ಹನೂರು, ಬಷೀರ್, ಹನೂರು ಚನ್ನಪ್ಪ, ಮೊಗಳ್ಳಿ ಗಣೇಶ, ವೈದೇಹಿ – ಇವರೆಲ್ಲ ತಮ್ಮ ಅಗಾಧ ಅನುಭವಗಳನ್ನು ಸುಂದರ ಕತೆಯಾಗಿಸಿದವರು. ತಮ್ಮ ಪರಿಸರದ ಗಾದೆ, ನುಡಿಗಟ್ಟು, ಪಡೆನುಡಿಗಳಷ್ಟೇ ಅಲ್ಲದೆ ಇಡೀ ವಾಕ್ಯ ಸರಣಿಯನ್ನು ಬಳಸುವುದರ ಮೂಲಕ ಕತೆಗೆ ಮಡಿಮೈಲಿಗೆ ಇಲ್ಲದಂತೆ ಮಾಡಿದರು. ಹೀಗಾಗಿ ವೈವಿಧ್ಯಮಯ ವಸ್ತುವಿನ ಆಯ್ಕೆಯಲ್ಲಿ ಭಾಷೆಯ ಬಳಕೆಯಲ್ಲಿ ಅನ್ವೇಷಣೆ ಚೆನ್ನಾಗಿಯೇ ನಡೆಯಿತು. ವಸ್ತು ಭಾಷೆಯಲ್ಲಿ ವರ್ತಮಾನದ ಕತೆಗಳು ಏಕತಾನತೆಯನ್ನು ಹೊಡೆದುಹಾಕಿದ್ದಲ್ಲದೆ ನವ್ಯಕತೆಗಳನ್ನು ಹಿಂದೆಹಾಕಿದವು. ನವ್ಯ ಸತ್ತದ್ದು ಇಂಥ ಏಕತಾನತೆಯಿಂದಲೇ. ಇದರಿಂದ ಬಿಡಿಸಿಕೊಂಡದ್ದರಿಂದ ವರ್ತಮಾನದ ಕತೆಗಳು ಜೀವಂತಿಕೆ ಪಡೆದವು. ದಲಿತ ಬಂಡಾಯ ಮೂಲಕ ಬುಡಕಟ್ಟು ಸಮಾಜದ ಬದುಕನ್ನು ಹೇಳುವ ಪ್ರಯತ್ನಗಳೂ ನಡೆದಿವೆ. ಆಸ್ತಿಯ ಕಲ್ಪನೆಯಾಗಲೀ ಮೋಹದ ಬಯಕೆಯಾಗಲೀ ಇಲ್ಲದ ಈ ಸಮುದಾಯದ ಬದುಕಿನ ವಿವರಗಳನ್ನು ದ್ವಿಭಾಷೆಯಲ್ಲಿ ಹೇಳುವ ಪ್ರಯತ್ನಗಳೂ ಜರುಗಿವೆ. ಕನ್ನಡ-ತುಳು ಬೆರೆತಿರುವ ದಕ್ಷಿಣ ಕನ್ನಡ, ಕನ್ನಡ-ತೆಲುಗು ಬೆರೆತ ಚಿತ್ರದುರ್ಗ, ತುಮಕೂರು, ಕನ್ನಡ-ತಮಿಳು ಬೆರೆತ ಚಾಮರಾಜನಗರ, ಕೋಲಾರ ಪರಿಸರದ ಕತೆಗಾರರು ಮಿಶ್ರಭಾಷೆಯಲ್ಲಿ ಬಹಳ ವಿಚಿತ್ರವಾಗಿ ಸಮರ್ಥ ಕತೆಗಳನ್ನು ನೀಡಿದ್ದಾರೆ. ಬಹಳಷ್ಟು ಕತೆಗಾರರು ಆಧುನೀಕರಣಗೊಳ್ಳುತ್ತಿರುವ ಗ್ರಾಮ ಸಮಾಜದ ಕತೆಗಳನ್ನು ಹೇಳುತ್ತಾರಾದರೂ ಬುಡಕಟ್ಟು ಸಮಾಜದ ಚಿತ್ರಣ ಅವರಿಗೆ ಅಪರಿಚಿತವಾಗಿಯೇ ಕಂಡಿತು. ಅದರ ಅಧ್ಯಯನ ಸಾಧ್ಯವಾಗಲೇ ಇಲ್ಲ. ನಾಗರಿಕತೆಯಿಂದ ದೂರವಿರುವ ಈ ಸಂಸ್ಕೃತಿಯನ್ನು ಸೃಜನಶೀಲಕತೆಗೆ ತಿರುಗಿಸುವುದಂತೂ ಕಷ್ಟದ ಕೆಲಸವೇ. ಈ ಶ್ರಮದ ಕೆಲಸವನ್ನು ಕೃಷ್ಣಮೂರ್ತಿ ಹನೂರು ತಮ್ಮ ಕತೆಗಳಲ್ಲಿ ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ಈ ರೀತಿ ಬರೆಯುವುದರಿಂದ ಉಪಸಂಸ್ಕೃತಿಗಳಿಗೆ, ಅಲ್ಲಿಯ ಬದುಕು ಮತ್ತು ಭಾಷೆಗೆ, ಘನತೆಯನ್ನು ತಂದುಕೊಟ್ಟಂತಾಯಿತೆಂದೇ ಹೇಳಬಹುದು.

ಡಾ|| ಜಿ. ಆರ್. ತಿಪ್ಪೇಸ್ವಾಮಿ
ರೀಡರ್, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು - ೬

**ಸಂ**ಸ್ಕೃತಿ ಹರಿಯುವ ನೀರಿನಂತೆ. ಅದು ನಿರಂತರ ಬೆಳವಣಿಗೆ ಉಳ್ಳದ್ದು. ಸೃಜನಶೀಲತೆ ಮತ್ತು ಕ್ರಿಯಾಶೀಲತೆ ಅದರ ಲಕ್ಷಣ. ಅದು ನಿಂತ ನೀರಾದರೆ ಕೊಳೆಯುತ್ತದೆ; ದುರ್ಗಂಧಯುಕ್ತವಾಗುತ್ತದೆ; ನಿಷ್ಕ್ರಿಯವಾಗುತ್ತದೆ. ಸಂಸ್ಕೃತಿ ಶತ ಶತಮಾನಗಳಿಂದ ಹರಿದುಬರುವಾಗ ಇನ್ನಿತರ ಸಂಸ್ಕೃತಿಗಳ ಹಲವಾರು ಅಂಶಗಳನ್ನು ಪಡೆದುಕೊಳ್ಳುತ್ತಾ ನೀರಿನ ತೊರೆ ನದಿಯಾಗಿ ಬೆಳೆದಂತೆ ಬೆಳೆಯುತ್ತದೆ. ಜೊತೆಗೆ ಅದು ತನ್ನ ಮೂಲ ಸ್ವರೂಪಕ್ಕೆ ಅಥವಾ ಅಂತಃಸತ್ವಕ್ಕೆ ಧಕ್ಕೆ ಬಾರದಂತೆ ನೋಡಿಕೊಳ್ಳುವುದು ಕೂಡ ಅದರ ಅಗತ್ಯ. ಇದು ನಮ್ಮ ವೈದಿಕ ಋಷಿಗಳಿಗೆ ಚೆನ್ನಾಗಿ ತಿಳಿದಿತ್ತು. ಆದಕ್ಕವರು ಜಗತ್ತಿನ ಎಲ್ಲಾ ಕಡೆಗಳಿಂದ ಸದ್ವಿಚಾರಗಳು ನಮ್ಮ ಕಡೆಗೆ ಬರಲಿ ಎಂದು ಘೋಷಿಸಿದರು. ಭಾರತೀಯ ಸಂಸ್ಕೃತಿ ಶತಶತಮಾನಗಳ ಇತಿಹಾಸವನ್ನು ಹಾದು ಬರುವಾಗ ಇನ್ನಿತರ ಸಂಸ್ಕೃತಿಗಳ ಅಂಶಗಳನ್ನು ಸ್ವೀಕರಿಸುತ್ತಾ ತನ್ನ ಅಂತಃಸತ್ವವನ್ನು ಉಳಿಸಿಕೊಂಡು ಬೆಳೆದಿದೆ. ಪ್ರಾಚೀನ ಕಾಲದಲ್ಲೇ ಗ್ರೀಕ್, ರೋಮನ್, ಪರ್ಷಿಯನ್ ಮತ್ತು ಚೀನಿ ನಾಗರಿಕತೆಗಳೊಂದಿಗೆ ಭಾರತೀಯ ಸಂಸ್ಕೃತಿ ಸಾಂಸ್ಕೃತಿಕ ಕೊಡು-ಕೊಳ್ಳುವಿಕೆಯ ವ್ಯವಹಾರ ನಡೆಸಿತ್ತು. ಮಧ್ಯ ಯುಗದಲ್ಲಿ ಭಾರತಕ್ಕೆ ಟರ್ಕರು, ಪರ್ಷಿಯನ್ನರು, ಅರಬರು, ಮಂಗೋಲರು, ಮುಘಲರು ಆಕ್ರಮಣಕಾರರಾಗಿ ಬಂದರು. ಬಂದವರು ಇಲ್ಲಿ ನೆಲೆಸಿದರು. ರಾಜ್ಯವನ್ನು ಕಟ್ಟಿ ಶತಮಾನಗಳ ಕಾಲ ಆಳ್ವಿಕೆ ನಡೆಸಿದರು. ಇವರೊಂದಿಗೆ ಇಸ್ಲಾಂ ಧರ್ಮ ಮತ್ತು ಸಂಸ್ಕೃತಿ ಭಾರತಕ್ಕೆ ಬಂತು. ಆದರೆ ಇರಾಕ್, ಇರಾನ್, ಸಿರಿಯ, ಈಜಿಪ್ಟ್, ಐಬೀರಿಯನ್ ಪರ್ಯಾಯ ದ್ವೀಪ ಮತ್ತು ಮಧ್ಯ ಏಷ್ಯಾದಲ್ಲಿ ಇಸ್ಲಾಂ ಪಸರಿಸಿದಂತೆ ಭಾರತದಲ್ಲಿ ಸಾಧ್ಯವಾಗಲಿಲ್ಲ. ಭಾರತೀಯ ಸಂಸ್ಕೃತಿಯ ಮಟ್ಟ ಜಗತ್ತಿನ ಇತರ ಬಲಿಷ್ಠ ಸಂಸ್ಕೃತಿಗಳ ಮಟ್ಟಕ್ಕೇನೂ ಕಡಿಮೆ ಇರಲಿಲ್ಲ. ಭಾರತೀಯ ಸಂಸ್ಕೃತಿ ತನ್ನ ಮೇಲಿನ ಯಾಜಮಾನ್ಯವನ್ನು ವಿರೋಧಿಸಿತು. ಇಸ್ಲಾಂ ಜಗತ್ತಿನ ಬೇರೆ ಕಡೆ ಮಾಡಿದುದನ್ನು ಭಾರತದಲ್ಲಿ ಮಾಡಲಾಗಲಿಲ್ಲ.

ಇದರಿಂದಾಗಿ ಜಗತ್ತಿನ ಎರಡು ಪ್ರಬಲ ಸಂಸ್ಕೃತಿ ಮತ್ತು ಧರ್ಮಗಳ ನಡುವೆ ಸಂಘರ್ಷ ಅನಿವಾರ್ಯವಾಯಿತು. ಯುದ್ಧಗಳು, ಮತಾಂಧತೆ, ಕ್ರೌರ್ಯ, ಶೋಷಣೆ, ಅನಾಗರಿಕ ವರ್ತನೆಗಳೂ ಭಾರತೀಯ ಇತಿಹಾಸದಲ್ಲಿ ಕಂಡುಬಂದವು. ಆದರೆ ಸಂಘರ್ಷ ಶಾಶ್ವತವಾಗಿರಲು ಸಾಧ್ಯವಿಲ್ಲ. ಹೊಂದಾಣಿಕೆ ಜಗದ ನಿಯಮ. ಎರಡೂ ಕಡೆಗಳಿಂದ ಸಾಮರಸ್ಯ ಮತ್ತು ಶಾಂತಿದೂತರು ಮುಂದೆ ಬಂದರು. ಹಿಂದೂಗಳ ಕಡೆಯಿಂದ ಭಕ್ತಿ ಪಂಥದ ಸಂತರು, ಇಸ್ಲಾಮಿನ ಕಡೆಯಿಂದ ಸೂಫಿ ಸಂತರು ಶಾಂತಿ ಸಾಮರಸ್ಯದ ಜೀವನ ಮಾರ್ಗ ಪ್ರತಿಪಾದಿಸಿದರು. ಇದರಿಂದ ಕೊಡು-ಕೊಳ್ಳುವಿಕೆಯ ಯುಗ ಪ್ರಾರಂಭವಾಯಿತು. ಹಿಂದೂ ಮುಸ್ಲಿಮರ ನಡುವೆ ಸೇತುವೆ ಕಟ್ಟುವ ಕೆಲಸವನ್ನು ಮಾಡಿದವರು ಸೂಫಿ ಸಂತರು. ವಿಭಿನ್ನ ಧರ್ಮ ಮತ್ತು ಸಂಸ್ಕೃತಿಗೆ ಸೇರಿದ ನಾವು ಜೊತೆಗೆ ಬಾಳಬೇಕಾದ ಅನಿವಾರ್ಯತೆಗೆ ಒಳಗಾಗಿದ್ದೇವೆ. ಇತಿಹಾಸದ ಯಾವ ಕಾಲದಲ್ಲೂ ಭೂಮಿಯ ಮೇಲೆ ಒಂದೇ ಧರ್ಮ ಇದ್ದದ್ದಿಲ್ಲ. ಇನ್ನು ಭವಿಷ್ಯದಲ್ಲಿ ಈ ಕನಸು ಕಾಣುವುದು ಮೂರ್ಖನಿಗೆ ಮಾತ್ರ ಸಾಧ್ಯ. ಸಾಮರಸ್ಯದ ಜೀವನ ಒಂದೇ ಮುಂದಿನ ದಾರಿ. ಇದು ಸಂತರ, ಸೂಫಿಗಳ ಮಾರ್ಗ.

ಇಸ್ಲಾಂ ಧರ್ಮದ ಅನುಭಾವಿಕ ಮುಖವೇ ಸೂಫಿ ಪಂಥ. ಇವರು ಸಾಂಪ್ರದಾಯಿಕ ನಿಯಮವನ್ನು ಮೀರಿದವರು. ಅಧ್ಯಾತ್ಮಿಕ ಅನುಭವ ಮಾತ್ರ ಇವರ ಗುರಿ. ಭಗವಂತನನ್ನು ಉತ್ಕಟವಾಗಿ ಪ್ರೇಮಿಸುವುದು ಮತ್ತು ಅವನಲ್ಲಿ ಒಂದಾಗುವುದು ಸೂಫಿಗಳ ಗುರಿ. ಒಬ್ಬ ಸೂಫಿ ಹೇಳುತ್ತಾನೆ "ಯಾರನ್ನು ನಾನು ಪ್ರೀತಿಸುವೆನೋ ಅವನೇ ನಾನಾಗಿದ್ದೇನೆ, ನಾನು ಪ್ರೀತಿಸುವ ಅವನು ನಾನಾಗಿದ್ದಾನೆ. ನಾನು ಪ್ರೀತಿಸುವುದೇ ನಾನಾಗುತ್ತೇನೆ. ಅದು ನನ್ನದಾಗುತ್ತದೆ." ಸೂಫಿಗಳಿಗೆ ಸಂಗೀತ, ನೃತ್ಯವೆಂದರೆ ತುಂಬಾ ಪ್ರೀತಿ. ಏಕೆಂದರೆ ಸಂಗೀತ ಮತ್ತು ನೃತ್ಯ ಅವರಿಗೆ ಭಕ್ತಿಯ ಪರಮೋನ್ನತ ಸ್ಥಿತಿ ತಲುಪಲು ನೆರವಾಗುತ್ತದೆ. ಭಕ್ತಿಗೀತೆ ಹಾಡುತ್ತಾ ಮೈಮರೆತು ನರ್ತಿಸುತ್ತಾ ಆ ಮೂಲಕ ದೈವಸಾಕ್ಷಾತ್ಕಾರ ಹೊಂದುವುದು ಇವರ ಗುರಿ. ಇವರು ಜಾತಿ, ಧರ್ಮ, ಸಂಸ್ಕೃತಿ, ಜನಾಂಗವೆಂಬ ಅಡ್ಡಗೋಡೆಯನ್ನು ದಾಟಿ ನಿಂತವರು.

ಜನಸಾಮಾನ್ಯರೊಂದಿಗೆ ಇವರ ಸಂಪರ್ಕ. ಜನರ ದೈನಂದಿನ ಸಮಸ್ಯೆ ನಿವಾರಣೆಗೆ ಇವರ ಪ್ರಯತ್ನ. ಸೂಫಿ ಸಂತರು ದೈವೀ ಅಂಶಗಳನ್ನು ಹೊಂದಿರುತ್ತಾರೆಂದು ಜನ ನಂಬಿದ್ದರು. ಆದ್ದರಿಂದ ಸುಲ್ತಾನರೂ, ಮುಸ್ಲಿಮರೂ, ಹಿಂದೂಗಳೂ ಇವರನ್ನು ಗೌರವಿಸುತ್ತಿದ್ದರು. ಉದಾಹರಣೆಗೆ, ಖ್ವಾಜಾ ಮೊಹಿದ್ದೀನ್ ಚಿಸ್ತಿ, ನಿಜಾಮುದ್ದೀನ್ ಓಲಿಯಾ, ಸಲೀಂ ಚಿಸ್ತಿ, ಗೇಸೂ ದರಾಜ್, ಬಂದೇ ನವಾಜ, ಶಿಶುನಾಳ ಶರೀಫ ಮುಂತಾದವರು ಹಿಂದೂ ಮತ್ತು ಮುಸ್ಲಿಮರ ಸಮಾನ ಗೌರವಕ್ಕೆ ಪಾತ್ರರಾದವರು. ಸೂಫಿಗಳು ವಾಸ ಮಾಡುತ್ತಿದ್ದ ಸ್ಥಳ (ಖಂಕಾ)ಗಳು ತೀರ್ಥ ಕ್ಷೇತ್ರಗಳಾದವು. ಜಾತಿ ಧರ್ಮ ಮೀರಿ ಜನರು ಸೂಫಿಗಳ ಆಶೀರ್ವಾದಕ್ಕಾಗಿ ಬರುತ್ತಿದ್ದರು. ಇವರ ಜೊತೆಗೆ ಪರ್ಶಿಯನ್ ಮತ್ತು ಅರಬಿ ಭಾಷೆಗಳು ಭಾರತಕ್ಕೆ ಬಂದವು. ಪರ್ಶಿಯನ್ ರಾಜ್ಯದ ಭಾಷೆ, ಅರಬಿ ಧಾರ್ಮಿಕ ಭಾಷೆ. ಈ ಎರಡು ಭಾಷೆಗಳು ಹಿಂದಿ ಮುಂತಾದ ಭಾರತೀಯ ಭಾಷೆಗಳೊಂದಿಗೆ ಬೆರೆತಾಗ ಉರ್ದು ಭಾಷೆ ಹುಟ್ಟಿಕೊಂಡಿತು. ಇದು ಜನಸಾಮಾನ್ಯರ ಭಾಷೆಯಾಯಿತು. ಸೂಫಿಗಳು ಉರ್ದುವಿನಲ್ಲಿ ಜನಸಾಮಾನ್ಯರಿಗೆ ಅರ್ಥವಾಗುವ ಜಾನಪದ ಗೀತೆಗಳ ಮಾದರಿಯ ಚಕ್ಕಿನಾಮಾ ಮತ್ತು ಚರ್ಖಾನಾಮಗಳನ್ನು ರಚಿಸಿದರು.



ಹಿಂದು ಸಂಸ್ಕೃತಿಯ ಹಲವು ಅಂಶಗಳನ್ನು ಸೂಫಿ ಸಂತರು ಸ್ವೀಕರಿಸಿದರು. ಭಾರತೀಯ ಸಂಗೀತವನ್ನು ಅವರು ಭಗವದುನ್ಮತ್ತರಾಗಲು ಉಪಯೋಗಿಸಿದರು. ಯೋಗಶಾಸ್ತ್ರ ಅವರ ಮೆಚ್ಚಿನ ವಿಷಯ. ಪ್ರಾಣಾಯಾಮದ ಉಪಯೋಗವನ್ನು ಅವರು ಬಹುಬೇಗನೆ ಕಂಡುಕೊಂಡರು. ನಾಥ ಪಂಥದ ಯೋಗಿಗಳಿಂದ ಹಾಗೂ ಹಠಯೋಗದ ಗ್ರಂಥ 'ಅಮೃತ ಕುಂಡ'ದಿಂದ ಸೂಫಿಗಳ ಮೇಲೆ ಬಹಳ ಪರಿಣಾಮ ವಾಗಿದೆ. ಶೇಖ್ ನೂರುದ್ದೀನ್ ಸಸ್ಯಾಹಾರವನ್ನು ಅನುಸರಿಸಲು ಕರೆಕೊಟ್ಟರು ಹಾಗೂ ತನ್ನನ್ನು 'ಋಷಿ' ಎಂದೇ ಕರೆಯಿಸಿಕೊಂಡರು. ಇವರ ಶಿಷ್ಯರೂ ಕೂಡ ಋಷಿ ಎನ್ನುವ ಪದ ಬಳಸಿದರು. ಖ್ಯಾತಸೂಫಿ ಸಂತ ಗೇಸೂ ದರಾಜ್ ಪರ್ಶಿಯನ್ ಕಾವ್ಯಕ್ಕಿಂತ ಹಿಂದಿ ಕಾವ್ಯ ಭಕ್ತಿ ಭಾವ ಸ್ಫುರಿಸಲು ಸಹಾಯಕವಾಗಿದೆ ಎನ್ನುತ್ತಾನೆ. ಚಿಸ್ತಿಯಾ ಪಂಥದ ಸೂಫಿಗಳು ವೈಷ್ಣವ ಗೀತೆಗಳನ್ನು ಭಗವದುನ್ಮತ್ತರಾಗಲು ಬಳಸಿದ್ದೂ ಇದೆ.

ಅಕ್ಬರ್ ಈ ಸಾಮರಸ್ಯದ ಕಾಲವನ್ನು ಪ್ರತಿನಿಧಿಸುತ್ತಾನೆ. ಹಿಂದುಗಳ ಮೇಲಿದ್ದ ನಿರ್ಬಂಧಗಳನ್ನು ಇವನು ತೆರವುಗೊಳಿಸಿದ. ಗೋಹತ್ಯೆ ನಿಷೇಧ, ಸೂರ್ಯ ಮತ್ತು ಅಗ್ನಿ ಆರಾಧನೆ, ಸಸ್ಯಾಹಾರದ ಅಭ್ಯಾಸ, ಸರ್ವಧರ್ಮ ಸಮಭಾವ ಮತ್ತು ಸಾಧ್ಯವಾದಷ್ಟು ಮಟ್ಟಿಗೆ ಅಹಿಂಸೆಯನ್ನು ಮೈಗೂಡಿಸಿಕೊಂಡ. ಇದೇ ಕಾಲಘಟ್ಟದ ಬಿಜಾಪುರದ ಸುಲ್ತಾನ ಇಮ್ಮಡಿ ಇಬ್ರಾಹಿಂ ಆದಿಲ್ ಷಾ, ನರಸಿಂಹ ದೇವರ ಭಕ್ತ, ತನ್ನನ್ನು ಜಗದ್ಗುರು ಎಂದು ಕರೆಯಿಸಿಕೊಂಡ. ಮಹಿಪತಿ ದಾಸರನ್ನು ತನ್ನ ಗುರುವಾಗಿ ಸ್ವೀಕರಿಸಿದ. ಭಾರತೀಯ ಸಂಗೀತದ ಮೇಲೆ ಕಿತಾಬ್-ಇ-ನೌರಸ್ ಎನ್ನುವ ಗ್ರಂಥ ರಚಿಸಿದ. ಈ ಗ್ರಂಥದಲ್ಲಿ ಸರಸ್ವತಿ ಮತ್ತು ಗಣಪತಿಯನ್ನು ಇವನು ಸ್ತುತಿಸುತ್ತಾನೆ. ಇವರ ಮೇಲೆಲ್ಲ ಭಕ್ತಿ ಸಂತರ ಮತ್ತು ಸೂಫಿಗಳ ಪ್ರಭಾವ ಎದ್ದು ಕಾಣಿಸುತ್ತದೆ.

ಈ ಸೂಫಿ ಸಂತರ ಸಮಾಧಿಗಳನ್ನು 'ದರ್ಗಾ' ಎಂದು ಕರೆಯುತ್ತಾರೆ. ಈ ಸಮಾಧಿಗಳಿಗೆ ಬಯಕೆ ಈಡೇರಿಸುವ ಶಕ್ತಿ ಇದೆ ಎಂದು ಜನರು ಪೂಜಿಸುತ್ತಾರೆ. ಇಲ್ಲಿ ನಡೆಯುವ ವಾರ್ಷಿಕ ಜಾತ್ರೆ 'ಉರುಸ್'ನಲ್ಲಿ ಹಿಂದೂ ಮುಸ್ಲಿಮರು ಭಾಗವಹಿಸುತ್ತಾರೆ. ಈ ಸೂಫಿ ಸಂತರ ದರ್ಗಾಗಳು ಸಾಂಸ್ಕೃತಿಕ ಸಾಮರಸ್ಯದ ಪ್ರತೀಕವಾಗಿವೆ.

ಪರ್ಶಿಯನ್ ಭಾಷೆ ಮಧ್ಯಯುಗೀನ ಭಾರತದಲ್ಲಿ ರಾಜ್ಯದ ಅಧಿಕೃತ ಭಾಷೆಯಾಗಿತ್ತು. ಕೆಲಸ ಗಿಟ್ಟಿಸಿಕೊಳ್ಳಲು ಭಾರತೀಯರು ಈ ಭಾಷೆ ಕಲಿತರು. ಸಂಸ್ಕೃತದ ಮಹಾನ್ ಗ್ರಂಥಗಳೆಲ್ಲ ಪರ್ಶಿಯನ್ ಭಾಷೆಗೆ ಅನುವಾದಗೊಂಡವು. ಪರ್ಶಿಯನ್ ಅರಾಬಿಕ್ ಭಾಷೆಯ ಗ್ರಂಥಗಳೂ ಭಾರತೀಯ ಭಾಷೆಗಳಲ್ಲಿ ಅನುವಾದವಾದವು. ಪರ್ಶಿಯನ್ ಮತ್ತು ಅರಾಬಿಕ್ ಭಾಷೆಗಳಿಂದ ಭಾರತೀಯ ಭಾಷೆಗಳು ಹಲವಾರು ಶಬ್ದಗಳನ್ನು ಪಡೆದು ಸಮೃದ್ಧವಾಗಿವೆ. ಮೊದಲೇ ತಿಳಿಸಿದಂತೆ ಈ ಎಲ್ಲ ಪ್ರಕ್ರಿಯೆಗಳ ಫಲಿತಾಂಶ ಉರ್ದು ಭಾಷೆಯ ಹುಟ್ಟು. ಉರ್ದು ಭಾಷೆಯಲ್ಲಿ ಬಹಳಷ್ಟು ಕೃತಿಗಳು ರಚನೆಯಾಗಿವೆ. ಗಜಲ್, ಮಸ್ನವಿ, ಕಸೀದಾ, ರೇಖಾ, ರೇಖ್ತಿ ಹೀಗೆ ಉರ್ದು ಕಾವ್ಯದ ಎಲ್ಲಾ ಪ್ರಕಾರಗಳು ಇಲ್ಲಿ ಅಭಿವೃದ್ಧಿ ಹೊಂದಿದವು. ಹಾಗೆಯೇ ವರ್ತಮಾನ ಕಾಲವನ್ನು ಭವಿಷ್ಯಕ್ಕಾಗಿ ದಾಖಲಿಸುವ ಇತಿಹಾಸ ರಚನಾ ಕಲೆಯನ್ನು ಟರ್ಕರು, ಇರಾನಿಯನ್ನರು, ಅರಬ್ಬರು ಮತ್ತು ಮುಘಲರು ಭಾರತದಲ್ಲಿ ಜನಪ್ರಿಯಗೊಳಿಸಿದರು. ಅಬುಲ್ ಫಜಲ್, ಫೈಜಿ, ಬದೌನಿ, ಖಾಫಿ ಖಾನ್, ಇನಾಯತ್ ಖಾನ್, ಈಶ್ವರ್ ದಾಸ್, ಫೆರಿಷ್ತ, ಶಿರಾಜಿ, ಇಸಾಮಿ ಮುಂತಾದ ಮಧ್ಯಯುಗೀನ ಇತಿಹಾಸಕಾರರು ತಮ್ಮ ಕಾಲದ ಘಟನೆಗಳನ್ನು ದಾಖಲಿಸಿರುವುದು ಆಧುನಿಕ ಕಾಲಕ್ಕೊಂದು ಕೊಡುಗೆಯಾಗಿದೆ.

ಭಾಗ - ೨

ಇಸ್ಲಾಮಿಕ್ ಮತ್ತು ಹಿಂದು ಸಂಸ್ಕೃತಿಗಳ ಸಂಗಮದಿಂದ ಭಾರತೀಯ ಚಿತ್ರಕಲೆ, ವಾಸ್ತುಶಿಲ್ಪ, ಸಂಗೀತ ಕರಕುಶಲ ಕಲೆಗಳೂ ಪ್ರಭಾವಿತವಾದವು.

ಭಾರತೀಯ ಸಂಗೀತ ದೆಹಲಿಯ ಸುಲ್ತಾನರನ್ನು, ಮುಘಲರನ್ನು ಆದಿಲ್ ಶಾಹಿಯರನ್ನು ಮತ್ತು ಸೂಫಿಗಳನ್ನು ತುಂಬಾ ಆಕರ್ಷಿಸಿತು. ಅಮೀರ್ ಖುಸ್ರು ಖ್ಯಾತ ಪರ್ಶಿಯನ್ ಕವಿ ಭಾರತೀಯ ಸಂಗೀತಕ್ಕೆ ಮಾರುಹೋದ. ಇದು ಮನಸ್ಸು ಮತ್ತು ಆತ್ಮವನ್ನು ಸೂರೆಗೊಳ್ಳುತ್ತದೆ; ಭಾರತೀಯ ಸಂಗೀತ ಎಲ್ಲಾ ದೇಶಗಳ ಸಂಗೀತಕ್ಕೂ ಮಿಗಿಲು ಎನ್ನುತ್ತಾನೆ ಖುಸ್ರು. ಇವನ ಪ್ರಯತ್ನದಿಂದ ಪರ್ಶಿಯನ್ ಸಂಗೀತ ಭಾರತೀಯ ಸಂಗೀತದೊಡನೆ ಬೆರೆಯಲಾರಂಭಿಸಿತು. ಅಲ್ಲಾವುದ್ದೀನ್ ಖಿಲ್ಜಿ ದಕ್ಷಿಣ ಭಾರತದ ಮೇಲೆ ದಾಳಿ ನಡೆಸಿದಾಗ ಗೋಪಾಲನೆಂಬ ಪ್ರಸಿದ್ಧ ಸಂಗೀತಗಾರ ಅವನ ಸೆರೆ ಸಿಕ್ಕ. ಅಮೀರ್ ಖುಸ್ರು ಗೋಪಾಲನಿಂದ ಸಂಗೀತ ಅಭ್ಯಸಿಸಿದ ಎಂದು ಹೇಳಲಾಗಿದೆ. ಖಯಾಲ್, ತರಾನ, ಖ್ವಾಲ್, ಠುಮ್ರಿ ಮುಂತಾದ ಹಲವು ಸಂಗೀತ ಪ್ರಕಾರಗಳನ್ನು, ತಬಲಾ ಸಿತಾರ್ ಮುಂತಾದ ಸಂಗೀತವಾದ್ಯಗಳನ್ನು ಇವನು ನಮಗೆ ನೀಡಿದ್ದಾನೆ.

ಮುಘಲರು ಮತ್ತು ಅವರ ಸಮಕಾಲೀನ ಅರಸರು ಸಂಗೀತಪ್ರಿಯರು. ಅಕ್ಬರ್ ಭಾರತವಲ್ಲದೆ ಟರ್ಕಿ, ಇರಾನ್ ಮತ್ತು ಅರೇಬಿಯಾದಿಂದ ಸಂಗೀತಕಾರರನ್ನು ಕರೆಯಿಸಿದ್ದ. ಸ್ವಾಮಿ ಹರಿದಾಸರ ಶಿಷ್ಯ ತಾನಸೇನ ಭಾರತೀಯ ಸಂಗೀತಕ್ಕೆ ಕೊಟ್ಟ ಕೊಡುಗೆ ಅಮೂಲ್ಯ. ಇವನಲ್ಲದೆ ಜಗನ್ನಾಥ, ರಾಮದಾಸ ಮುಂತಾದ ಮಹಾನ್ ಸಂಗೀತಗಾರರು ಮುಘಲರ ಆಸ್ಥಾನದಲ್ಲಿದ್ದರು. ಮುಘಲರಲ್ಲದೆ ಗ್ವಾಲಿಯರ್‌ನ ಮಾನಸಿಂಗ್ ಸ್ವತಃ ಸಂಗೀತಗಾರ ಮತ್ತು ಸಂಗೀತದ (ಧ್ರುಪದ್ ಶೈಲಿ) ಪ್ರೋತ್ಸಾಹಕ. ಇವನ ಕಾಲದಲ್ಲಿ ಗ್ವಾಲಿಯರ್ ಸಂಗೀತದ ಕೇಂದ್ರವಾಗಿತ್ತು. ಬಹುಶಃ ಬೈಜು ಅಥವಾ ಬಾವ್‌ರಾ ಮತ್ತು ತಾನಸೇನ ಗ್ವಾಲಿಯರ್‌ನಲ್ಲಿಯೇ ಸಂಗೀತ ಅಭ್ಯಾಸ ಮಾಡಿರಬಹುದು. ಗುಜರಾತಿನ ಸುಲ್ತಾನ ಬಹಾದುರ್ ಷಾ, ಮಾಳವದ ಸುಲ್ತಾನ ಬಾಜ್ ಬಹಾದುರ್, ಬಿಹಾರದ ಆದಿಲ್ ಷಾ ಮತ್ತು ಬಿಜಾಪುರದ ಎರಡನೇ ಇಬ್ರಾಹಿಂ ಸಾದಿಲ್ ಷಾ ಖ್ಯಾತ ಸಂಗೀತಗಾರರೂ, ಭಾರತೀಯ ಸಂಗೀತ ಪ್ರೋತ್ಸಾಹಕರೂ ಆಗಿದ್ದರು. ಇಬ್ರಾಹಿಂ ಆದಿಲ್ ಷಾ ಸಂಗೀತ ವಿದ್ವಾಂಸ. ಅವನು ಉರ್ದುವಿನಲ್ಲಿ ಬರೆದ ಕಿತಾಬ್-ಇ-ನವ್‌ರಸ್ ಎಂಬ ಗ್ರಂಥದಲ್ಲಿ ವಿವಿಧ ಬಗೆಯ ರಾಗಗಳ ರೂಪ ರೇಷೆ ಹಾಗೂ ವಿಧಾನಗಳನ್ನು ನೀಡಿದ್ದಾನೆ. ಸಂಗೀತದ ಪ್ರೋತ್ಸಾಹಕ್ಕೆ ನವರಸಪುರ ಎಂಬ ನಗರವನ್ನೂ ಇವನು ಕಟ್ಟಿಸಿದ. ಸಂಗೀತ ವಿದ್ವಾನ್ ನರಸಿಂಹರಾಯನ ಬಳಿಯಲ್ಲಿ ಇಬ್ರಾಹಿಂ ಸಂಗೀತ ಕಲಿತಿದ್ದನಂತೆ. ವಿಜಯನಗರ ಕಾಲದ ಕಲ್ಲಣ ತನ್ನ 'ಸಂಗೀತ ರತ್ನಾಕರ'ದ ಮೇಲಿನ ಭಾಷ್ಯದಲ್ಲಿ ಮತ್ತು ರಾಮಾಮಾತ್ಯ ತನ್ನ 'ಸ್ವರ ಮೇಳ ಕಲಾನಿಧಿ'ಯಲ್ಲಿ ಪರ್ಶಿಯನ್ ಸಂಗೀತದ ಪ್ರಭಾವ ಕರ್ನಾಟಕದ ಸಂಗೀತದ ಮೇಲೂ ಆಗಿದೆ ಎನ್ನುವುದನ್ನು ಒಪ್ಪಿಕೊಳ್ಳುತ್ತಾರೆ.

> **ಸಂಸ್ಕೃತಿ ಹರಿಯುವ ನೀರಿನಂತೆ. ಅದು ನಿರಂತರ ಬೆಳವಣಿಗೆ ಉಳ್ಳದ್ದು. ಸೃಜನಶೀಲತೆ ಮತ್ತು ಕ್ರಿಯಾಶೀಲತೆ ಅದರ ಲಕ್ಷಣ. ಅದು ನಿಂತ ನೀರಾದರೆ ಕೊಳೆಯುತ್ತದೆ; ದುರ್ಗಂಧಯುಕ್ತವಾಗುತ್ತದೆ; ನಿಷ್ಕ್ರಿಯವಾಗುತ್ತದೆ. ಸಂಸ್ಕೃತಿ ಶತಶತಮಾನಗಳಿಂದ ಹರಿದುಬರುವಾಗ ಇನ್ನಿತರ ಸಂಸ್ಕೃತಿಗಳ ಹಲವಾರು ಅಂಶಗಳನ್ನು ಪಡೆದುಕೊಳ್ಳುತ್ತಾ ನೀರಿನ ತೊರೆ ನದಿಯಾಗಿ ಬೆಳೆದಂತೆ ಬೆಳೆಯುತ್ತದೆ, ಜೊತೆಗೆ ಅದು ತನ್ನ ಮೂಲ ಸ್ವರೂಪಕ್ಕೆ ಅಥವಾ ಅಂತಃಸತ್ವಕ್ಕೆ ಧಕ್ಕೆ ಬಾರದಂತೆ ನೋಡಿಕೊಳ್ಳುವುದು ಕೂಡ ಅದರ ಅಗತ್ಯ.**

ಮುಘಲರು ಭಾರತಕ್ಕೆ ಬರುವ ಪೂರ್ವದಲ್ಲಿ ಭಾರತದಲ್ಲಿ ಚಿತ್ರಕಲೆ ಸಮೃದ್ಧವಾಗಿ ಬೆಳೆದಿತ್ತು. ಜೈನ, ಪಾಲಿ ಮತ್ತು ರಾಜಸ್ಥಾನಿ ಶೈಲಿಯು ದೇಶದಲ್ಲಿ ಹಬ್ಬಿಕೊಂಡಿತ್ತು. ಮುಘಲರೊಡನೆ ಭಾರತಕ್ಕೆ ಪರ್ಶಿಯಾದ ಚಿತ್ರಕಲಾವಿದರೂ ಬಂದರು. ಪರ್ಶಿಯಾದ ಚಿತ್ರಕಲೆ ಚೀನಾದ ಚಿತ್ರಕಲೆಯನ್ನು ತನ್ನಲ್ಲಿ ಜೀರ್ಣಿಸಿಕೊಂಡು ಚೆನ್ನಾಗಿ ಬೆಳೆದಿತ್ತು. ಮುಘಲರು ಭಾರತೀಯ ಕಲಾವಿದರನ್ನೂ ಪರ್ಶಿಯಾದ ಕಲಾವಿದರನ್ನೂ ಒಟ್ಟಿಗೆ ಕೆಲಸಕ್ಕೆ ಹಚ್ಚಿದರು. ಜೊತೆಯಾಗಿ ಕೆಲಸ ಮಾಡುವಾಗ ಒಂದರ ತಂತ್ರ ನೈಪುಣ್ಯದ ಪ್ರಭಾವವು ಮತ್ತೊಂದರ ಮೇಲೆ ಬೀಳುವುದು ಸಹಜ. ಇದರ ಪರಿಣಾಮವಾಗಿ ಪರ್ಶಿಯಾ ಮತ್ತು ಭಾರತೀಯ ಶೈಲಿಗಳ ಮಧುರ ಮಿಲನವಾಯಿತು. ಇದಕ್ಕೆ ಮುಘಲ್ ಚಿತ್ರ ಶೈಲಿ ಎನ್ನುವರು.

ಹುಮಾಯೂನ್ ಪರ್ಶಿಯಾದಿಂದ ಪ್ರಖ್ಯಾತ ಚಿತ್ರ ಕಲಾವಿದರಾದ ಮೀರ್ ಸಯ್ಯದ್ ಅಲಿ ಮತ್ತು ಮುಲ್ಲಾ ಅಬ್ದುಲ್ ಸಮದ್‌ರನ್ನು ಭಾರತಕ್ಕೆ ಕರೆದುಕೊಂಡು ಬಂದ. ಇವರು ಪರ್ಶಿಯಾದ ಶೈಲಿಯನ್ನು ಮುಘಲರ ಆಸ್ಥಾನದಲ್ಲಿ ಪರಿಚಯಿಸಿದರು. ಅಕ್ಬರ್ ಪರ್ಶಿಯಾ ಮತ್ತು ಭಾರತದ ವಿವಿಧೆಡೆಯಿಂದ ಚಿತ್ರ ಕಲಾವಿದರನ್ನು ತನ್ನ ಆಸ್ಥಾನಕ್ಕೆ ಕರೆಯಿಸಿಕೊಂಡು ಸಂಸ್ಕೃತ ಮತ್ತು ಪರ್ಶಿಯಾದ ಸಾಹಿತ್ಯ ಗ್ರಂಥಗಳಿಗಾಗಿ ಉತ್ತಮ ಚಿತ್ರಗಳನ್ನು ರಚಿಸುವ ಕೆಲಸ ವಹಿಸಿದ. ಮಹಾಭಾರತವನ್ನು ಪರ್ಶಿಯನ್ ಭಾಷೆಗೆ

'ರಜಮ್ ನಾಮ' ಎಂದು ಭಾಷಾಂತರ ಮಾಡಲಾಗಿದೆ. ಈ ಗ್ರಂಥದಲ್ಲಿ ೧೬೯ ಚಿತ್ರಗಳಿವೆ. ೫೪ ಚಿತ್ರ ಕಲಾವಿದರು ಇದರಲ್ಲಿ ಕೆಲಸ ಮಾಡಿದ್ದಾರೆ. ದಾಸವಂತ್ ಮತ್ತು ಬಸವಾನ್ ಅಕ್ಬರನ ಮೆಚ್ಚಿನ ಚಿತ್ರಕಲಾವಿದರು. ಅಕ್ಬರ್ ೧೫೬೭ರಲ್ಲಿ ಅರಬಿ ಮಹಾಕಾವ್ಯ 'ಹಮ್‌ಝೂ ನಾಮಾ'ವನ್ನು ಪರ್ಶಿಯನ್ ಭಾಷೆಗೆ ಅನುವಾದಿಸಲು ಆದೇಶಿಸಿದ. ಈ ಗ್ರಂಥದಲ್ಲಿ ಹಲವಾರು ಚಿತ್ರಗಳಿವೆ. ಇದನ್ನು ಪೂರ್ತಿಗೊಳಿಸಲು ೧೫ ವರ್ಷ ಹಿಡಿಯಿತು. ನೂರಾರು ಚಿತ್ರ ಕಲಾವಿದರು ಇದರಲ್ಲಿ ಕೆಲಸ ಮಾಡಿದ್ದಾರೆ. ಮುಘಲರ ಕಾಲದಲ್ಲಿ ಕಾಗದದ ಬಳಕೆ ಜನಪ್ರಿಯವಾಯಿತು. ಅದರಂತೆ ಭಿತ್ತಿಚಿತ್ರಗಳು ಕಡಿಮೆಯಾಗಿ ಕಿರುವರ್ಣ ಅಥವಾ ಚಿಕಣಿ ಚಿತ್ರಗಳು ಜನಪ್ರಿಯವಾದವು.

ಜಹಾಂಗೀರ್ ಚಿತ್ರಕಲೆಯ ಪ್ರೇಮಿ. ಇವನ ಸ್ಥಾನದಲ್ಲಿ ಅಬುಲ್ ಹಸನ್, ಮನೋಹರ, ಬಿಶುನದಾಸ, ಗೋವರ್ಧನ, ಮನ್ಸೂರ್ ಮುಂತಾದ ಖ್ಯಾತ ಚಿತ್ರ ಕಲಾವಿದರಿದ್ದರು. ಜಹಾಂಗೀರ್ ಯೂರೋಪಿಯನ್ ಚಿತ್ರಪಟಗಳನ್ನು ತರಿಸಿಕೊಳ್ಳುತ್ತಿದ್ದ. ಇವನ ಕಾಲದಲ್ಲಿ ಭಾರತೀಯ, ಯೂರೋಪಿಯನ್ ಮತ್ತು ಇರಾನಿಯನ್ ಚಿತ್ರಕಲೆಗಳ ಮಿಲನವಾಯಿತು. ತಮ್ಮ ಹಿಂದಿನ ಸಾಧನೆ, ಪ್ರಕೃತಿ ಸೌಂದರ್ಯ ಮತ್ತು ವ್ಯಕ್ತಿ ಚಿತ್ರಗಳನ್ನು ಚಿತ್ರಿಸುವುದರಲ್ಲಿ ಮುಘಲರು ಆಸಕ್ತಿ ವಹಿಸಿದ್ದರು. ಚಿತ್ರಕಲೆಗೆ ಮುಘಲರ ಕೊಡುಗೆ ಅಪಾರ.

ಟರ್ಕರು, ಇರಾನಿಯನ್ನರು, ಅಫಘನ್ನರು ಮತ್ತು ಮುಘಲರು ಉದ್ಯಾನವನ ಪ್ರಿಯರು. ಅವರಿಗೆ ಉದ್ಯಾನವನಗಳೆಂದರೆ ನಾಗರಿಕ ಜೀವನದ ಜೀವಾಳ. ಅವರ ಉದ್ಯಾನವನಗಳೆಂದರೆ ತೋಟಗಳಲ್ಲ. ಅದು ಪ್ರಕೃತಿ ಸೌಂದರ್ಯದ ಮರುಸೃಷ್ಟಿ. ಭಾರತದಲ್ಲಿ ಮಧ್ಯಯುಗೀನ ಕಾಲದಲ್ಲಿ ಉದ್ಯಾನವನಗಳನ್ನು ಮುಘಲರು ಜನಪ್ರಿಯಗೊಳಿಸಿದರು. ಇವನ್ನು ಚಾರ್-ಬಾಗ್ ಎನ್ನುತ್ತಿದ್ದರು. ಬಾಬರನ ಆರಾಮ್ ಬಾಗ್, ಜಹಾಂಗೀರನ ಶಾಲಿಮಾರ್ ಉದ್ಯಾನ, ಅಸಫ್ ಖಾನನ ನಿಷಾತ್ ಬಾಗ್ ಮುಂತಾದವುಗಳನ್ನು ಇಲ್ಲಿ ಸ್ಮರಿಸಬಹುದು. ಈ ಹೂತೋಟಗಳಲ್ಲಿ ಬಗೆ ಬಗೆಯ ಸಸ್ಯಗಳು, ಹಣ್ಣು ಹಂಪಲಿನ ಮರಗಳು, ಕೃತಕವಾಗಿ ನಿರ್ಮಿಸಿದ ಸಣ್ಣ ಕೊಳ, ಮಧ್ಯದಲ್ಲೊಂದು ಕಾರಂಜಿ, ಸಣ್ಣ ಸಣ್ಣ ಜಲಪಾತಗಳು, ವಿವಿಧೆಡೆಗೆ ಜುಳು ಜುಳು ಹರಿಯುವ ಸಣ್ಣ ಸಣ್ಣ ನೀರಿನ ತೊರೆಗಳು, ಇವುಗಳ ಮಧ್ಯದಲ್ಲಿ ನಡೆಯಲು ಕಾಲ್ದಾರಿಗಳು ಇರುತ್ತಿದ್ದವು. ಮುಘಲರ ಉದ್ಯಾನವನದ ಮತ್ತು ಕಟ್ಟಡಗಳ ಜೀವಾಳವೇ ಬಗೆ ಬಗೆಯಾಗಿ ಹರಿಯುವ ಮತ್ತು ಚಿಮ್ಮುವ ನೀರು. ಭಾರತದಲ್ಲಿ ಇಂದಿಗೂ ಮುಘಲರೆಂದರೆ ಅವರ ಉದ್ಯಾನವನಗಳ ನೆನಪಾಗುತ್ತದೆ. ಅವರ ಅರಮನೆ, ಗೋರಿ ಮತ್ತು ಇನ್ನಿತರ ಕಟ್ಟಡಗಳ ಒಳಗೆ ಮತ್ತು ಹೊರಗೆ ಚಿಮ್ಮುವ ಮತ್ತು ಹರಿಯುವ ನೀರು ಇರುತ್ತಿತ್ತು. ಈ ನೀರು ವಾತಾವರಣವನ್ನು ತಂಪಾಗಿ, ಆಹ್ಲಾದಕರವಾಗಿ ಮತ್ತು ನಯನ ಮನೋಹರವಾಗಿರಿಸುತ್ತಿತ್ತು.

ಮಧ್ಯ ಏಷ್ಯಾ ಮತ್ತು ಪಶ್ಚಿಮ ಏಷ್ಯಾದಿಂದ ಭಾರತಕ್ಕೆ ಬಂದವರು ಭಾರತೀಯ ವಾಸ್ತುಶಿಲ್ಪಕ್ಕೆ ಹೊಸ ಅಂಶಗಳನ್ನು ಸೇರಿಸಿದರು. ಅವರು ಎತ್ತರವಾದ, ವಿಶಾಲವಾದ ಮತ್ತು ಹೊರಗಿನ ವಾತಾವರಣಕ್ಕೆ ತೆರೆದುಕೊಂಡಿರುವ ಗಾಳಿ ಬೆಳಕು ಚೆನ್ನಾಗಿ ಒಳಗೆ ಪ್ರವೇಶ ಮಾಡಲು ಅನುಕೂಲಕರವಾದ ಕಟ್ಟಡಗಳನ್ನು ಇಷ್ಟಪಟ್ಟರು. ಚಿಕ್ಕಚಿಕ್ಕ ಕತ್ತಲೆ ಕೋಣೆಗಳು, ತಗ್ಗಿನ ಮೇಲ್ಚಾವಣಿ, ಚಿಕ್ಕ ಚಿಕ್ಕ ಮುಚ್ಚಿದ ಕಿಟಕಿಗಳು, ಬಾಗಿಲುಗಳು, ಗಾಳಿ, ಬೆಳಕಿನ ಅಭಾವ ಇರುವ ಕಟ್ಟಡಗಳೆಂದರೆ ಅವರಿಗೆ ಅಸಹ್ಯ.

ಇಸ್ಲಾಮಿಕ್ ವಾಸ್ತು ಶಿಲ್ಪದಲ್ಲಿ ಕಮಾನುಗಳು, ಗುಮ್ಮಟಗಳು, ಸ್ತಂಭ ಗೋಪುರಗಳು ಮತ್ತು ಮಿಹ್ರಾಬ್‌ಗಳು ಎಲ್ಲಾ ಕಡೆಯೂ ಕಂಡುಬರುತ್ತವೆ. ಇಸ್ಲಾಮಿಕ್ ಕಲೆ ಆಲಂಕಾರಿವಾದದ್ದು ಮತ್ತು ಸೂಕ್ಷ್ಮವಾದದ್ದು. ಅದು ಭಾರತೀಯ ಕಲೆಯಷ್ಟು ಸಮೃದ್ಧ ಮತ್ತು ಜಟಿಲವಲ್ಲ. ಯಾಕೆಂದರೆ ಇಸ್ಲಾಂ, ಕಲಾವಿದರ ಮೇಲೆ ಕೆಲವು ನಿರ್ಬಂಧಗಳನ್ನು ಹಾಕಿತ್ತು. ಆದುದರಿಂದ ಅದು ಪ್ರಧಾನವಾಗಿ ರೇಖಾ ಗಣಕೀಯ ರೇಖೆಗಳು, ಸಸ್ಯಗಳು ಮತ್ತು ಬಗೆ ಬಗೆಯ ಬಳ್ಳಿಗಳನ್ನು ಪ್ರಧಾನವಾಗಿ ಉಪಯೋಗಿಸುತ್ತದೆ. ಅವರು ಅಲಂಕಾರ ಲಿಪಿಯನ್ನು ದೊಡ್ಡ ಕಲೆಯಾಗಿ ವಿಕಾಸ ಮಾಡಿದರು. ಇಸ್ಲಾಮಿಕ್ ಕಟ್ಟಡಗಳಲ್ಲಿ ನಾವು ಅಲಂಕಾರ ಲಿಪಿಯನ್ನು ಮತ್ತೆ ಮತ್ತೆ ನೋಡಬಹುದು. ಭಾರತೀಯ ಶಿಲ್ಪಿಗಳು ಪಶ್ಚಿಮ ಏಷ್ಯಾದಿಂದ ಬಂದ ಶಿಲ್ಪಿಗಳ ಜೊತೆ ಕೆಲಸ ಮಾಡಿದ್ದರಿಂದ ಮತ್ತು ಅಕ್ಬರ ಮತ್ತು ಇಬ್ರಾಹಿಂ ಆದಿಲ್ ಷಾನಂತಹ ಸುಲ್ತಾನರ ಆಸಕ್ತಿ ಮತ್ತು ಕುತೂಹಲದಿಂದಾಗಿ ಹಿಂದೂ ವಾಸ್ತುಶಿಲ್ಪ ಲಕ್ಷಣಗಳನ್ನು ಇಸ್ಲಾಮಿಕ್ ಕಟ್ಟಡಗಳಲ್ಲಿ ನಾವು ಕಾಣಬಹುದು. ಹಾಗೆಯೇ ವಿಜಯನಗರದ ಕಮಲ ಮಹಲ್ ಮುಂತಾದ ಕಟ್ಟಡಗಳಲ್ಲಿ ಇಸ್ಲಾಮಿಕ್ ವಾಸ್ತು ಶಿಲ್ಪದ ಲಕ್ಷಣಗಳಾದ ಕಮಾನು, ಗುಮ್ಮಟಗಳನ್ನು ನಾವು ನೋಡಬಹುದು. ಇಲ್ಲಿಯೂ ಸಾಂಸ್ಕೃತಿಕ ವಿನಿಮಯ ನಡೆದುದನ್ನು ನಾವು ಗಮನಿಸಬಹುದು.

ಟರ್ಕರು, ಇರಾನಿಯನ್ನರು ಭಾರತಕ್ಕೆ ೧೪ನೇ ಶತಮಾನದಲ್ಲಿ ಸಿಡಿಮದ್ದನ್ನು ಪರಿಚಯಿಸಿದರು. ಇದರಿಂದ ಕೋಟೆಗಳ ವಾಸ್ತುಶಿಲ್ಪವೇ ಬದಲಾಯಿತು. ದಪ್ಪನಾದ ಮತ್ತು ಎತ್ತರವಾದ ಕೋಟೆಗಳ ಬಾಗಿಲುಗಳೆದುರಿಗೆ ತೆರೆಗೋಡೆಗಳು, ಬಂದೂಕುಗಳನ್ನು ಬಳಸಲು ಕಿಂಡಿಗಳು ಮುಂತಾದ ಬೆಳವಣಿಗೆಗಳನ್ನು ನಾವು ಮಿಲಿಟರಿ ವಾಸ್ತುಶಿಲ್ಪದಲ್ಲಿ ನೋಡಬಹುದಾಗಿದೆ. ಹೀಗೆ ಪ್ರತಿಯೊಂದು ಕ್ಷೇತ್ರದಲ್ಲಿಯೂ ಮಧ್ಯಯುಗದಲ್ಲಿ ಭಾರತೀಯ ಸಂಸ್ಕೃತಿ ಸಾಂಸ್ಕೃತಿಕ ವಿನಿಮಯ ಮಾಡಿಕೊಂಡಿದೆ. ಆದರೆ ತನ್ನ ಅಸ್ತಿತ್ವವನ್ನು ಕಾಪಾಡಿಕೊಂಡಿದೆ.

ಮುಂದೆ ಪೋರ್ಚುಗೀಸರು, ಡಚ್ಚರು, ಫ್ರೆಂಚರು ಮತ್ತು ಇಂಗ್ಲಿಷರು ಭಾರತಕ್ಕೆ ಬಂದಾಗಲೂ ಪಾಶ್ಚಿಮಾತ್ಯ ಸಂಸ್ಕೃತಿಯ ಹಲವು ಅಂಶಗಳನ್ನು ಭಾರತೀಯ ಸಂಸ್ಕೃತಿ ಸ್ವೀಕರಿಸಿತು. ಆದರೆ ಇಂದು ಜಾಗತೀಕರಣದ ಹೆಸರಿನಲ್ಲಿ ನಮ್ಮ ಮೇಲೆ ಬಂದೆರಗಿದ ಕೊಳ್ಳುಬಾಕ ಸಂಸ್ಕೃತಿಯನ್ನು ಭಾರತೀಯ ಸಂಸ್ಕೃತಿ ತಡೆದುಕೊಳ್ಳಬಹುದೇ ಎಂಬುದು ಆತಂಕದ ವಿಷಯ. ಯಾಕೆಂದರೆ ಕೊಳ್ಳುಬಾಕ ಸಂಸ್ಕೃತಿ, ಜನಸಮುದಾಯಗಳು ಜೊತೆ ಜೊತೆಗೆ ಶತಮಾನಗಳ ಕಾಲ ಬದುಕಿದ ಪರಿಣಾಮವಾಗಿ ಹುಟ್ಟಿದ್ದಲ್ಲ. ಇದು ವಿಶ್ವದ ಕೆಲವೇ ಬಂಡವಾಳಶಾಹಿಗಳು ಜನರು ಭವಿಷ್ಯದಲ್ಲಿ ಹೇಗೆ ಬದುಕಬೇಕೆಂದು ತಾವೇ ನಿರ್ಧರಿಸಿ ಮಾಧ್ಯಮಗಳ ಮೂಲಕ ಜನರ ಜೀವನ ವಿಧಾನವನ್ನು ನಿಯಂತ್ರಿಸುವ ಸಂಸ್ಕೃತಿ. ಈ ಸಂಸ್ಕೃತಿಯ ಉದ್ದೇಶ ಶಾಂತಿ, ಸಾಮರಸ್ಯ, ಸಹಕಾರ ಮತ್ತು ಸಂಯಮದ ಜೀವನ ಪದ್ಧತಿಯಲ್ಲ. ಬದಲಾಗಿ ಸ್ಪರ್ಧೆ, ವ್ಯಾಪಾರ, ಲಾಭ ಮತ್ತು ಇಂದ್ರಿಯಗಳ ಅತ್ಯಧಿಕ ತುಷ್ಟೀಕರಣ. ಈ ಸಂಸ್ಕೃತಿಯ ಪ್ರತಿರೋಧ ಸ್ವಲ್ಪ ಕಷ್ಟವೇ; ಯಾಕೆಂದರೆ ಇದಕ್ಕೆ ಬೆಂಗಾವಲಾಗಿ, ಬಂಡವಾಳ ಮತ್ತು ಅತ್ಯಾಧುನಿಕ ತಂತ್ರಜ್ಞಾನವಿದೆ. ವಿಶ್ವದ ಬಲಿಷ್ಠ ಸರಕಾರಗಳು ಇದರ ಎದುರಿಗೆ ನಿಲ್ಲಲಾರವು. ಇಂತಹ ಸಂದರ್ಭದಲ್ಲಿ ಶತಮಾನಗಳ ಇತಿಹಾಸವಿರುವ ಭಾರತೀಯ ಸಂಸ್ಕೃತಿ ತನ್ನ ಅಸ್ತಿತ್ವ ಮತ್ತು ಅಂತಃಸತ್ವವನ್ನು ಉಳಿಸಿಕೊಳ್ಳಲು ಹೊಂದಾಣಿಕೆ ಮತ್ತು ಪ್ರತಿರೋಧದ ಹಲವು ಮಾರ್ಗಗಳನ್ನು ಕಂಡುಕೊಳ್ಳಬೇಕಾಗಿದೆ.

ರಾಮದಾಸ ಪ್ರಭು
ಸಿಂಗನಕೋಡಿ, ಚೇರ್ಕಾ[illegible] ಅಂಚೆ, ಉಡುಪಿ - [illegible]

ಸುದ್ದಿ ಚಿತ್ರ

## 'ಅಚಲ'ದ ೨೦ರ ಸಂಭ್ರಮ ಮತ್ತು ಪುಸ್ತಕ ಅನಾವರಣ

ದಿನಾಂಕ ೨೨.೫.೦೫ರಂದು ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ ಏರ್ಪಾಟು ಮಾಡಿದ್ದ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಶ್ರೀಮತಿ ಗೀತಾ ನಾಗಭೂಷಣ ಅವರು, ಶ್ರೀಮತಿ ನೇಮಿಚಂದ್ರರ 'ಬದುಕು ಬದಲಿಸಬಹುದು' (ನವಕರ್ನಾಟಕ ಪ್ರಕಾಶನ) ಮತ್ತು ಅಚಲ ಬಳಗದ 'ಜಾಗೃತಿ ಗೀತೆಗಳು, (ಜಾಗೃತಿ ಮಹಿಳಾ ಪ್ರಕಾಶನ) ಕೃತಿಗಳನ್ನು ಅನಾವರಣಗೊಳಿಸಿದರು. ಶ್ರೀಮತಿ ಹೇಮಲತಾ ಮಹಿಷಿ ಅಧ್ಯಕ್ಷತೆ ವಹಿಸಿದ್ದರು. ಚಿತ್ರದಲ್ಲಿ : ಡಾ. ಎನ್. ಗಾಯತ್ರಿ, ಗೀತಾ ನಾಗಭೂಷಣ, ಹೇಮಲತಾ ಮಹಿಷಿ ಮತ್ತು ನೇಮಿಚಂದ್ರ.

# ಅಕ್ಕ ಮತ್ತು ಸ್ತ್ರೀವಾದಿ ಸಂವೇದನೆ

## ಒಂದು ಸಾಂಸ್ಕೃತಿಕ ಮುಖಾಮುಖಿ

ಡಾ|| ಸುಧಾ ಸೀತಾರಾಮನ್

ಅಕ್ಕಮಹಾದೇವಿ ೧೨ನೇ ಶತಮಾನದ ವಚನ ಸಾಹಿತ್ಯ ಪ್ರಕಾರದ ಪ್ರಮುಖ ಶರಣೆಯೆಂದು ಗುರುತಿಸಲ್ಪಟ್ಟಿದ್ದಾಳೆ. ಇನ್ನಿತರ ತನ್ನ ಸಮಕಾಲೀನ ಮಹಿಳೆಯರಿಗೆ ಹೋಲಿಸಿದರೆ ಅಕ್ಕಮಹಾದೇವಿಯ ವಚನಗಳು ಮತ್ತು ಆಕೆಯ ಜೀವನದ ಬಗೆಗಿನ ಅಧ್ಯಯನಗಳು ಸಾಕಷ್ಟು ನಡೆದಿವೆಯೆಂಬುದನ್ನು ನಾವು ಗಮನಿಸಬಹುದು. ನವ್ಯದವರು ಅಕ್ಕನ ವಚನಗಳನ್ನು ಅತ್ಯುತ್ತಮ ಕಾವ್ಯ ಪ್ರಕಾರವೆಂದು ಚರ್ಚಿಸಿದ್ದರೆ, ಸಮಾಜಶಾಸ್ತ್ರಜ್ಞರು ಅಕ್ಕನನ್ನು ತಮ್ಮ ಅಧ್ಯಯನಗಳಲ್ಲಿ ವೈದಿಕಶಾಹಿ ವಿರೋಧಿ ಧ್ವನಿಯಾಗಿ ಗುರುತಿಸಿದ್ದಾರೆ; ಸಾಂಪ್ರದಾಯಿಕ ಅಧ್ಯಯನಕಾರರು ವೀರಶೈವ ಧರ್ಮದ ಶಾಸ್ತ್ರೀಯ ಬುನಾದಿಯನ್ನು ರೂಪಿಸುವ ಹಿನ್ನೆಲೆಯಲ್ಲಿ ಆಕೆಯನ್ನು ಕಾಣಲು ಪ್ರಯತ್ನಿಸಿದ್ದಾರೆ; ಆಧುನಿಕ ಸ್ತ್ರೀವಾದಿ ಪರಂಪರೆ ಅಕ್ಕನಲ್ಲಿ ವ್ಯಕ್ತವಾಗುವ ಪ್ರೇಮ, ಲೈಂಗಿಕ ಸಂಬಂಧಗಳು, ಪರಂಪರಾನುಗತ ಕೌಟುಂಬಿಕ ಚೌಕಟ್ಟಿನಾಚೆಗಿನ ಅಂಶಗಳ ಬಗ್ಗೆ ಅಕ್ಕನನ್ನು ಒಂದು ಹೆಣ್ಣು ಧ್ವನಿಯಾಗಿ ಮಾತ್ರವಲ್ಲದೆ, ಲಿಂಗ ತಾರತಮ್ಯ, ಕುಟುಂಬ, ಲೈಂಗಿಕತೆ ಇನ್ನಿತ್ಯಾದಿ ಪುರುಷಾಧಿಪತ್ಯವನ್ನು ವ್ಯವಸ್ಥಿತಗೊಳಿಸುವ ಎಲ್ಲಾ ಚೌಕಟ್ಟುಗಳನ್ನು ತಿರಸ್ಕರಿಸಿದ ಸ್ತ್ರೀವಾದಿ ಬಂಡಾಯಗಾರ್ತಿಯೆಂದು ಗುರುತಿಸಿದ್ದಾರೆ. ಹೀಗೆ, ಅಕ್ಕನನ್ನು ತಮ್ಮ ತಮ್ಮ ನಿಲುವಿಗನುಗುಣವಾಗಿ ಒಗ್ಗಿಸಿಕೊಳ್ಳುವ ಪ್ರಯತ್ನ ಕಾಣಬಹುದಾಗಿದೆ. ಇಷ್ಟಾದರೂ, ಅಕ್ಕನ ಕುಟುಂಬ, ಲೈಂಗಿಕ ಪ್ರಶ್ನೆಗಳನ್ನು ಒಪ್ಪುತ್ತಲೆ ಮೇಲಿನ ರೀತಿಯಲ್ಲಿ ಗ್ರಹಿಸಲು ಸಾಧ್ಯವಿಲ್ಲವೆಂಬುದು ನನ್ನ ವಾದ. ಭವ ಸಂಸಾರದಲ್ಲಿ ಸಾಮಾಜಿಕ ರಚನೆಗಳ ಬಗ್ಗೆ ಅಕ್ಕನಿಗಿದ್ದ ಅಸಮಾಧಾನ/ವಿರೋಧಗಳೆಲ್ಲ ನಿಸ್ಸಂದೇಹವಾದದ್ದು. ಆದರೆ, 'ಭಾವ ಹಾಗೂ ಅಭಿವ್ಯಕ್ತಿ', 'ಪ್ರೇಮ ಹಾಗೂ ಲೈಂಗಿಕ ಸಂಬಂಧಗಳ' ಬಗ್ಗೆ ಕಟ್ಟಿಕೊಂಡಿದ್ದ ನಂಬಿಕೆಗಳ ವಿರುದ್ಧ ತಿರಸ್ಕಾರವನ್ನು ಏಕಪ್ರಕಾರವಾಗಿ ಸೂಚಿಸಿಲ್ಲ ಅಥವಾ ಕುಟುಂಬ ರಚನೆಯ ಪರಂಪರಾನುಗತ ಸ್ವರೂಪಕ್ಕೆ ಕಾರಣವಾದಂತಹ ಎಲ್ಲಾ ವ್ಯಕ್ತಿಗತ ಸಂಬಂಧಗಳನ್ನು ತಿರಸ್ಕರಿಸಿಲ್ಲವೆಂಬುದು ನನ್ನ ವಾದ. ಇದು ಅಕ್ಕನ ವ್ಯಕ್ತಿ ಮಿತಿಯೇ ಅಥವಾ ಆಗಿನ ಸಾಮಾಜಿಕ ಸಂದರ್ಭದ ಮಿತಿಯೇ ಅಥವಾ ಅದು ಪ್ರಗತಿ ಪರವೇ ಅಲ್ಲವೇ, ಮಹಿಳೆಯರ ಪರವೇ ಅಲ್ಲವೇ ಎಂಬುದು ನನ್ನ ವಾದವಲ್ಲ. ಅಕ್ಕನ ವಚನಗಳ ಮೂಲಕ ನಮಗೆ ದಕ್ಕುವ ಲಿಂಗ, ಲೈಂಗಿಕತೆ, ಕೌಟುಂಬಿಕ ಸಂಬಂಧಗಳು ಬೇರೆಯದೇ ಆದ ಸ್ತರದಲ್ಲಿ ಪುನರಾವಿಷ್ಕರಣ ಮಾಡಲು ಅಕ್ಕ ಪ್ರಸ್ತಾಪಿಸಿರುವಂತೆ ಕಾಣುತ್ತದೆ; ಅಕ್ಕನ ವಚನಗಳಲ್ಲಿನ ಸಂಕೀರ್ಣತೆಯಿಂದಾಗಿ ಒದಗಿಬರುವ, ಹಲವಾರು ವಿಪರ್ಯಾಸ – ತೊಡಕು – ದ್ವಂದ್ವಗಳಲ್ಲಿ ಸಿಲುಕಲೇಬೇಕಾದ ಅನಿವಾರ್ಯತೆಯನ್ನು ಸೂಚಿಸುತ್ತವೆ.

**ಅಕ್ಕನಲ್ಲಿ ಕಾಯದ ನಿರ್ವಚನಗಳು**

ಅಕ್ಕನಲ್ಲಿ ವಿಶಿಷ್ಟವಾಗಿರುವಂತಹ ಕಾಯದ ಕಲ್ಪನೆಯ ಬಗ್ಗೆ ಹಲವಾರು ಕಡೆ ಚರ್ಚಿಸಲಾಗಿದೆ. ಅಕ್ಕನಲ್ಲಿ ಏಕಕಾಲಕ್ಕೆ ಶರೀರದ ಶೃಂಗಾರ ಸಾಧ್ಯತೆಗಳನ್ನು ಮತ್ತು ಅದರ ಮೂಲಕ ತಲುಪಬಹುದಾದ ಆಧ್ಯಾತ್ಮಿಕ ಸಾಧ್ಯತೆಗಳು, ಇನ್ನೊಂದು ಕಡೆ ಶರೀರವನ್ನು ತುಚ್ಛೀಕರಿಸಿ, ಕಡೆಗಣಿಸುವ ಪ್ರತಿಮೆಗಳು ಗಮನೀಯ ಅಂಶವಾಗಿರುವುದನ್ನು ನಾವು ಕಾಣಬಹುದು. ಅಕ್ಕನಲ್ಲಿ ಕಾಯದ ಕಲ್ಪನೆ ಎಷ್ಟರಮಟ್ಟಿಗೆ ವಿಸ್ತೃತವಾಗಿರುವಂತಹುದ್ದು ಎಂದರೆ ನಮಗೆ ಒಟ್ಟಿಗೆ 'ಸ್ವೀಕಾರ' ಮತ್ತು 'ತಿರಸ್ಕಾರ'ವನ್ನು ಬಿಂಬಿಸುವ ವಚನಗಳು ಸಿಗುತ್ತವೆ. ಅಕ್ಕನಲ್ಲಿ ಸಾಮಾನ್ಯವಾಗಿ ಎಲ್ಲೆಡೆ ಕಂಡುಬರುವ ಕಾಯದ ಕಲ್ಪನೆಯಲ್ಲಿ ಕೂಡ ನಾವು ದೇವರನ್ನು ಹೊಂದಲು ಬೇಕಾಗುವ ಪೂರ್ವ ಸಿದ್ಧತೆಯ ಸಾಧನವಾಗಿ ಕಾಯವನ್ನು ಪರಿಗಣಿಸಿರುವುದನ್ನು ಕಾಣುತ್ತೇವೆ. ಅಕ್ಕನಲ್ಲಿ ದೇಹ ಒಂದೇ ಕಾಲಕ್ಕೆ ಪ್ರಕೃತಿಯ ಭಾಗವೂ ಹೌದು, ಸಂಸ್ಕೃತಿ ಮತ್ತು ಸಮಾಜದ ಭಾಗವೂ ಹೌದು. ಅಕ್ಕನಲ್ಲಿ ಈ ಪರಸ್ಪರ ಕ್ರಿಯೆ ತುಂಬಾ ಕುತೂಹಲ ಮೂಡಿಸುವಂತಹುದ್ದು. ಹೀಗಾಗಿ ಅಕ್ಕ ಸದ್ಯದ ಸಂದರ್ಭಗಳಿಗೂ ಪ್ರಸ್ತುತಳಾಗುತ್ತಾಳೆ. ಇಂತಹ ಸನ್ನಿವೇಶದಲ್ಲಿ ಉಡುಗೆ-ತೊಡುಗೆ, ವೇಷ-ಭೂಷಣದ ಬಗ್ಗೆ ಹೊಸ ಆಯಾಮವನ್ನು ಅಕ್ಕನಲ್ಲಿ ಕಾಣಲು ಸಾಧ್ಯ. ಉಡುಗೆಯು ಆಳವಾಗಿ ನಮ್ಮ ದೇಹದ ಮತ್ತು ಆಚರಣೆಯ ಒಂದು ಭಾಗವಾಗಿ ದಿನನಿತ್ಯದ ರೂಢಿಯೊಳಗೆ ಹಾಸುಹೊಕ್ಕಾಗಿರುವುದು. ಈ ಪ್ರಬಂಧದಲ್ಲಿ ನಾನು ಆಕೆಯ ಕಾಯದ ಕಲ್ಪನೆ, ಅದರಲ್ಲೂ ವೇಷಭೂಷಣಗಳಿಂದ ದೊರಕುವ ಕಾಯದ ಚಿತ್ರಣವನ್ನು ಹಿನ್ನೆಲೆಯಾಗಿಟ್ಟುಕೊಂಡು, ಚರ್ಚಿಸುವ ಪ್ರಯತ್ನವನ್ನು ಮಾಡಿದ್ದೇನೆ.

ಮಹಿಳೆಯರ ದೇಹ ಹಾಗೂ ರೂಪ ಕಲ್ಪನೆಗಳು, ದೇಹದ ಶೃಂಗಾರ ಪರಿಕಲ್ಪನೆಗಳಿಲ್ಲದ ಸಂಸ್ಕೃತಿಯೇ ವಿಶ್ವದಲ್ಲಿಲ್ಲ. ಮಾನವಶಾಸ್ತ್ರಜ್ಞರು ಹೇಳುವ ಪ್ರಕಾರ – ಉಡುಗೆಯ ಮೂಲ ಐಂದ್ರಜಾಲಿಕವಾದಂತಹುದು (ಮ್ಯಾಜಿಕಲ್); ಅದರ ಆಳದಲ್ಲಿ, ಅದು ಪ್ರಾಣಿಯ ಶಕ್ತಿಗಳನ್ನು ನೀಡುವುದೆಂಬ ನಂಬಿಕೆಗಳು. ಇದರಿಂದ ನಾವು ತೊಡುವ ಉಡುಗೆ ದೇಹವನ್ನು ಬೆಚ್ಚಗಿಡುವುದಕ್ಕಷ್ಟೆ ಅಲ್ಲ, ಅದರ ಮೂಲಕ ನಮ್ಮ ಲೈಂಗಿಕತೆ, ವಯಸ್ಸು, ನಮ್ಮ ಸಾಮಾಜಿಕ ಸ್ಥಾನ-ಮಾನ ರಾಜಕೀಯ ನಂಬಿಕೆಗಳಿಗನುಗುಣವಾಗಿ ಇರುತ್ತವೆ. ಹಾಗೆ ನೋಡಿದರೆ ವಸ್ತ್ರ, ಆಭರಣ ನಮ್ಮ ದೇಹದ ಅಂಶವು ಹೌದು, ಅದೇ ಸಮಯಕ್ಕೆ ನಮ್ಮ ದೇಹದ ಭಾಗವಲ್ಲ ಕೂಡ. ಬಟ್ಟೆಯನ್ನು ಕಳಚಲೂಬಹುದು, ಬಟ್ಟೆ ತೊಟ್ಟು ಪರಿಪೂರ್ಣತೆಯನ್ನು ತರಲೂಬಹುದು. ನಾನು ತೊಟ್ಟ ಉಡುಗೆ, ನನ್ನ ದೇಹ ಬೇರೆಯದಕ್ಕಿಂತ ಹೇಗೆ ಭಿನ್ನವೆಂಬುದನ್ನು ತಿಳಿಯಪಡಿಸುತ್ತದೆ, ಜೊತೆಗೆ ಅದೇ ರೀತಿಯ ವಸ್ತ್ರ ತೊಟ್ಟವರೊಂದಿಗಿನ ಸಂಪರ್ಕ ಸಾಧಿಸುವ ಮಾಧ್ಯಮವೂ ಆಗಬಹುದು. ವಸ್ತ್ರ ದೇಹಕ್ಕೆ ಚೌಕಟ್ಟು ಒದಗಿಸುವುದರ ಜೊತೆಗೆ, ಸಂಪರ್ಕದ ಸಾಧನವೂ ಆಗುವುದು. ಅಂದರೆ ಅದರ ಮಿತಿಯು (ಬೌಂಡರಿ) ದ್ರವ್ಯವಾಗಿರುವುದು ಎಂಬುದನ್ನು ಸೂಚಿಸುವುದು.

ಅಕ್ಕ ಲಿಂಗತ್ವದ ಅನುಭವದ ಹಿನ್ನೆಲೆಯಲ್ಲಿ ತಾನು, ತನ್ನ ದೇಹ, ಮತ್ತಿತರ ವಸ್ತುಗಳಿರಬಹುದು, ಉಡುಗೆ-ತೊಡುಗೆಯಲ್ಲಿರಬಹುದು, ಎಲ್ಲವನ್ನೂ ಪೂರ್ವ ತಯಾರಿಗೆ ಅಣಿಗೊಳಿಸುವಳು. ಗಂಡನಾದ ಚೆನ್ನಮಲ್ಲಿಕಾರ್ಜುನನನ್ನು ಬರಮಾಡಿಕೊಳ್ಳುವ ಬಗೆ ನೋಡುವುದಾದರೆ –

*ಇಂದೆನ್ನ ಮನೆಗೆ ಗಂಡ ಬಂದಹನೆಲೆಗವ್ವ,*
*ನಿಮನಿಮಗೆಲ್ಲಾ ಶೃಂಗಾರ ಮಾಡಿಕೊಳ್ಳಿ.*
*ಚೆನ್ನಮಲ್ಲಿಕಾರ್ಜುನನೀಗಳೆ ಬಂದಿಹನು,*
*ಇದಿರುಗೊಳ್ಳಿ ಬನ್ನಿರವ್ವಗಳಿರಾ.*

ಇಲ್ಲಿ ಅಕ್ಕ ಸೂಚಿಸುವ ಪೂರ್ವ ತಯಾರಿ ಯಾವುದಕ್ಕೆ ? ಅಂತಿಮವಾಗಿ ಗಂಡನನ್ನು 'ಸೇರಲು'. ಈ ವಚನವನ್ನು ಗಮನಿಸಿದರೆ, ಅಕ್ಕ ತನ್ನ ಗಂಡನನ್ನು ಬರಮಾಡಿಕೊಳ್ಳಲು (ಚೆನ್ನಮಲ್ಲಿಕಾರ್ಜುನ ಎಲ್ಲರ ಗಂಡನಾಗಿ) ತಯಾರಾಗುತ್ತಾಳೆ. ಹೇಗೆ ? ಸಿಂಗಾರ ಮಾಡಿಕೊಂಡು. ಅಂದರೆ ಅವನನ್ನೊಂದುಗೂಡಲು



(ಐಕ್ಯವಾಗಲು) 'ಹೆಣ್ತನದ ಪಾತ್ರ ಪೋಷಣೆ' ಅನಿವಾರ್ಯವಾಗಿದೆ. ಅದು ಯಾವ ರೀತಿಯದು ? ಅದು ಶರಣತ್ವದ ಮೂಲಧಾತುವಾಗಿದೆ. ''ಚೆನ್ನಮಲ್ಲಿಕಾರ್ಜುನ ಬಂದಿಹನು ನಿಮನಿಮಗೆಲ್ಲಾ ಶೃಂಗಾರ ಮಾಡಿಕೊಳ್ಳಿ'' ಎಂದು ಹೇಳುವಲ್ಲಿ ಆಸಕ್ತಿಕರವಾಗಿರುವುದು ಏನೆಂದರೆ ಕಾವ್ಯರೂಪದ ಮೌಲ್ಯ ಮಾಪನವಲ್ಲ, ಸಮಾಜ ಶಾಸ್ತ್ರಜ್ಞೆಯಾಗಿ ನನಗೆ ಇದು ಸಾಮುದಾಯಿಕ ಪ್ರಜ್ಞೆಯು ಅನಾವರಣಗೊಳ್ಳುವ ಪರಿಯಾಗಿ ಕಾಣುವುದು.

ಹನ್ನೆರಡನೆಯ ಶತಮಾನದ ವ್ಯಕ್ತಿ ಕಲ್ಪನೆಗೂ ಮತ್ತು ಆಧುನಿಕ ಕಾಲದಲ್ಲಿ ನಮಗೆ ದಕ್ಕುವ ಕಲ್ಪನೆಗೂ ಇರುವ ವ್ಯತ್ಯಾಸಗಳನ್ನು ನಾವು ಇಲ್ಲಿ ಗಮನಿಸಬೇಕು. ಆಧುನಿಕ ಕಾಲದಲ್ಲಿನ 'ವ್ಯಕ್ತಿ'ಯ ಅರ್ಥೈಸುವಿಕೆ ಹೇಗಿದೆ ಎಂದರೆ, ವ್ಯಕ್ತಿ ಬೇರೆಯವರಿಗಿಂತ/ಸಮುದಾಯದಿಂದ ಹೇಗೆ ಭಿನ್ನ, ವಿಶಿಷ್ಟ ಎಂಬುದನ್ನು ತಿಳಿಯಪಡಿಸುವ ರೀತಿಯಲ್ಲಿರುವುದು. ಆಧುನಿಕ ಕಾಲದ ಇಂತಹ ಅರ್ಥೈಸುವಿಕೆಯು ದಾರ್ಶನಿಕ ಚಳವಳಿಯ ನಂತರದ ಬೆಳವಣಿಗೆಯಾಗಿದೆ. ಆದರೆ, ನಮಗೆ ಇಲ್ಲಿ ಕಾಣುವ ವ್ಯಕ್ತಿ ಸಮುದಾಯದಿಂದ ಭಿನ್ನವಾಗಿ ಕಂಡುಬರುವುದಿಲ್ಲ. ವ್ಯಕ್ತಿ ಎಂದರೆ ಇಲ್ಲಿ ಮೂಲಭೂತವಾಗಿರುವಂತಹ ಮಾನವನ ಗುಣ ಸ್ವಭಾವದ ಕಲ್ಪನೆಯಾಗಿದೆ. ಬೇರೆಯವರೊಂದಿಗೆ ಅತ್ಯಂತ ವೈಯಕ್ತಿಕವೆನ್ನುವ ಧಾಟಿಯಲ್ಲಿ ಬೆಳೆಯುವ ಈ ವಚನ ವೈಯಕ್ತಿಕ ನೆಲೆಯನ್ನು ದಾಟಿ ಇನ್ನೊಂದು ಹೆಣ್ಣಿಗೂ ಅನ್ವಯವಾಗುವ ಗುಣವಾಗಿ ಪರಿವರ್ತನೆಗೊಳ್ಳುತ್ತದೆ. ಸಿಂಗಾರವ ಮಾಡಿಕೊಳ್ಳುವುದು – ಪಾಲಿಸಲೇಬೇಕಾದ ನಿಯಮದಂತೇನೂ ವ್ಯಕ್ತವಾಗಿರುವುದಲ್ಲ. ತಾನು ಇನ್ನೊಬ್ಬರಿಗೆ ಹೇಳುತ್ತಿರುವುದಾದರೂ, ತನ್ನ ಅನುಭವವನ್ನು ನಿಖರವಾಗಿ ಅಭಿವ್ಯಕ್ತಿಸುವ ಪ್ರಯತ್ನದ ಜೊತೆಗೆ, ಇಲ್ಲಿ ತನಗಾಗುವ ಅನುಭವ ಬೇರೆಯವರಿಗೂ ಆಗಿದೆ/ಆಗುತ್ತದೆ/ಆಗಲೆಂಬ ಆಶಯವಿದೆ. ವ್ಯಕ್ತಿಯಾಗಿ ತನ್ನ ಹಂಬಲ, ಎಲ್ಲರ ಹಂಬಲವೂ ಹೌದು. ಇಲ್ಲಿ ಚಿಂತನೆ (ನುಡಿ) ಮತ್ತು ಆಚಾರದಲ್ಲಿ(ನಡೆ) ಅಂತಹ ದ್ವಂದ್ವ ಕಂಡುಬರುವುದಿಲ್ಲ, ಆದುದರಿಂದ ಇಲ್ಲಿ ಚಿಂತನೆಯೇ ಆಚಾರ, ಆಚಾರವೇ ಚಿಂತನೆ. ಅಕ್ಕನ ಈ ವಚನ ಆಂತರಂಗಿಕ ಸಂವಾದವೆಂಬಂತೆ/ಅಂತರ್ಮುಖಿಯೆಂಬಂತೆ ಕಂಡರೂ ಬಹುರ್ಮುಖ ವ್ಯಾಪ್ತಿಯಲ್ಲಿ ಅನಾವರಣಗೊಳ್ಳುತ್ತದೆ.

ಮೊದಲನೆಯದಾಗಿ, ಅಕ್ಕ ತನ್ನ ಅಸ್ತಿತ್ವವನ್ನು ರೂಪಿಸಿಕೊಳ್ಳುವುದು ದೈವದ ಜೊತೆಗಿನ ಸಂಬಂಧದ ಮೇರೆಗೆ. ಈ ಸಂದರ್ಭದಲ್ಲಿ ತನ್ನನ್ನು ತಾನು ಅಲಂಕರಿಸಿಕೊಳ್ಳುವುದು ಮಹಿಳೆಯ ವೇಷಭೂಷಣದ ಪ್ರತೀಕವಾಗಿರುವ ಒಡವೆ, ವಸ್ತ್ರ, ಅಲಂಕಾರದೊಂದಿಗೆ. ಎರಡನೆಯದಾಗಿ, ತನ್ನ ಗಂಡನಿಗಾಗಿ ತಾನು ಅಲಂಕರಿಸಿಕೊಂಡು, ಗಂಡನನ್ನು ಇದಿರುಗೊಳ್ಳುವುದು. ಅಂದರೆ ಬರ ಮಾಡಿಕೊಳ್ಳುವುದು. ಇದು ಒಬ್ಬ 'ಆದರ್ಶೀಕೃತ ಸದ್ಗೃಹಸ್ಥೆ'ಯ ಲಕ್ಷಣ. ಸಂದರ್ಭಕ್ಕನುಸಾರವಾಗಿ (ವಚನಗಳಲ್ಲಿ ಸಂದರ್ಭಗಳನ್ನು ಶರಣತ್ವದ ವಿಕಸನದ ಹಿನ್ನೆಲೆಯಲ್ಲಿ ಶರಣಳ/ನ ಪೂರ್ವಸಿದ್ಧತೆಯನ್ನು ಹಲವು ಪರಿಯಾಗಿ ವಿವರಿಸಲಾಗಿದೆ) ಲಿಂಗತ್ವವಾದಂತಹ (gender) – ಪಾತ್ರ ಪೋಷಣೆ, ಲಿಂಗ ಸಂಬಂಧಿ (gender related) ಆಚಾರ, ಭಾವಾಭಿವ್ಯಕ್ತಿ, ನಡೆ (ಆಚಾರ), ನುಡಿ (ವಿಚಾರ), ಅನಾವರಣಗೊಳ್ಳುತ್ತಲೇ ಹೋಗುವುದನ್ನು ನೋಡಬಹುದು. 'ಮನೆ'ಯಂತೂ ಹೆಣ್ಣಿನ (ಗೃಹಿಣಿಯ) ಕಾರ್ಯಾಚರಣೆಯ ಒಂದು ವಲಯ(sphere)ವಾಗಿ ಪರಿಗಣಿತವಾಗಿರುವುದು.

ಇಲ್ಲಿ ಅಕ್ಕ ಹೆಣ್ತನದ ಪರಿಧಿಯಲ್ಲಿಯೇ ವ್ಯವಹರಿಸುವುದನ್ನು ಕಾಣಬಹುದು. ಮಲ್ಲಿಕಾರ್ಜುನನೊಡನೆ 'ಸೇರಲು' ಶರೀರವನ್ನು ಅಲಂಕೃತಗೊಳಿಸಿಕೊಂಡು, ಶರೀರದ ಮೂಲಕವೇ ಲೌಕಿಕವಾಗಿ ಅನಿವಾರ್ಯವಾಗಿರುವಂತಹ ಎಲ್ಲಾ ಪ್ರತಿಮೆಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಅಕ್ಕನ ಕಾಯದ ವಿಜೃಂಭಣೆ ಅನುಸಂಧಾನವನ್ನು ಇಲ್ಲಿ ಹೀಗೆ ಕಂಡರೆ, ಇನ್ನೊಂದೆಡೆ, ದೇಹದ ಬಗ್ಗೆ ಭಿನ್ನವಾದ ಕಲ್ಪನೆಯನ್ನು ನಾವು ನೋಡಬಹುದು.

> **ಅಕ್ಕನ ವಚನಗಳಲ್ಲಿ, ನಾವು ಕಾಣಬಹುದಾದ ಅನೇಕ ವೈರುದ್ಧ್ಯಾತ್ಮಕ ಆಯಾಮಗಳ ಬಗೆಗಿನ ಗಂಭೀರ ಸಾಂಸ್ಕೃತಿಕ ಅಧ್ಯಯನ ಮತ್ತು ಅದು ಒಡ್ಡುವ ವಿಪುಲ ಅರ್ಥ ಸಾಧ್ಯತೆಗಳ ಹಿನ್ನೆಲೆಯಲ್ಲಿ ಅಕ್ಕನ ವಚನಗಳನ್ನು ಮರು ಓದಿಗೆ ಒಳಪಡಿಸುವ, ಮನನ ಮಾಡಿಕೊಳ್ಳುವ, ಹೊಸ ಒಳನೋಟಗಳನ್ನು ಕಂಡುಕೊಳ್ಳುವ ಪ್ರಯತ್ನ ಇನ್ನೂ ಆಗಬೇಕಾಗಿದೆ ಮತ್ತು ಆಕೆಯನ್ನು ಹೊಸದಾಗಿ ವಿಶ್ಲೇಷಿಸಬಹುದಾದ ಅಧ್ಯಯನಗಳ ಅಗತ್ಯವಿದೆ. ಏಕ ಮಾದರಿಯಲ್ಲಿ ಪರಿಭಾವಿಸುವ ಮತ್ತು ಏಕರೂಪಿ ಆಲೋಚನಾ ಕ್ರಮದಿಂದ ಅಕ್ಕನನ್ನು ಮುಕ್ತಗೊಳಿಸುವ ಪ್ರಯತ್ನಗಳು ಆಗಬೇಕಿದೆ.**

**ಯುದ್ಧ ಮತ್ತು ಯೋಧಳ/ನ ರೂಪಕಗಳು**

ಮೇಲ್ಕಂಡ ವಚನದಲ್ಲಿ ಅಕ್ಕ ವರ್ಣಿಸುವಂತಹ ಆಭರಣಗಳು ಉಡುಗೆ-ತೊಡುಗೆ, ತನ್ನ ಬೇರೆ ವಚನಗಳಲ್ಲಿ ವ್ಯಕ್ತವಾಗುವುದಕ್ಕಿಂತ ಭಿನ್ನವಾಗಿದೆ. ಉದಾಹರಣೆಗೆ : ಅದು ಬದಲಾದಂತೆ ಹಲವು ತೆರನಾದ ರೂಪ ಸ್ವರೂಪಗಳು ಮೈದಾಳುತ್ತವೆ.

*ಆಳುತನದ ಮಾತನೇರಿಸಿ ನುಡಿದಡೆ*
*ಆಗಳೆ ಕಟ್ಟಿದೆನು ಗಂಡುಗಚ್ಚೆಯ*
*ತಿಗುರನೇರಿಸಿ ತಿಲಕವನ್ನಿಟ್ಟು*
*ಕೈದುವ ಕೊಂಡು ಖಳನೇರಿದ ಬಳಿಕ*
*ಕಟ್ಟಿದ ನಿರಿ ಸಡಿಲಿದಡೆ ಇನ್ನು ನಿಮ್ಮಾಣೆ*
*ಕಾಣಾ ಮಲ್ಲಿಕಾರ್ಜುನ.*

ಶರಣನ ವಿಕಸನದ ಪ್ರಕ್ರಿಯೆಯ ಹಿನ್ನೆಲೆಯಲ್ಲಿ 'ಭವಿತ್ವದ ಗುಣಗಳು' (ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಇತ್ಯಾದಿ) ಶರಣನನ್ನು ಅಧಃಪತನಕ್ಕೆ ತಳ್ಳುವಂತಹವು. ಇದರ ಬಗ್ಗೆ ಅಕ್ಕ ತನ್ನ ಆತಂಕವನ್ನು ವ್ಯಕ್ತಪಡಿಸುತ್ತಾಳೆ. ಅಲ್ಲಿ ಅಕ್ಕ ತನ್ನ ಭೌತಿಕ ವಾಸ್ತವವಾದ ಸ್ತ್ರೀಲಿಂಗವನ್ನು ಮೀರಿ ಪುರುಷತ್ವದ ನೆಲೆಯಲ್ಲಿ ಭವಿತ್ವವನ್ನು ಎದುರಿಸಲು ಅಣಿಯಾಗುತ್ತಾಳೆ. ಯುದ್ಧದ ಹಿನ್ನೆಲೆಯಲ್ಲಿ ಶರಣೆಯ, ಶರಣತ್ವದ ವಿಚಾರಗಳನ್ನು ಪ್ರಸ್ತಾಪಿಸಿ, ಅಪಾಯವನ್ನೆದುರಿಸಬೇಕಾದಾಗ ಒಬ್ಬ ಯೋಧ ತೆಗೆದುಕೊಳ್ಳಬೇಕಾದ ಕ್ರಮಗಳನ್ನು ವಿವರಿಸುತ್ತಲೇ, ತನ್ನ ನಿಲುವನ್ನು ಪ್ರಕಟಪಡಿಸುತ್ತಾಳೆ. ತನ್ನಲ್ಲಿ ಅಡಕವಾಗಿರುವಂತಹ ಭವಿತ್ವ ಮತ್ತು ಅದಕ್ಕೆ ಸಂಬಂಧಪಟ್ಟಿರುವಂತಹ ಅಪಾಯಗಳನ್ನು ಗೆಲ್ಲಬೇಕಾದರೆ ತಾನು ತನ್ನನ್ನು ಸಮರಕ್ಕೆ ಸಿದ್ಧಳಾದ ಯೋಧನಂತೆ ಚಿತ್ರಿಸಿಕೊಳ್ಳುತ್ತಾಳೆ.

ಗುಣಶೀಲೆಯಾದ ವೀರಶೈವ ಮಹಿಳೆಯಾಗಲು ನಾಯಕ ಪ್ರಧಾನ ಗುಣಗಳನ್ನು ಅವಧರಿಸಿಕೊಳ್ಳಬೇಕಾಗುವುದು. ತನ್ನಲ್ಲಿರುವ ಆಸೆ ಆಮಿಷ ಮೀರಲು ಉಡುಗೆ ಸಹಾಯಕವಾಗುವಂತಹ ಸಂಕೇತವಾಗುವುದು. ತನ್ಮೂಲಕ ಸ್ಥೈರ್ಯ, ದೃಢತೆ, ಸಶಕ್ತ ಮನಸ್ಸನ್ನು ಪ್ರತಿನಿಧಿಸುವುದು. ಯುದ್ಧದ ಆಲಂಕಾರಿಕತೆ, ಸನ್ನದ್ಧತೆಗೆ ಪೂರಕವಾದಂತಹ ಅಂಶವಾಗಿ ಹೊರಹೊಮ್ಮಿರುವುದು. ಶತ್ರುವಿನ ಧ್ವಂಸವೆಂದರೆ, ತನ್ನಲ್ಲಿರುವ ಭವಿತನದ ಕೊಲ್ಲುವಿಕೆ. ತನ್ನನ್ನು ತಾನೇ ಗೆಲ್ಲುವ ಪರಿಯದು. ಯುದ್ಧ ಮತ್ತು ಯೋಧಳ/ನ ರೂಪಕಗಳನ್ನು ಕಾಣಬಹುದಾದ ಇನ್ನೊಂದು ಉದಾಹರಣೆ ಮೂಲಕ ಚರ್ಚೆಯನ್ನು ಮುಂದುವರಿಸೋಣ.

*ಮುಂಗೈಯಲ್ಲಿ ವೀರಗಂಕಣವಿಕ್ಕಿ,*
*ಮುಂಗಾಲಲ್ಲಿ ತೊಡರು ಬಾವಲಿಯ ಕಟ್ಟಿದೆ.*
*ಗಂಡುಡುಗೆಯನುಟ್ಟೆನೆಂಬ ಮಾತಿನ ಬಿರಿದ ನುಂಗಿದೆನು.*
*ಚೆನ್ನಮಲ್ಲಿಕಾರ್ಜುನ*
*ನಿಮ್ಮಾಣೆಗೆ ಊಣೆಯವ ತಂದೆನಾದೆಡೆ,*
*ನಿಮ್ಮ ತೊತ್ತಿನ ಮಗಳಯ್ಯಾ*

ಈ ವಚನದಲ್ಲಿರುವ ಸಂಕೇತಗಳು ಪುರುಷತ್ವದ ಸಂಕೇತಗಳೇ ಆಗಿವೆ. ಇಲ್ಲಿ ಯುದ್ಧ, ರಕ್ಷಣೆ, ಹೆದರದಿರುವಿಕೆ, ನಿಷ್ಠೆ, ದೃಢತೆ, ಗೆಲ್ಲುವುದು, ಹಿಮ್ಮೆಟ್ಟದಿರುವುದು ಮುಂತಾದುವು ಸಾಮಾನ್ಯವಾಗಿ ಪುರುಷತ್ವವನ್ನು ಪ್ರತಿನಿಧಿಸುವ ಗುಣಗಳು ಬಳಸಿರುವಂತಹ ಯುದ್ಧ ಮತ್ತು ಯೋಧಳ/ನ ರೂಪಕಗಳಲ್ಲಿ ನಾವು ಕಾಣಬಹುದು. ಗಮನಿಸಬೇಕಾದ ಅಂಶವೆಂದರೆ, ಸಮುದಾಯವು ತಾನು ನಂಬಿರುವಂತಹ ಆಚರಣೆಗಳನ್ನು, ಅದರ ಮೂಲಕ ತಾನು ಸೇರಿರುವ ವೀರಶೈವ ಸಮುದಾಯವನ್ನು ಪ್ರತಿನಿಧಿಸಲು ಸದರಿ ಪ್ರತಿಮೆಗಳನ್ನು ಅಕ್ಕ ಬಳಸಿದ್ದಾಳೆ. ಐಕ್ಯದ ಸ್ಥಿತಿಯನ್ನು ತಲುಪಲು, ಸಮುದಾಯದ ಆಚರಣೆಗಳನ್ನು ಯಾವುದೇ ಕುಂದಿಲ್ಲದೆ ಪರಿಪಾಲಿಸಬೇಕಾದರೆ, ಬೇಕಾಗುವಂತಹ 'ವೀರತ್ವ'ದ ಗುಣಗಳು 'ಪುರುಷತ್ವ'ದ ಗುಣಗಳೇ ಆಗಿವೆ. ಅಂದರೆ ಹಂತಹಂತವಾಗಿ ಷಟ್‌ಸ್ಥಲದ

ಹಾದಿಯನ್ನು ಕ್ರಮಿಸುವಾಗ ಮೊದಲ ಹೆಜ್ಜೆಯಾಗಿ ಕಾಣಿಸುವಂತಹ ಭವದ ಗುಣಗಳ ಗೆಲುವಿಗೆ ಪೂರಕವಾಗಿ ಮತ್ತು ಧಾರ್ಮಿಕ ಆಚಾರದ ಒಂದು ಭಾಗವಾಗಿ ಗಣಾಚಾರವನ್ನು ಅಕ್ಕ ಇಲ್ಲಿ ಪುರುಷತ್ವದ ನೆಲೆಯಲ್ಲಿ ವರ್ಣಿಸುತ್ತಾಳೆ. ಸಮುದಾಯಕ್ಕೆ ಅಪಖ್ಯಾತಿ ಬಂದಾಗ, ಅದನ್ನು ಉಳಿಸಿಕೊಳ್ಳಲು ವೀರ ಪುರುಷತ್ವದ ವೇಷ ತೊಟ್ಟು, ಶರಣತ್ವದ ಘನತೆ, ಗೌರವವನ್ನು ಕಾಪಾಡುವ 'ಗಣಾಚಾರಿ' ಕಂಕಣಬದ್ಧಳಾಗುತ್ತಾಳೆ.

ಚಾರಿತ್ರಿಕವಾಗಿ ವಿಶ್ಲೇಷಿಸುವುದಾದರೆ, ಹನ್ನೆರಡನೆಯ ಶತಮಾನದಲ್ಲಿ ಬೇರೆ ಬೇರೆ ಧರ್ಮಗಳಿಂದ ವೀರಶೈವ ಧರ್ಮಕ್ಕೆ ಸೇರಿದವರು ಸಾಕಷ್ಟು ಜನರಿದ್ದರು. ಈ ಹಿಂದಿನ ಸಂಪ್ರದಾಯದ 'ವಾಸನೆ'ಯನ್ನು ತೊರೆದು ವೀರಶೈವನಾಗುವಂತಹ ಪ್ರಕ್ರಿಯೆ ಘಟಿಸುವಾಗ, ನಿಜವಾದ ವೀರಶೈವನಾಗುವುದು ಹೇಗೆಂದರೆ, ತನ್ನೊಳಗಡೆಯಿರುವಂತಹ ಭವದ ಅಂಶಗಳು ಮತ್ತು ಬಹಿರಂಗದ ಆಚರಣೆಯಲ್ಲಿ ಕಾಣಿಸುವಂತಹ ಹಿಂದಿನ ಸಂಪ್ರದಾಯಗಳ ಭವದ ವಾಸನೆಯ ಅಂಶಗಳು, ಎರಡನ್ನೂ ಏಕಕಾಲಕ್ಕೆ ಗೆಲ್ಲಬೇಕಾದರೆ, ಅಕ್ಕ ಬಳಸುವಂತಹ ಪ್ರತಿಮೆಗಳು ಯುದ್ಧದ ರೂಪಕದ ಮೂಲಕ ಅನಾವರಣಗೊಳ್ಳುವುದು. ಈ ಅಂಶಗಳನ್ನು ಗೆದ್ದು, ಎರಡರ್ಥಗಳ ಭವವನ್ನು ತನ್ನಿಂದ ಸಂಪೂರ್ಣವಾಗಿ ದೂರ ತಳ್ಳಿ ಚೆನ್ನಮಲ್ಲಿಕಾರ್ಜುನನಲ್ಲಿ ಐಕ್ಯವಾಗಬೇಕಾದ ಸಂದರ್ಭದಲ್ಲಿ ಮನೆಯ ವಾತಾವರಣ ಮತ್ತು ಮಹಿಳೆಯ ಸಂಕೇತವಾಗಿರುವ ಉಡುಗೆ-ತೊಡುಗೆಯ ಬಗೆಯನ್ನು ನಾವು ಕಾಣುತ್ತೇವೆ.




**ಬುಡಮೇಲು ರಾಜಕೀಯ**

'ಶರಣಸತಿ, ಲಿಂಗಪತಿ' ಎಂಬ ಪರಿಕಲ್ಪನೆ ಶರಣರಲ್ಲಿ ವ್ಯಾಪಕವಾಗಿ ಬಳಕೆಯಲ್ಲಿರುವುದು. ಕೆಲವರು ಇದನ್ನು ಗಮನದಲ್ಲಿರಿಸಿಕೊಂಡು ಅಕ್ಕ ಹೆಣ್ಣೇ ಆಗಿರುವುದರಿಂದ ಸತಿ ಭಾವವನ್ನು ಆರೋಪಿಸಿಕೊಳ್ಳಬೇಕಾದ ಪ್ರಮೇಯವೇ ಬರುವುದಿಲ್ಲವೆಂದು ವಾದಿಸುತ್ತಾರೆ. ಆದರೆ, ಈ ಮೇಲ್ಕಂಡ ಮೂರು ವಚನಗಳಲ್ಲಿ ನಾವು ಕಾಣಬಹುದಾದದ್ದು ಏನೆಂದರೆ, ಎರಡು ಅರ್ಥದಲ್ಲಿ ಭವವನ್ನು ಗೆಲ್ಲುವುದಕ್ಕೆ ಪ್ರಯತ್ನಗಳು ಕಂಡುಬರುವುದು, ಭವಿತನ ಮೀರುವಾಗೆಲ್ಲ ಪುರುಷನಾಗುವುದರ ಮೂಲಕ ಪುರುಷತ್ವವನ್ನು ಸಮರ್ಥಿಸುವುದು ಮತ್ತು ದೇವರಲ್ಲಿ ಐಕ್ಯವಾಗುವುದಕ್ಕೆ ಅತ್ಯವಶ್ಯಕವಾಗಿ ಬೇಕಾಗಿರುವಂತಹ ಸತಿತ್ವವನ್ನು ಸೃಷ್ಟಿಸಲಾಗಿದೆ. ಇಲ್ಲಿ ನಾವು ಕಾಣುವ ಸ್ತ್ರೀತ್ವ ಕಲ್ಪನೆ ತನ್ನನ್ನು ತಾನು ಅರ್ಪಿಸಿಕೊಂಡಿರು ವಂತಹ ಸತಿಯಂತಾಗಿದೆ. ಮತ್ತೂ ದೈವವನ್ನು ಸತೀತ್ವದ ಉಭಯವಾಗಿರುವ (ಬೈನರಿಯಾಗಿರುವಂತಹ) 'ಪರ'ವಾಗಿ, ನಾವು ಇಲ್ಲಿ ಕಾಣುತ್ತೇವೆ.

ಆಧುನಿಕ ಸ್ತ್ರೀವಾದಿ ವಿಮರ್ಶೆಯಲ್ಲಿ, ದೇಹ ಮತ್ತು ಲಿಂಗತ್ವವನ್ನು ಬೇರ್ಪಡಿಸಿ, ಲಿಂಗತ್ವ ಸಾಮಾಜಿಕ ನಿರ್ಮಿತಿಯೆಂದು ಪರಿಗಣಿಸುತ್ತಾ, ದೇಹವನ್ನು ಗಂಡು ಮತ್ತು ಹೆಣ್ಣು ಎಂಬುದಾಗಿ ವಿಭಾಗೀಕರಿಸಲಾಗಿದೆ. ಇಲ್ಲಿ ದೇಹವನ್ನು ಸಹಜವೆಂಬಂತೆ ನೋಡಲಾಗಿದೆ. ಇಲ್ಲಿ ದೇಹ – ಜೈವಿಕ, ಲಿಂಗತ್ವ – ಸಾಮಾಜಿಕವಾದುದೆಂಬ ಪರಿಗಣನೆ, ರಾಜಕೀಯವಾಗಿ ಮುಕ್ತಿ ನೀಡುವಂತಹುದ್ದು. ಆದರೂ, ಅದರಲ್ಲಿ ಅಡಕವಾಗಿರುವಂತಹ ಮುಖ್ಯ ಸಮಸ್ಯೆಯೇನೆಂದರೆ, ದೇಹವನ್ನು ನಿಗದಿತವಾಗಿ (natural and fixed) ನೀಡಲ್ಪಟ್ಟಿರುವಂತೆ ನೋಡಲಾಗಿರುವುದು. ಅಕ್ಕನಲ್ಲಿ ಜೈವಿಕವಾಗಿರುವಂತಹುದ್ದರ ಮೂಲಕವೇ ನಿಗದಿಗೊಳಪಡದೆ, ಸ್ತ್ರೀತ್ವ ಮತ್ತು ಪುರುಷತ್ವ ನಿರ್ಮಾಣಗೊಳ್ಳುವುದು. ಆದರೆ ಅಕ್ಕನಲ್ಲಿ ನಾವು ಕಾಣುವುದೇನೆಂದರೆ ಸಾಮಾಜಿಕ ನಿರ್ಮಿತಿಯಲ್ಲಿ ನೀಡಲ್ಪಟ್ಟಿರುವಂತೆ, ಅಕ್ಕನಲ್ಲಿ ದೇಹದ ಪ್ರತಿಮೆ ನಿಗದಿತವಾಗಿರುವಂಥದಲ್ಲ. ಅಲ್ಲಿ ಸ್ತ್ರೀತ್ವ ಮತ್ತು ಪುರುಷತ್ವದ ಸಂಕೀರ್ಣತೆಯನ್ನು ನಾವು ಕಾಣಬಹುದು. ಎರಡರ್ಥದ, ಅಂದರೆ ಅಂತರಂಗದ ಆಮಿಷಗಳು – 'ಮಾನಸಿಕ'ವಾಗಿರುವಂತಹುದ್ದು, ಬಹಿರಂಗದ ಆಮಿಷಗಳು – ಪಾರಂಪರಿಕ ಭವಕ್ಕೆ ಸಂಬಂಧಿಸಿರುವುದು, ಇವೆರಡನ್ನು ಮೀರುವ – ಸಾಮಾಜಿಕ ಸ್ತ್ರೀತ್ವವನ್ನು ಧಾರ್ಮಿಕ ಸ್ತ್ರೀತ್ವದಲ್ಲಿಟ್ಟು ಆದರ್ಶೀ/ವೈಭವೀಕರಿಸಲಾಗಿದೆ. ಹಾಗೆಂದರೆ, ನಾನಿಲ್ಲಿ ಹೇಳುತ್ತಿರುವುದು, ಪ್ರಾಚೀನ ಭಾರತದಲ್ಲಿ, ಆಧುನಿಕ ಭಾರತದ ಎಲ್ಲಾ ಅಂಶಗಳು ಅಡಕವಾಗಿದ್ದವು ಎಂದಲ್ಲ, ಬದಲಾಗಿ ಅಕ್ಕನಲ್ಲಿ ಕಾಣಿಸಿಕೊಳ್ಳುವ ಸಂಕೀರ್ಣವಾದಂತಹ ಸ್ತ್ರೀತ್ವದ ಕಲ್ಪನೆಗಳ ಬಗೆಗೆ. ಕಾಯ ನಿರಂತರವಾಗಿ, ಸಾರ್ವಜನಿಕವಾಗಿ, ಬದಲಾಗದಿರುವಂತೆ ಕಾಣಿಸಿಕೊಳ್ಳದೆ ಬೇರೆ ಬೇರೆ ಸಂದರ್ಭಗಳಲ್ಲಿ ಪರಿವರ್ತಿಸಬಹುದಾದ ಸಾಧನವಾಗಿ ಕಾಣಿಸಿಕೊಂಡಿರುವುದು ಮತ್ತು ಆ ಸಾಧನದ ಮೂಲಕ, ಅತೀ ಎತ್ತರವಾದಂತಹ ದೇವರನ್ನು ಮುಟ್ಟುವ ಗುರಿ ಹೊಂದಿರುವುದು. ಲಿಂಗೈಕ್ಯ ಸಾಧಿಸಲು ಬೇಕಾಗಿರುವಂತಹ – ಸ್ತ್ರೀತ್ವ, ಶರಣತ್ವ, ಕಿಂಕರಭಾವ, ಅರ್ಪಣಾ ಮನೋಭಾವದ ಮೂಲಕ ಆತ್ಯಂತಿಕ ಮಟ್ಟದ ಸ್ತ್ರೀತ್ವವನ್ನು ಪಡೆಯುವುದು. ಈ ಸನ್ನಿವೇಶದಲ್ಲಿ ಸ್ತ್ರೀತ್ವದ ಅವಕಾಶ ಮತ್ತು ಪುರುಷತ್ವದ ಅವಕಾಶ ಮತ್ತು ಅವುಗಳ ನಡುವೆ ಇರುವ ನೈತಿಕ ಅಂತರ್ ಪ್ಲೇ/ಸ್ತರವು ಒಂದರ್ಥದಲ್ಲಿ ಅತ್ಯಂತ ಉತ್ಕೃಷ್ಟವಾಗಿರುವಂತಹ ಸ್ತ್ರೀತ್ವವನ್ನು ಪ್ರಸ್ತಾಪಿಸಿದರೂ, ಕಿಂಕರಭಾವದ ಸ್ತ್ರೀತ್ವದ ನಿರ್ಮಿತಿಯನ್ನು ನಾವು ಕಾಣುತ್ತೇವೆ. ಅಕ್ಕನಲ್ಲಿ ಸ್ತ್ರೀತ್ವದ ಕಲ್ಪನೆ ಉತ್ತುಂಗವೂ ಹೌದು, ಶಿಥಿಲವೂ ಹೌದು. ಇದನ್ನು ಏಕಕಾಲದಲ್ಲಿ ಅವಳು ಅಭಿವ್ಯಕ್ತಪಡಿಸುತ್ತಾಳೆ ಕೂಡ. ಸಾಮಾಜಿಕವಾಗಿರುವಂತಹ ಸ್ತ್ರೀತ್ವವನ್ನು ಧಾರ್ಮಿಕ ವಲಯಕ್ಕೆ ತಂದು ಅದನ್ನು ಉನ್ನತಗೊಳಿಸಿದರೂ, ಅದೇ ತರಹದ ಅಸಮಾನ ಸಂಬಂಧಗಳನ್ನು ಧಾರ್ಮಿಕ ನೆಲೆಯಲ್ಲೂ ಕಾಣುತ್ತಾಳೆ. ಮೂಲಭೂತವಾಗಿ ಅಕ್ಕನಲ್ಲಿ ದೇಹದ ಕಲ್ಪನೆ ನಿಗದಿಗೊಳಪಡದಿದ್ದರೂ, ಅದು ಸಾಮಾಜಿಕ ನಿರ್ಮಿತಿಯ ಹಿನ್ನೆಲೆಯಲ್ಲಿಯೇ ಸ್ತ್ರೀತ್ವ ಪುನರ್‌ರೂಪುಗೊಳ್ಳುವುದು.

'ಸ್ತ್ರೀ'ತ್ವ ಎನ್ನುವುದು ಗುರಿ ಮುಟ್ಟಲು ಒಂದು ಸಾಮರ್ಥ್ಯ ಮತ್ತು ಸದ್ಗುಣವಾಗಿ (virtue) ನೋಡಲಾಗಿದೆ. ಗಂಡಾಗಲಿ ಹೆಣ್ಣಾಗಲಿ ಈ ಸ್ತ್ರೀತ್ವವನ್ನು ಎಲ್ಲರೂ ಪಡೆಯುವ ಸಾಧ್ಯತೆ ಇದೆ. ಅದನ್ನು ಎಲ್ಲರೂ ಆಚರಣೆಗೆ ತರಬಹುದಾದ ಗುಣವಾಗಿದೆ. ಹೀಗೆ ಸ್ತ್ರೀತ್ವ ಅಕ್ಕನಲ್ಲಿ ಒಂದು ಸಾಮರ್ಥ್ಯವೂ (potentiality), ಶಕ್ತಿಯೂ (power) ಹೌದು. ಹೀಗಾಗಿ ಅಕ್ಕನಲ್ಲಿ ನಾವು ಕಾಣಬಹುದಾದಂತಹ ದೇಹದ ಮೂಲಕ ನಿರ್ಮಿತವಾಗುವಂತಹ ಸ್ತ್ರೀತ್ವ ಸಾಧನೆಯೂ ಹೌದು, ಸಾಧನೆಯ ಒಂದು ವಿಧಾನವೂ ಹೌದು ಮತ್ತು ಗುರಿಯೂ ಅದೇ ಆಗಿದೆ.

ಇದರಲ್ಲಿ ಇನ್ನೂ ಮುಖ್ಯವಾದ ಅಂಶವೇನೆಂದರೆ, ಮೊದಲನೆಯ ವಚನಗಳಲ್ಲಿ ನಾವು ಕಾಣುವಂತಹ 'ಮನೆ'ಗೂ ಮತ್ತು ಎರಡು ಮತ್ತು ಮೂರನೆಯ ವಚನದಲ್ಲಿ ಕಾಣುವಂತಹ ಯುದ್ಧದ ವಿಜೃಂಭಿಸುವಿಕೆಯನ್ನು ನಾವು ಇಲ್ಲಿ ಗಮನಿಸಬೇಕು. ಸ್ತ್ರೀವಾದಿ ವಿಮರ್ಶೆಯಲ್ಲಿ ಕಂಡುಬರುವಂತಹ 'ಖಾಸಗಿ ಮತ್ತು ಸಾರ್ವಜನಿಕ' ಎಂಬ ಪ್ರತ್ಯೇಕ ವಲಯಗಳನ್ನು ನಾವು ಕಾಣುವ ದ್ವಂದ್ವ ಪರಿಸ್ಥಿತಿ ಭಿನ್ನವಾಗಿ ಇಲ್ಲಿ ನಿರ್ಮಾಣಗೊಳ್ಳುವುದೇ ಇಲ್ಲ. ಏಕೆಂದರೆ, ಖಾಸಗಿ ವಲಯದಲ್ಲಿ – ಶಿಶುಪಾಲನೆ, ಅಡಿಗೆ, ಹೆರುವುದು, ಅಧಿಕಾರ ಮತ್ತು ನಿಯಂತ್ರಣಗಳು ಇಲ್ಲದಿರುವ ಕಾರಣ ಅದನ್ನು ಕೆಳಸ್ತರದಲ್ಲಿ ಇಡಲಾಗಿದೆ. ಆದರೆ ಇಲ್ಲಿ ನಾವು ಕಾಣುವುದೇನೆಂದರೆ ಮನೆ (ಖಾಸಗಿ) ಮತ್ತು ರಣರಂಗ (ಸಾರ್ವಜನಿಕ) ವಲಯಗಳು 'ಪ್ರಬಲ' ಮತ್ತು 'ದುರ್ಬಲ' ಎಂಬ ವೈರುದ್ಧ್ಯವನ್ನು ತೊಡೆದುಹಾಕುತ್ತವೆ. ಏಕೆಂದರೆ, ಖಾಸಗಿ ವಲಯದಲ್ಲಿ ಮಹತ್ವಾಕಾಂಕ್ಷಿಯಾದ ಐಕ್ಯವನ್ನು ಸಾಧಿಸುವುದಕ್ಕೆ ಬೇಕಾದಂತಹ ವ್ಯಕ್ತಿತ್ವ ಸತಿತ್ವದ್ದಾಗಿದೆ.

ಅಕ್ಕನ ವಚನಗಳಲ್ಲಿ, ಮೇಲೆ ಸೂಚಿಸಿರುವ ಹಾಗೆ ನಾವು ಕಾಣಬಹುದಾದ ಅನೇಕ ವೈರುದ್ಧ್ಯಾತ್ಮಕ ಆಯಾಮಗಳ ಬಗೆಗಿನ ಗಂಭೀರ ಸಾಂಸ್ಕೃತಿಕ ಅಧ್ಯಯನ ಮತ್ತು ಅದು ಒಡ್ಡುವ ವಿಪುಲ ಅರ್ಥ ಸಾಧ್ಯತೆಗಳ ಹಿನ್ನೆಲೆಯಲ್ಲಿ ಅಕ್ಕನ ವಚನಗಳನ್ನು ಮರು ಓದಿಗೆ ಒಳಪಡಿಸುವ, ಮನನ ಮಾಡಿಕೊಳ್ಳುವ, ಹೊಸ ಒಳನೋಟಗಳನ್ನು ಕಂಡುಕೊಳ್ಳುವ ಪ್ರಯತ್ನ ಇನ್ನೂ ಆಗಬೇಕಾಗಿದೆ ಮತ್ತು ಆಕೆಯನ್ನು ಹೊಸದಾಗಿ ವಿಶ್ಲೇಷಿಸಬಹುದಾದ ಅಧ್ಯಯನಗಳ ಅಗತ್ಯವಿದೆ. ಏಕ ಮಾದರಿಯಲ್ಲಿ ಪರಿಭಾವಿಸುವ ಮತ್ತು ಏಕರೂಪಿ ಆಲೋಚನಾ ಕ್ರಮದಿಂದ ಅಕ್ಕನನ್ನು ಮುಕ್ತಗೊಳಿಸುವ ಪ್ರಯತ್ನಗಳು ಆಗಬೇಕಿದೆ.

**ಡಾ|| ಸುಧಾ ಸೀತಾರಾಮನ್**
ಸಮಾಜಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಕಲಾ ಕಾಲೇಜು, ಬೆಂಗಳೂರು - ೫೬೦ ೦೦೧



# ಶನಿಯ ನಿರ್ಗಮನ

**ಜೂ**ನ್ ತಿಂಗಳ ಕೊನೆಯಲ್ಲಿ ಆರಂಭವಾದ ಮೂರು ಗ್ರಹಗಳ ಅಪ್ಪಾಲೆ-ತಿಪ್ಪಾಲೆ ಆಟ ಜುಲೈ ಮೊದಲ ವಾರಕ್ಕೂ ಮುಂದುವರೆಯಲಿದೆ. ಆದರೆ ಶನಿ ಮಾತ್ರ ದಿನ ದಿನಕ್ಕೆ ದೂರ ಸರಿದು ಒಂದೇ ವಾರದಲ್ಲಿ ಕಾಣದಂತಾಗುತ್ತದೆ. ಆರು ತಿಂಗಳುಗಳಿಂದ ಸಂಜೆಯ ಆಕಾಶದಲ್ಲಿ ಬೆಳಗುತ್ತಿದ್ದ ಅದು ಈಗ ತಾತ್ಕಾಲಿಕ ರಜೆ ಹಾಕಿಕೊಂಡಿದೆ. ಜುಲೈ ೨೩ಕ್ಕೆ ಸೂರ್ಯನ ಇನ್ನೊಂದು ಬದಿಯಿಂದ ಹಾದು ಬಂದ ಮೇಲೆ ಆಗಸ್ಟ್‌ನಲ್ಲಿ ಬೆಳಗಿನ ಪಾಳಿಗೆ ಬರಲಿದೆ. ಅಲ್ಲಿಯವರೆಗೆ ರಜೆ ಮಂಜೂರಾಗಿದೆ.

ಶನಿ 'ಗುಡ್ ಬೈ' ಹೇಳಿ ಹೋದ ಮೇಲೂ ಬುಧ-ಶುಕ್ರಗಳೆರಡರ ಆಟ ಮುಂದುವರೆಯುತ್ತದೆ. ಫಳಗುಟ್ಟುವ ಶುಕ್ರ ಪಶ್ಚಿಮದ ಸಂಜೆ ಗೆಂಪಿನಲ್ಲಿ ಸ್ಫುಟವಾಗಿ ಎದ್ದುಕಾಣುತ್ತದೆ. ಆದರೆ ಬುಧ ಮಾತ್ರ ಸಂಜೆಗೆಂಪಿನಲ್ಲೋ ಅಥವಾ ತೆಳ್ಳನೆಯ ಮೋಡದ ಹಿಂದೋ 'ಕಳೆದು'ಹೋಗಬಹುದು. ಎಂಟು ಮತ್ತು ಒಂಬತ್ತರಂದು ಬುಧ-ಶುಕ್ರಗಳೆರಡೂ ಕಾಣುವುದರ ಜೊತೆಗೆ ತೆಳ್ಳನೆಯ ಗೆರೆಯ ಹಾಗೆ ಬಾಲಚಂದ್ರವೂ ಸೇರಿಕೊಳ್ಳುವುದು. ಜುಲೈ ೮ರಂದು ಸೂರ್ಯ-ಬುಧ ಅಂತರ ಗರಿಷ್ಠ, ಅಂದರೆ ಅದನ್ನು ಪತ್ತೆ ಮಾಡಲು ಅತಿಪ್ರಶಸ್ತ ಸಮಯ ಎಂದರ್ಥ. ಆ ಮುಂದಿನ ದಿನಗಳಲ್ಲೂ ಬುಧ-ಶುಕ್ರ ಆಟ ಮುಂದುವರೆಸುತ್ತವೆ. ಜುಲೈ ಕೊನೆಯ ಹೊತ್ತಿಗೆ ಬುಧ ದಿಗಂತದ ಅಂಚಿಗೆ ಸರಿಯತೊಡಗುತ್ತದೆ.




ಸಂಜೆಯ ಆಕಾಶದಲ್ಲಿ ಕಾಣುವ ಇನ್ನೊಂದು ಗ್ರಹ ಗುರು. ಸೂರ್ಯಾಸ್ತವಾಗುವಾಗ ಇದನ್ನು ಸರಿ ಸುಮಾರು ನೆತ್ತಿಯ ಮೇಲೆ ನೋಡಬಹುದು. ಪಕ್ಕದ ಪ್ರಕಾಶಮಾನ ನಕ್ಷತ್ರವೇ ಚಿತ್ತಾ. ೧೩ರ ರಾತ್ರಿ ಅರ್ಧಚಂದ್ರ ಗುರು ಗ್ರಹದ ಪಕ್ಕವೇ ಕಾಣುತ್ತದೆ. ವಾಸ್ತವವಾಗಿ ಚಂದ್ರ ಅದಕ್ಕೆ ಅಡ್ಡ ಬರುತ್ತದೆ. ಈ ಆಚ್ಛಾದನೆ ಮಾತ್ರ ನಮಗೆ ಕಾಣುವುದಿಲ್ಲ. ಜುಲೈ ೧೮ರಂದು ಚಂದ್ರ ಜ್ಯೇಷ್ಠಾ ನಕ್ಷತ್ರವನ್ನು ಮುಚ್ಚಿಹಾಕುವ ಘಟನೆಯೂ ನಮಗೆ ಕಾಣುವುದಿಲ್ಲ. ಉಳಿದೊಂದು ಗ್ರಹ ಮಂಗಳ ಬೆಳಗಿನ ಜಾವ ಕಾಣುವುದು. ಸುಮಾರು ನಡುರಾತ್ರಿಗೆ ಉದಯಿಸುವುದು. ಹಾಗಾಗಿ ೨೭ರಂದು ಚಂದ್ರನ ಪಕ್ಕದಲ್ಲಿಯೇ ಕಾಣುವುದು. ಇದರ ಹಿನ್ನೆಲೆಯ ಮೀನರಾಶಿಯಲ್ಲಿ ಪ್ರಕಾಶಮಾನ ನಕ್ಷತ್ರಗಳು ಹೆಚ್ಚಾಗಿಲ್ಲವಾದ್ದರಿಂದ ಗುರುತಿಸುವುದು ಸುಲಭ.

ಹುಣ್ಣಿಮೆ ೨೧ರಂದು. ಆ ದಿನ ಚಂದ್ರನ ಆಸುಪಾಸನ್ನು ಗಮನಿಸಿ. ದಕ್ಷಿಣಕ್ಕೆ ಧನು; ಪಕ್ಕದಲ್ಲಿ ಉರಗಧರ (ಒಫಿಯೂಕಸ್). ಸ್ವಲ್ಪ ಉತ್ತರಕ್ಕೆ ನೀಲಿ ನಕ್ಷತ್ರವೊಂದು – ಅದರ ಆಚೀಚೆ ಎರಡು ಕಡಿಮೆ ಪ್ರಕಾಶದ ಎರಡು ನಕ್ಷತ್ರಗಳಿವೆ. ಒಂದೇ ಗೆರೆಯ ಮೇಲೆ ಇದ್ದಂತೆ ಕಾಣುತ್ತವೆ. ಇದು ಗರುಡ (ಅಕ್ವಿಲಾ) ಪುಂಜ ಆಲ್ಟೇರ್ ಎಂಬ ನಕ್ಷತ್ರ. ನಮ್ಮಲ್ಲಿಯ ಹೆಸರು ಶ್ರವಣ. ಚಂದ್ರನಿಂದ ಎಷ್ಟೊಂದು ದೂರದಲ್ಲಿದೆ ಎನ್ನಿಸುವುದಲ್ಲವೇ ? ಹುಣ್ಣಿಮೆಯ ದಿನವೇ ಭೂಮಿ-ಚಂದ್ರರ ದೂರವೂ ಕನಿಷ್ಠವಾಗಲಿದೆ. ಆದ್ದರಿಂದ ಭರತ ಇಳಿತಗಳು ಸಾಮಾನ್ಯಕ್ಕಿಂತ ಹೆಚ್ಚಿರುತ್ತವೆ.

ಸಂಜೆ ಆಕಾಶದ ಪರಿಚಯ ಮಾಡಿಕೊಳ್ಳಲು ನಕ್ಷೆ ಬಳಸಿ. ಶುಕ್ರ (ಬುಧ) ಮತ್ತು ಗುರು ನಡುವೆ ಇರುವುದೇ ಸಿಂಹರಾಶಿ. ಹಾಗೇ ವಾಯವ್ಯದತ್ತ ದೃಷ್ಟಿ ಹಾಯಿಸಿ. ಸಪ್ತರ್ಷಿ ಮಂಡಲ ಕಾಣುತ್ತದೆ. ಅದರ ಮೊದಲೆರಡು ನಕ್ಷತ್ರಗಳನ್ನು ಸೇರಿಸಿ, ಧ್ರುವನಕ್ಷತ್ರವನ್ನು ಪತ್ತೆ ಮಾಡಬಹುದು. ಧ್ರುವನಕ್ಷತ್ರ ಅಷ್ಟೇನೂ ಪ್ರಕಾಶಮಾನವಾದದ್ದಲ್ಲ. ಅದೂ ಸೇರಿದಂತೆ ಅದಕ್ಕಿಂತ ಕಡಿಮೆ ಪ್ರಕಾಶದ ಕೆಲವೊಂದು ನಕ್ಷತ್ರಗಳ ಗುಂಪಿಗೆ ಲಘು ಸಪ್ತರ್ಷಿ ಮಂಡಲ ಎಂದು ಹೆಸರಿದೆ. ಇದನ್ನು ಗುರುತಿಸಲು ಈಗ ಉತ್ತಮ ಅವಕಾಶವಿದೆ, ಆಕಾಶ ಶುಭ್ರವಾಗಿದ್ದರೆ ಮಾತ್ರ. ಈಗ ಈಶಾನ್ಯದತ್ತ ದೃಷ್ಟಿ ಹೊರಳಿಸಿ, ರಾಜಹಂಸ (ಸಿಗ್ನಸ್), ವೀಣಾ (ಲೈರಾ) ಮತ್ತು ಶ್ರವಣಗಳ 'ಬೇಸಿಗೆ ತ್ರಿಕೋಣ' ಅಲ್ಲಿ ಹಾಜರಾಗಿದೆ. ಲಘು ಸಪ್ತರ್ಷಿಮಂಡಲಕ್ಕೂ ವೀಣಾಗೂ ಮಧ್ಯೆ ಇರುವುದೇ ಡ್ರಾಕೋ. ಇದನ್ನು ಶ್ರೀಯುತ ಆರ್.ಎಲ್.ನರಸಿಂಹಯ್ಯನವರು ಸುಯೋಧನ ಎಂದು ಹೆಸರಿಸಿದ್ದಾರೆ. ವೀಣಾ ಪಕ್ಕದ ಹರ್‌ಕ್ಯುಲೆಸ್‌ಗೆ ಭೀಮಸೇನ ಎಂದು ಹೆಸರಿರುವುದರಿಂದ ಈ ಇಬ್ಬರ ಮುಖಾ ಮುಖಿ ಅಲ್ಲಿ ಚಿತ್ರಿತವಾದಂತಿದೆ. ಹರ್‌ಕ್ಯುಲೆಸ್ (ಭೀಮಸೇನ) ಮತ್ತು ಬೂಟಿಸ್ (ಸಹದೇವ) ನಡುವೆ ಇರುವ ಚಂದ್ರಾಕೃತಿಯ ಪುಂಜವೇ ಉತ್ತರ ಕಿರೀಟಿ (ಕರೋನ ಬೋರಿಯೋಲಿಸ್).

ಈಗ ದಕ್ಷಿಣಕ್ಕೆ ತಿರುಗಿ ನಿಲ್ಲಿ. ಗುರು ಗ್ರಹದಿಂದ ಆಗ್ನೇಯದತ್ತ ದೃಷ್ಟಿ ಹರಿಸಿ. ವೃಶ್ಚಿಕ, ಧನುಗಳ ಸೌಂದರ್ಯ ನಿಮ್ಮನ್ನು ಸೆರೆ ಹಿಡಿಯುತ್ತದೆ. ಅವೆರಡರ ನಡುವೆ ಸ್ವಲ್ಪ ದಕ್ಷಿಣಕ್ಕೆ ಅಂದರೆ ಆಗ್ನೇಯದಲ್ಲಿ ಉದಯಿಸುತ್ತಿರುವ ಬಾಲಚಂದ್ರಾಕೃತಿಯ ಪುಂಜವೇ ದಕ್ಷಿಣ ಕಿರೀಟಿ (ಕರೋನ ಆಸ್ಟ್ರಲಿಸ್). ದಕ್ಷಿಣದ ಅಂಚಿನತ್ತ ತ್ರಿಶಂಕು, ಅದರ ಪಕ್ಕದ ಕಿನ್ನರ (ಸೆಂಟಾರಸ್) ಸ್ಫುಟವಾಗಿ ಕಾಣುತ್ತವೆ.

ಈ ತಿಂಗಳಲ್ಲಿ ದುರ್ಬೀನು-ದೂರದರ್ಶಕ ಇರುವವರು ನಾಲ್ಕು ಧೂಮಕೇತುಗಳನ್ನು ಪತ್ತೆ ಮಾಡಬಹುದು. ಜಿಯೋಕೋಬಿನಿ ಝಿನ್ನರ್ ಎಂಬುದು ಜುಲೈ ೧-೨ರ ಅವಧಿಯಲ್ಲಿ ಬೆಳಗಿನ ಜಾವ ಕೃತ್ತಿಕಾ ನಕ್ಷತ್ರ ಗುಚ್ಛದ ಪಕ್ಕದಲ್ಲಿ ಹಾದು ಹೋಗುವುದು. ಇನ್ನೊಂದು ಧೂಮಕೇತು ಹಾರ್ಟ್ಲೆ-ಐರಾಸ್ ಎಂಬುದು ಪಾರ್ಥ (ಪರ್ಸಿಯುಸ್) ಪುಂಜದ ಎರಡು ಗುಚ್ಛಗಳ ಮೂಲಕ ಇದೇ ಅವಧಿಯಲ್ಲಿ (ಜುಲೈ ೧) ಹಾದುಹೋಗುವುದು. ಇವೆರಡೂ ಬೆಳಗಿನ ಜಾವ ಕಂಡರೆ ಇನ್ನೆರಡು ಸಂಜೆ ಕಾಣಲಿವೆ. ೨೦೦೪ ನೀಚ್ Q೨ ಎಂಬುದು ಸಪ್ತರ್ಷಿಮಂಡಲದತ್ತ ಸಾಗುತ್ತಿದೆ.

ಟೆಂಪಲ್ ೧ ಎಂಬ ಧೂಮಕೇತು ಈಗ ಸುದ್ದಿಯಲ್ಲಿದೆ. ಆದರೂ ಉಳಿದ ಮೂರರಂತೆ ಅದೂ ಕೂಡ ದೂರದರ್ಶಕಕ್ಕೆ ಮಾತ್ರ ಸಿಲುಕುತ್ತದೆಯಷ್ಟೇ. ಜುಲೈ ಮೊದಲ ವಾರದಲ್ಲಿ ಚಿತ್ತಾ ನಕ್ಷತ್ರದಿಂದ ಸುಮಾರು ಮೂರು ಡಿಗ್ರಿ ದೂರದಲ್ಲಿ ಕಾಣುತ್ತದೆ. ಜುಲೈ ೪ರಂದು ಡೀಪ್ ಇಂಪಾಕ್ಟ್ ಎಂಬ ಬಾಹ್ಯಾಕಾಶನೌಕೆ ಇದರ ಮೇಲೆ ೩೭೦ ಕೆ.ಜಿ ತೂಕದ ಉಪಕರಣವನ್ನು ಎಸೆಯಲಿದೆ. ಇದರಿಂದ ಆ ಬಂಡೆಯ ಮೇಲೆ ಉಂಟಾಗುವ ಕುಳಿಯನ್ನು ಅಭ್ಯಸಿಸುವುದೇ ಇದರ ಉದ್ದೇಶ. ಈ ಆಘಾತದ ಕಾರಣ ಧೂಮಕೇತುವಿನ ಪ್ರಕಾಶ ಹೆಚ್ಚಬಹುದೇ ? ಅಥವಾ ರಾವಣನ ಹೊಟ್ಟೆಗೆ ಅರೆಕಾಸು ಮಜ್ಜಿಗೆಯಂತಾಗಬಹುದೇ ? ಕಾದು ನೋಡಬೇಕು.

ಜುಲೈ ತಿಂಗಳಲ್ಲಿ ಮೂರು ಉಲ್ಕಾವೃಷ್ಟಿಗಳಿವೆ. ಆಗಸ್ಟ್‌ನಲ್ಲಿ ಗರಿಷ್ಠ ಮುಟ್ಟುವ ಪರ್ಸಿಯ್ಡ್ಸ್ ಈಗಲೇ ಆರಂಭವಾಗುವುದು. ಇದಲ್ಲದೆ ಜುಲೈ ೨೭-೨೮ರಲ್ಲಿ ಗರಿಷ್ಠ ಮುಟ್ಟುವ ಅಕ್ವಾರಿಡ್ಸ್ ಗಂಟೆಗೆ ೨೦ ಉಲ್ಕೆಗಳನ್ನು ಸುರಿಸುವುದು. ಜುಲೈ ೩೦ರಂದು ಕೇಪ್ರಿಕಾರ್ನಿಡ್ಸ್

ಡಾ|| ಬಿ. ಎಸ್. ಶೈಲಜಾ



*ಜುಲೈ ೯ರ ಸಂಜೆ ಪಶ್ಚಿಮ ದಿಗಂತದಲ್ಲಿ ಬಾಲಚಂದ್ರ, ಬುಧ ಮತ್ತು ಶುಕ್ರರ ಸಮಾಗಮ*

ಎಂಬ ಕ್ಷೀಣ ಉಲ್ಕಾವೃಷ್ಟಿಯೂ ಗರಿಷ್ಠ ಮುಟ್ಟಲಿದೆ.

ಭೂಮಿ-ಸೂರ್ಯರ ಅಂತರ ಗರಿಷ್ಠವಾಗುವುದು ೫ರಂದು; ೧೫೧ ಮಿಲಿಯನ್ ಕಿ.ಮೀ.ಗಳು. ಸಾಮಾನ್ಯಕ್ಕಿಂತ ಶೇ. ಎರಡು ಹೆಚ್ಚು, ಅಷ್ಟೇ.

**ಖಗೋಳ ದಿನಚರಿ**

೧ ಹಾರ್ಟ್ಲೀ-ಐರಾಸ್ ಧೂಮಕೇತು ಪಾರ್ಥಪುಂಜದ ಗುಚ್ಛಗಳ ಸನಿಹದಲ್ಲಿ
೨ ಭೂಮಿ-ಸೂರ್ಯರ ಅಂತರ ಗರಿಷ್ಠ ೧೦:೨೪ಕ್ಕೆ
೬ ಅಮಾವಾಸ್ಯೆ ೧೭:೩೨ಕ್ಕೆ
೭ ಬುಧ-ಶುಕ್ರರ ಅಂತರ ೧.೭ ಡಿಗ್ರಿ, ಶನಿ-ಚಂದ್ರ ನಡುವೆ ೫ ಡಿಗ್ರಿ ಅಂತರ
೮ ಬುಧ-ಚಂದ್ರ ನಡುವೆ ೫ ಡಿಗ್ರಿ ಅಂತರ,
ಶುಕ್ರ-ಚಂದ್ರ ನಡುವೆ ೩ ಡಿಗ್ರಿ ಅಂತರ
೯ ಬುಧ-ಸೂರ್ಯ ನಡುವೆ ಗರಿಷ್ಠ ಕೋನ ೨೬ ಡಿಗ್ರಿ
೧೩ ಗುರು-ಚಂದ್ರ ನಡುವೆ ಕನಿಷ್ಠ ಕೋನ (ಆಚ್ಛಾದನೆ ನಮಗೆ ಕಾಣುವುದಿಲ್ಲ)
೧೪ ಚಾಂದ್ರಮಾನದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)
೧೮ ಜ್ಯೇಷ್ಠಾ ನಕ್ಷತ್ರದ ಪಕ್ಕ ಚಂದ್ರ (ಆಚ್ಛಾದನೆ ಕಾಣುವುದಿಲ್ಲ)
೨೧ ಹುಣ್ಣಿಮೆ ೧೬:೩೦ಕ್ಕೆ
೨೨ ಚಂದ್ರ-ಭೂಮಿ ದೂರ ಕನಿಷ್ಠ ೦೧:೧೪ಕ್ಕೆ,
ಬುಧಗ್ರಹದ ಹಿನ್ನಡೆ ಆರಂಭ,
ಶುಕ್ರ-ಮಘ ನಡುವೆ ೧.೨ ಡಿಗ್ರಿ ಕೋನ
೨೩ ಸೂರ್ಯನ ನೇರಕ್ಕೆ ಶನಿಗ್ರಹ
೨೭ ಮಂಗಳ-ಚಂದ್ರ ನಡುವೆ ಕನಿಷ್ಠಕೋನ
ಡೆಲ್ಟಾ ಅಕ್ವಾರಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ
೨೮ ಚಾಂದ್ರಮಾಸದ ಕೊನೆಯ ಪಾದ

೧ ರಿಂದ ೧೫ರವರೆಗೆ ಬುಧ-ಶುಕ್ರರ ಜೋಡಿಯನ್ನು ಛಾಯಾಗ್ರಹಣ ಮಾಡಲು ಒಳ್ಳೆಯ ಅವಕಾಶವಿದೆ.

೩-೪-೫ ಈ ದಿನಗಳಲ್ಲಿ ಚಿತ್ತಾನಕ್ಷತ್ರದ ಆಸುಪಾಸನ್ನು ಸೆರೆಹಿಡಿಯಿರಿ. ಟೆಂಪಲ್ ೧, ಧೂಮಕೇತು ಕಾಣುವ (ಚಿತ್ರದಲ್ಲಿಯಾದರೂ) ಸಾಧ್ಯತೆ ಇದೆ.

**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

# ಯಶೋಧರೆಯ ಶೋಕಗಾಥೆ



೧

ನೆನಪ ಮಂಚದ ಮೇಲೆ
ಉರುಳಾಡುತ್ತಿದ್ದೇನೆ ಅರಸ
ನಿದ್ದೆ ಬಾರದು ಕಣ್ಣಿಗೆ
ಗಟ್ಟಿಮಾಡಿ ಮನಸ ಮುಚ್ಚಿದರೆ ಕಣ್ಣು
ಎದೆಯೊಳಗೆ ನಿನ್ನ ನೆನಪ ನೋವಿನ ಹುಣ್ಣು!

೨

ಹೆರುವಾಗ ರಾಹುಲನ ನಾನು
ನೋವು ತುಂಬಿದ ಚೀಲ
ಬೇನೆ ತಾಳದ ನಿನ್ನೀ ಬಾಲೆ
ತಿರುಗುವ ಬುಗುರೆ; ನೆಲದ ಮೇಲೆ
ನೆನಪಿದೆಯಾ ನಿನಗೆ ಆಗ
ಅತ್ತದ್ದು ಹೆಚ್ಚು ನೀನೆ!

೩

ಹುಣ್ಣಿಮೆಯ ದಿನ
ಚಂದ್ರನನು ಆಗಸದಲ್ಲಿ ಕಂಡು
ಖುಷಿಪಡುವರು ಜನ
ನಾನಂತೂ ನೋಡುವುದಿಲ್ಲ ಮೇಲೆ
ಅರಸ,
ನೀನಿರುವಿಯಲ್ಲ ಇಲ್ಲೆ!

೪

ಆಳ ಸಾಗರದಲ್ಲಿ
ಮುಳುಗಿ ಮುತ್ತ ತೆಗೆವರು
ಹುಚ್ಚರು!
ನನಗಂತೂ ಬೇಕಾಗಿಲ್ಲ
ನೀ ಕೊಟ್ಟ ಮುತ್ತೇ
ಮೆತ್ತಿಕೊಂಡಿದೆ ಮೈ ತುಂಬ!

೫

ನೆನಪ ಗೋರಿಗೊಳಿಸಿ
ಹುರುಪಿನಿಂದ ಹೊರಬಂದಾಗ
ಈ ಕಪಿಲವಸ್ತು ನನ್ನ ನೋಡಿ
ಕಣ್ಣೀರ ಸುರಿಸಿದರೆ
ಅರಸ ನಾ
ಸುಮ್ಮನಿರುವುದು ಹೇಗೆ?

ಡಾ|| ಎಂ. ಬಿ. ಹೂಗಾರ
ಕಾಗವಾಡ




# ಯೂರೋಪಿಯನ್ ಒಕ್ಕೂಟ ಸಂವಿಧಾನ

**ಯೂ**ರೋಪಿಯನ್ ಒಕ್ಕೂಟದ ಸಂವಿಧಾನ ಕುರಿತಂತೆ ಇತ್ತೀಚೆಗೆ ಫ್ರಾನ್ಸ್ ಮತ್ತು ನೆದರ್‌ಲ್ಯಾಂಡ್ಸ್‌ನಲ್ಲಿ ಜನಾಭಿಪ್ರಾಯ ಸಂಗ್ರಹಣೆ ಜರುಗಿ ಎರಡೂ ದೇಶಗಳ ಬಹುಸಂಖ್ಯಾತ ಜನ ವಿರೋಧ ವ್ಯಕ್ತಪಡಿಸಿದ್ದಾರೆ. ಇದರಿಂದಾಗಿ ಅಲ್ಲಿನ ಸರಕಾರಗಳು, ಯೂರೋಪಿನ ಬಂಡವಾಳಶಾಹಿ ವರ್ಗ ತತ್ತರಿಸಿಹೋಗಿವೆ. ಒಕ್ಕೂಟದ ಭವಿಷ್ಯದ ಬಗ್ಗೆಯೇ ಸಂಶಯಗಳು ಹುಟ್ಟಿಕೊಳ್ಳುತ್ತಿವೆ. ಈ ಹಿನ್ನೆಲೆಯಲ್ಲಿ ಅಲ್ಲಿ ಜಾರಿಗೆ ತರಲಿಚ್ಛಿಸಿದ್ದ ಸಂವಿಧಾನದ ರೂಪುರೇಷೆಗಳು, ಉದ್ದೇಶಗಳು, ಆ ಎರಡು ದೇಶಗಳ ಆಂತರಿಕ ರಾಜಕೀಯ ಪರಿಸ್ಥಿತಿ, ವರ್ಗಾಧಾರಿತ ಒತ್ತಾಸೆಗಳೇ ಅಲ್ಲದೆ ಆ ಜನಾಭಿಪ್ರಾಯ ಸಂಗ್ರಹದಿಂದ ಹೊರಬಿದ್ದ ತೀರ್ಪಿನಿಂದಾಗಿ ಒಕ್ಕೂಟದ ಸದಸ್ಯರಾಷ್ಟ್ರಗಳ ಮತ್ತು ಅಂತರರಾಷ್ಟ್ರೀಯ ಸಂಬಂಧಗಳಲ್ಲಿ ಉಂಟಾಗುವ ಪರಿಣಾಮಗಳ ಬಗ್ಗೆ ಚರ್ಚೆ ವಿಮರ್ಶೆಗಳು ಜರುಗುತ್ತಿವೆ.

ಸಂವಿಧಾನದ ಪರ ಮತದಾರರ ಒಪ್ಪಿಗೆ ಪಡೆಯಲು ಫ್ರಾನ್ಸ್‌ನ ಅಧ್ಯಕ್ಷ ಚಿರಾಕ್ ಸರಕಾರ ಮತ್ತು ಅಲ್ಲಿನ ಕೆಲವು ವಿರೋಧ ಪಕ್ಷಗಳು ಹಾಗೂ ಮಧ್ಯಮವರ್ಗದ ಜನವಿಭಾಗಗಳು ಎಷ್ಟೇ ಪ್ರಯತ್ನಿಸಿದರೂ ಶೇ. ೫೫ರಷ್ಟು ಜನರು ತಮ್ಮ ಪ್ರತಿರೋಧ ವ್ಯಕ್ತಪಡಿಸಿದ್ದಾರೆ. ಆ ಮೂಲಕ ಯೂರೋಪಿನ ಸಾಮಾಜಿಕ ಮತ್ತು ರಾಜಕೀಯ ಬೆಳವಣಿಗೆಗಳನ್ನು ಕುರಿತಂತೆ ತಮ್ಮ ಕಳವಳ ವ್ಯಕ್ತಪಡಿಸಿದ್ದಾರೆ. ಪ್ರಧಾನಿ ಜೀನ್ ರಫೆರಾನ್‌ರನ್ನು ಕೆಳಗಿಳಿಸಿ ಅಧ್ಯಕ್ಷ ಚಿರಾಕ್ ಮಾಜಿ ಸಚಿವ ವಿಲೆಪ್ಯಾನ್‌ನ ನಾಯಕತ್ವದಲ್ಲಿ ಹೊಸ ಸರಕಾರವನ್ನು ರಚಿಸಿದ್ದಾರೆ. ಮೂರು ವರ್ಷಗಳ ಅಧಿಕಾರಾವಧಿಯಲ್ಲಿ ಜನವಿರೋಧಿ ನೀತಿಗಳನ್ನು ಅನುಸರಿಸಿ ಆಳ್ವಿಕೆ ನಡೆಸಿದ್ದ ರಫೆರಾನ್ ಪದಚ್ಯುತಗೊಳ್ಳುವುದನ್ನು ಈ ಹಿಂದೆ ನಿರೀಕ್ಷಿಸಲಾಗಿತ್ತು.

ನೆದರ್‌ಲ್ಯಾಂಡ್ಸ್‌ನ ಪ್ರಧಾನಿ ಜಾನ್ ಪೀಟರ್ ಬಾಲ್ಕನೆಂಡ್ ನೇತೃತ್ವದ ಬಲಪಂಥೀಯ ಒಕ್ಕೂಟದ ಸರಕಾರವೂ ಅಲ್ಲಿನ ಜನತೆಯ ತೀರ್ಪಿನಿಂದಾಗಿ ತಲ್ಲಣಿಸುತ್ತಿದೆ. ನೆದರ್‌ಲ್ಯಾಂಡ್ಸ್‌ನಲ್ಲಿ ಸಂವಿಧಾನಕ್ಕೆ ವಿರೋಧವಿದ್ದವರೆಲ್ಲರೂ ಪ್ರಗತಿಪರರು ಎಡಪಂಥೀಯರು ಎಂದೇನಲ್ಲ. ಅವರಲ್ಲಿ ಪರಕೀಯರನ್ನು ವಿರೋಧಿಸುವವರೂ ಇದ್ದಾರೆ. ಆದರೆ ಹೆಚ್ಚಿನವರು ಎಡಪಂಥೀಯರು, ಗ್ರೀನ್‌ಗ್ರೂಪ್ ಸದಸ್ಯರು, ಶಾಂತಿ ಚಳುವಳಿ ಕಾರ್ಯಕರ್ತರು ಮತ್ತು ಸ್ವಯಂಸೇವಕ ಸಂಸ್ಥೆಗಳೇ. ಅಲ್ಲಿನ ಬಹುಪಾಲು ಜನ ವಲಸೆಗಾರರನ್ನು ವಿರೋಧಿಸುತ್ತಾರೆ; ಒಕ್ಕೂಟದಲ್ಲಿ ಟರ್ಕಿಗೆ ಪ್ರವೇಶವಿರಬಾರದು ಎಂದು ಘೋಷಿಸುತ್ತಾರೆ; ಸಂವಿಧಾನದಿಂದ ತಮ್ಮ ಉದ್ಯೋಗಾವಕಾಶಗಳಿಗೆ ಧಕ್ಕೆಯುಂಟಾಗುತ್ತದೆ ಎಂದು ಆತಂಕಪಡುತ್ತಾರೆ.

ಫ್ರಾನ್ಸ್‌ನಲ್ಲಿ ಕಮ್ಯುನಿಸ್ಟರು, ರ‍್ಯಾಡಿಕಲ್ ಬಣದ ಸಮಾಜವಾದಿಗಳು ಮತ್ತು ಎಡಪಂಥೀಯ ಸಮಾಜವಾದಿಗಳಿಗೆ ಹೊಸ ಉದಾರವಾದಿ ನೀತಿಗಳ ಬಗ್ಗೆ ತೀವ್ರ ವಿರೋಧವಿದೆ. ಸಮಾಜವಾದಿ ಪಕ್ಷದ ಬಹಳಷ್ಟು ಸದಸ್ಯರು ಅಧ್ಯಕ್ಷ ಚಿರಾಕ್‌ನ ಅನುಯಾಯಿಗಳು. ಎಂದರೆ ಸಂಪ್ರದಾಯವಾದಿಗಳು. ಸರಕಾರದಲ್ಲಿರುವ ಪಕ್ಷಗಳು, ಸಂವಿಧಾನದ ಪರವಾಗಿರುವವರು ಸಂವಿಧಾನ ಜಾರಿಗೆ ಬಂದದ್ದೇ ಆದರೆ ತಮ್ಮ ಆರ್ಥಿಕ ಭದ್ರತೆಗೆ ಕುಂದುಂಟಾಗುತ್ತದೆಂದು ವಾದಿಸುತ್ತಾರೆ.

ಸಂವಿಧಾನದ ಬಗ್ಗೆ ಒಲವು ಇರುವ ಬಲಪಂಥೀಯರು, ಉದಾರವಾದಿಗಳು, ತಮ್ಮ ವಿರೋಧಿಗಳಿಗೆ ಯೂರೋಪಿಯನ್ ಒಕ್ಕೂಟದ ಅಸ್ತಿತ್ವದ ಬಗ್ಗೆಯೇ ಅಸಮಾಧಾನವಿದೆ, ವಲಸೆಗಾರರ ಬಗ್ಗೆ ಅನಗತ್ಯ ಆತಂಕವಿದೆ ಎಂದು ದೂರುತ್ತಾರೆ. ಇದಕ್ಕೆ ವ್ಯತಿರಿಕ್ತವಾಗಿ ಕಮ್ಯುನಿಸ್ಟರು ಮತ್ತಿತರ ಎಡಪಂಥೀಯರು ಬೊಟ್ಟುಮಾಡಿ ಪ್ರತಿಪಾದಿಸುವ ಅಂಶಗಳಲ್ಲಿ ಹುರುಳಿಲ್ಲದಿಲ್ಲ. ಅವರ ಹೇಳಿಕೆಗಳಲ್ಲಿ ಸ್ವದೇಶ ಪ್ರೇಮದ ಅತಿರೇಕವಿಲ್ಲ; ಸುಧಾರಣೆಗಳನ್ನಾಗಲಿ ಬದಲಾವಣೆಗಳನ್ನಾಗಲಿ ವಿರೋಧಿಸುವ ನಕಾರಾತ್ಮಕ ಅಭಿಪ್ರಾಯವಿಲ್ಲ; ತಮ್ಮ ರಾಷ್ಟ್ರೀಯ ಅನನ್ಯತೆ ಅಳಿಸಿಹೋಗಿಬಿಡುವುದೆಂಬ ಭೀತಿಯಿಲ್ಲ. ಬದಲು, ಸಮಾಜವಾದಿ ಯೂರೋಪ್‌ನ ಕಲ್ಪನೆಯನ್ನು ಸಮರ್ಥಿಸುತ್ತಾರೆ; ಸದಸ್ಯ ರಾಷ್ಟ್ರಗಳ ನಡುವಿನ ಪರಸ್ಪರ ಯುದ್ಧ ಸಾಧ್ಯತೆಯನ್ನು ಸಂಪೂರ್ಣವಾಗಿ ನಿವಾರಿಸಲು ಎಲ್ಲರೂ ಬದ್ಧರಾಗಬೇಕೆಂದು ಒತ್ತಾಯಿಸುತ್ತಾರೆ.

ಜನತೆ ಸಂವಿಧಾನವನ್ನು ತಿರಸ್ಕರಿಸಲು ಸಾಕಷ್ಟು ಕಾರಣಗಳಿವೆ. ಏಕೆಂದರೆ, ರಕ್ಷಣೆ, ತೆರಿಗೆ ನೀತಿ, ವಿದೇಶಾಂಗ ನೀತಿಗಳಿಗೆ ಸಂಬಂಧಿಸಿದಂತೆ ಸದಸ್ಯ ರಾಷ್ಟ್ರಗಳು ಸ್ವಯಂನಿರ್ಧಾರ ತೆಗೆದುಕೊಳ್ಳುವ ಹಕ್ಕುಗಳನ್ನು ನಿರಾಕರಿಸುವ ಅಂಶಗಳು ಅದರಲ್ಲಿ ಅಡಗಿವೆ; ಹೆಸರಿಗೆ ಮಾತ್ರ ಉದ್ಯೋಗ ಹಕ್ಕಿನ ಬಗ್ಗೆ ಒಂದೆರಡು ಉಪವಿಭಾಗಗಳಿವೆ; ಸ್ತ್ರೀವಾದಿ ಚಳುವಳಿಯ ಇತ್ಯಾತ್ಮಕ ಫಲಿತಾಂಶಗಳ ಬಗ್ಗೆ ಪ್ರಸ್ತಾಪವೇ ಇಲ್ಲ.

ಬೃಹತ್ ಹಣಕಾಸು ಸಂಸ್ಥೆಗಳ ಮೇಲುಗೈ ಇರುವ, ಆರ್ಥಿಕ ವ್ಯವಸ್ಥೆಗೆ ಅನುವಾಗಲಿರುವ ಈ ಸಂವಿಧಾನದಲ್ಲಿ ಅಡೆತಡೆಯಿಲ್ಲದ ಪೈಪೋಟಿ, ಮುಕ್ತ ಮಾರುಕಟ್ಟೆಗೆ ಹೆಚ್ಚು ಒತ್ತುಕೊಡಲಾಗಿದೆ. ಬಹಳ ಆತಂಕಕಾರಿ ವಿಷಯವೆಂದರೆ, ಸಶಸ್ತ್ರೀಕರಣಕ್ಕೆ ಎಡೆ ಮಾಡಿಕೊಡುವ ಕೆಲವು ಅಂಶಗಳು ಸಂವಿಧಾನದಲ್ಲಿವೆ. ಇದರಿಂದಾಗಿ, ಸದಸ್ಯ ರಾಷ್ಟ್ರಗಳು ಶಸ್ತ್ರಾಸ್ತ್ರ ಖರೀದಿಗೆ ತಮ್ಮ ಸಂಪನ್ಮೂಲಗಳನ್ನು ದುರ್ವ್ಯಯ ಮಾಡಬೇಕಾಗುತ್ತದೆ. ಜಾಗತಿಕ ನಿಶ್ಶಸ್ತ್ರೀಕರಣದ ಬಗ್ಗೆ ಚಕಾರವನ್ನೂ ಎತ್ತದ ಈ ದಸ್ತಾವೇಜಿನಲ್ಲಿ ಇಡೀ ಯೂರೋಪನ್ನೇ ಒಂದು ಬೃಹತ್ ರಕ್ಷಣಾವಲಯವನ್ನಾಗಿ ಮಾರ್ಪಡಿಸುವ ಹುನ್ನಾರವಿದೆ. ಇದೆಲ್ಲದರ ಹಿಂದೆ ನ್ಯಾಟೋ ಒಕ್ಕೂಟದ ಪ್ರಭಾವವಿರುವುದನ್ನು ತಳ್ಳಿಹಾಕುವಂತಿಲ್ಲ. 'ಸಮಾಜವಾದಿ ಯೂರೋಪ್' ಎಂಬ ಪರಿಕಲ್ಪನೆಯನ್ನು ಬುಡಮೇಲು ಮಾಡಿ ಆ ಖಂಡವನ್ನು ಒಂದು 'ಕಾರ್ಪೊರೇಟ್-ಮಿಲಿಟರಿ ಒಕ್ಕೂಟ'ವನ್ನಾಗಿ ಪರಿವರ್ತಿಸುವ ಪಿತೂರಿಯೂ ಅದರಲ್ಲಿದೆ.

ಆರ್ಥಿಕ ದೃಷ್ಟಿಯಿಂದ ನೋಡಿದರೆ, ಯೂರೋಪಿಯನ್ ಒಕ್ಕೂಟವು ವಿಶ್ವವ್ಯಾಪಾರ ಸಂಸ್ಥೆಯ 'ಮುಕ್ತ ವ್ಯಾಪಾರ' ಯೋಜನೆಯನ್ನು ಎಲ್ಲಿಲ್ಲದ ಹುರುಪಿನಿಂದ ಆಚರಣೆಗೆ ತರಲು ಹವಣಿಸುತ್ತಿರುವಂತಿದೆ. ಕೃಷಿಗೆ ಹೆಚ್ಚಿನ ಸಹಾಯಧನ ನೀಡಬೇಕೆನ್ನುವ ಸೂಚನೆಗಳು ಸಂವಿಧಾನದಲ್ಲಿವೆ. ಇದು ಮೂರನೇ ಜಗತ್ತಿನ ರಾಷ್ಟ್ರಗಳ ಹಿತಾಸಕ್ತಿಗಳಿಗೆ ವಿರೋಧವಾದುದು. ತನ್ನ ವಸಾಹತುಶಾಹಿ ಪರಂಪರೆಯನ್ನು ಇನ್ನೂ ಮುಂದುವರೆಸಿಕೊಂಡೇ ಹೋಗಲಿಚ್ಛಿಸುವ ಯೂರೋಪಿಯನ್ ಒಕ್ಕೂಟ, ಅಮೆರಿಕಾಗಿಂತಲೂ ಒಂದು ಹೆಜ್ಜೆ ಮುಂದೆ ಹೋಗಿ, ಪೂರ್ವ ಯೂರೋಪಿನ ರಾಷ್ಟ್ರಗಳನ್ನು ಕೇವಲ ಕಚ್ಚಾವಸ್ತು ಮತ್ತು ಅಗ್ಗದ ಕೂಲಿಯಾಳುಗಳನ್ನು ಒದಗಿಸುವ ವಲಯಗಳೆಂದು ಪರಿಗಣಿಸುತ್ತದೆ. ಆರ್ಥಿಕವಾಗಿ ಜಗತ್ತಿನ ಎರಡನೆಯ ಅತಿ ಪ್ರಬಲ ಶಕ್ತಿಯೆನಿಸಿರುವ ಯೂರೋಪಿಯನ್ ಒಕ್ಕೂಟವು ತನ್ನ ಮಿಲಿಟರಿ ಪ್ರಭಾವವನ್ನು ಹೆಚ್ಚಿಸಿಕೊಳ್ಳಲು ಹವಣಿಸುತ್ತಲೇ ಇದೆ. ಜಾಗತಿಕ ಹಿತದೃಷ್ಟಿಯಲ್ಲಿ ಮತ್ತು ಯೂರೋಪಿನ ಜನಸಮೂಹದ ದೃಷ್ಟಿಯಲ್ಲಿ ಇದು ಬಹಳ ಅಪಾಯಕಾರಿ.

ಈ ಹಿನ್ನೆಲೆಯಲ್ಲಿ ಫ್ರಾನ್ಸ್ ಮತ್ತು ನೆದರ್‌ಲ್ಯಾಂಡ್ಸ್ ಮತದಾರರು ಸಂವಿಧಾನಕ್ಕೆ ವಿರೋಧ ವ್ಯಕ್ತಪಡಿಸಿರುವುದು ಸ್ವಾಗತಾರ್ಹ. ಅದೇ ಸಂದರ್ಭದಲ್ಲಿ, ಆ ದೇಶಗಳ ಆಡಳಿತ ವರ್ಗಗಳು ಕೈಕಟ್ಟಿಕೂಡುತ್ತವೆ ಎಂದು ಭಾವಿಸುವುದು ತಪ್ಪಾಗುತ್ತದೆ. ಜಾಗತಿಕ ಆರ್ಥಿಕತೆ ಮತ್ತು ಅಮೆರಿಕಾದೊಂದಿಗಿನ ಭಿನ್ನಾಭಿಪ್ರಾಯಗಳು ತೀವ್ರಗೊಂಡು ಅಲ್ಲಿನ ಕಾರ್ಮಿಕವರ್ಗದ ಮೇಲಿನ ಆಕ್ರಮಣಕಾರಿ ನೀತಿಗಳು ಮತ್ತಷ್ಟು ಬಿಗಿಗೊಳ್ಳುವ ಸಾಧ್ಯತೆಯೂ ಇದೆ. ಒಂದು ಪ್ರಮುಖ ಅಂಶವೆಂದರೆ, ಅಲ್ಲಿನ ಪ್ರಗತಿಪರ ಶಕ್ತಿಗಳು, ಎಡಪಕ್ಷಗಳು ವಿವಿಧ ಬಣಗಳಾಗಿ, ಗುಂಪುಗಳಾಗಿ ಹರಿದು ಹಂಚಿಹೋಗಿರುವುದು. ಈಗಲಾದರೂ ಅವರೆಲ್ಲರೂ ಒಂದು ಸಮಾಜವಾದಿ ಜನಪರ ಕಾರ್ಯಕ್ರಮದಡಿ ಒಂದುಗೂಡಿ ಅಲ್ಲಿನ ಆಡಳಿತ ವರ್ಗಗಳ ನವವಸಾಹತು ನೀತಿಗಳನ್ನು ಹಿಮ್ಮೆಟ್ಟಿಸುವ ಸಂಘರ್ಷಕ್ಕೆ ಅಣಿಯಾಗಬೇಕಿದೆ.

ಇಂದಿನ ಜಾಗತಿಕ ಪರಿಸ್ಥಿತಿಯಲ್ಲಿ, ಜಾಗತೀಕರಣದ ಆರ್ಭಟದ ಸಂದರ್ಭದಲ್ಲಿ, ಸಾಮ್ರಾಜ್ಯಶಾಹಿ ಅಮೆರಿಕಾ ಆಕ್ರಮಣಕಾರಿ ನೀತಿಗಳನ್ನನುಸರಿಸಿ ಇಡೀ ಜಗತ್ತಿನಲ್ಲಿ ತನ್ನ ಯಾಜಮಾನ್ಯ ಸ್ಥಾಪಿಸಹೊರಟಿರುವ ಹಿನ್ನೆಲೆಯಲ್ಲಿ ರಾಷ್ಟ್ರಗಳು ತಮ್ಮ ಆರ್ಥಿಕ ಮತ್ತು ಸಾಮಾಜಿಕ ಹಿತರಕ್ಷಣೆಗಾಗಿ ಪ್ರಾದೇಶಿಕ ಒಕ್ಕೂಟಗಳನ್ನು ರಚಿಸಿಕೊಳ್ಳುವುದು ಒಂದು ಉತ್ತಮ ಕ್ರಮವೇ. ಆದರೆ, ಇಂದಿನ ಪರಿಸ್ಥಿತಿಯಲ್ಲಿ ವಸಾಹತುಶಾಹಿ ಹಿನ್ನೆಲೆಯುಳ್ಳ, ಬೃಹತ್ ಮಿಲಿಟರಿ ಶಕ್ತಿಗಳಾಗಿ ರೂಪುಗೊಳ್ಳಬೇಕೆಂಬ ಹಂಬಲವುಳ್ಳ ರಾಷ್ಟ್ರಗಳೇ ಹೆಚ್ಚಾಗಿ ಇರುವ ಯೂರೋಪಿಯನ್ ಒಕ್ಕೂಟ, ತನ್ನ ಎಲ್ಲ ಸದಸ್ಯ ರಾಷ್ಟ್ರಗಳ ಹಿತಾಸಕ್ತಿಗಳನ್ನು ರಕ್ಷಿಸಿ ಮುನ್ನಡೆಸುವ ಸಂವಿಧಾನವನ್ನು ರೂಪಿಸುವುದು ಸುಲಭಸಾಧ್ಯವಲ್ಲ. ಬೇರೆ ರಾಷ್ಟ್ರಗಳಲ್ಲಿ ಸಂವಿಧಾನದ ಅಂಗೀಕಾರದ ಬಗ್ಗೆ ನಡೆಯಬೇಕಾದ ಜನಮತ ಗಣನೆಯನ್ನು ಸದ್ಯಕ್ಕೆ ಮುಂದೂಡುವ ಪ್ರಸ್ತಾಪವಿದೆ. ಹಿಂದೇಟು ಜಾಸ್ತಿಯಾದೀತೆಂಬ ಭೀತಿಯ ಸೂಚನೆ ಇದು. ಅಮೆರಿಕಾಗೆ ಪರ್ಯಾಯ ಶಕ್ತಿಯಾಗಿ ರೂಪುಗೊಳ್ಳಬಹುದೆಂದು ನಿರೀಕ್ಷಿಸಲಾಗಿದ್ದ ಯೂರೋಪಿಯನ್ ಒಕ್ಕೂಟವು ಸದ್ಯಕ್ಕಂತೂ ಸ್ವಲ್ಪ ನಿತ್ರಾಣವಾಗಿದೆ.

ಎಸ್. ಸುರೇಂದ್ರ
ನಂ. ೨೪, ೧ನೇ ಅಡ್ಡರಸ್ತೆ, ಕೆನರಾ ಬ್ಯಾಂಕ್ ಕಾಲೋನಿ, ೩ನೇ ಬ್ಲಾಕ್
ಜಯನಗರ ಪೂರ್ವ, ಬೆಂಗಳೂರು - ೫೬೦ ೦೧೧

# ಪ್ರಾಥಮಿಕ ಶಿಕ್ಷಣ — ಇಂಗ್ಲಿಷ್ ಕಲಿಕೆ

ಮಾತೃಭಾಷೆಯಾಗಲಿ ಪರಭಾಷೆಯಾಗಲಿ ಅದು ಕೇವಲ ಒಂದು ಸಂಪರ್ಕ ಸಾಧನವಷ್ಟೆ. ಅಭಿವ್ಯಕ್ತಿ ಮಾಧ್ಯಮದ ಪ್ರಮುಖ ಅಂಶವಾಗಿರುವ ಭಾಷೆಗೆ ಯಾವುದೇ ಎಲ್ಲೆಗಳಿರುವುದಿಲ್ಲ. ಮಾತೃಭಾಷೆ ಅಥವಾ ರಾಷ್ಟ್ರೀಯ ಭಾಷೆಯ ಬಗೆಗಿನ ವ್ಯಾಮೋಹ ಅಥವಾ ಅಭಿಮಾನ ಭಾವೋದ್ರೇಕಕ್ಕೊಳಗಾಗದಿದ್ದಲ್ಲಿ, ಯಾವುದೇ ಭಾಷೆಯೂ ಪರಕೀಯವಾಗುವುದಿಲ್ಲ. ಆಂಗ್ಲಭಾಷೆಯ ವಿಸ್ತಾರ ಮತ್ತು ಅರಿವಿಗೆ ಇದೇ ಪ್ರಮುಖ ಕಾರಣವೆಂದು ಹೇಳಬಹುದು. ವಿಶ್ವದ ಎಲ್ಲಾ ಪ್ರಮುಖ ಭಾಷೆಗಳನ್ನು ನುಂಗಿಹಾಕುವುದರೊಂದಿಗೆ ಅನೇಕ ಭಾಷೆಗಳನ್ನು ತನ್ನೊಳಗೆ ಅಳವಡಿಸಿಕೊಂಡು ಬೆಳೆದಿರುವ ಆಂಗ್ಲಭಾಷೆ, ಜಾಗತೀಕರಣದ ಸನ್ನಿವೇಶದಲ್ಲಿ ತನ್ನದೇ ಆದ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ.

• ನಾ. ದಿವಾಕರ

ಪ್ರಾಥಮಿಕ ಹಂತದಿಂದಲೇ ಶಿಕ್ಷಣದಲ್ಲಿ ಆಂಗ್ಲಭಾಷೆಯನ್ನು ಕಲಿಸುವ ಕರ್ನಾಟಕ ಸರ್ಕಾರದ ನಿಲುವು, ರಾಜ್ಯಾದ್ಯಂತ ವಾದ-ವಿವಾದಗಳಿಗೆ ಎಡೆಮಾಡಿಕೊಟ್ಟಿದೆ. ಗ್ರಾಮೀಣ ಮಕ್ಕಳು ಹಾಗೂ ಸರ್ಕಾರಿ ಶಾಲೆಗಳಲ್ಲಿ ನಗರ-ಪಟ್ಟಣದ ಓದುವ ಮಕ್ಕಳು ಆಂಗ್ಲಭಾಷೆಯನ್ನು ಕಲಿಯಲು ಅವಕಾಶ ಮಾಡಿಕೊಡುವುದರಿಂದ ಅವರಿಗೆ ಉತ್ತಮ ಭವಿಷ್ಯ ರೂಪಿಸಿದಂತಾಗುತ್ತದೆ ಎಂದು ಶಿಕ್ಷಣ ಮಂತ್ರಿಗಳು ಅಭಿಪ್ರಾಯಪಟ್ಟಿದ್ದಾರೆ.

ಈ ಇಡೀ ವಿವಾದದಲ್ಲಿ ಮೂರು ಗುಂಪುಗಳನ್ನು ಗುರುತಿಸಬಹುದು : (೧) ನಾಮಫಲಕಗಳಲ್ಲಿ, ಜಾಹೀರಾತು ಫಲಕಗಳಲ್ಲಿ, ಬಾನೆತ್ತರದ ಧ್ವಜಸ್ತಂಭಗಳಲ್ಲಿ ಅಥವಾ ವೃತ್ತಗಳ ಹೆಸರುಗಳಲ್ಲಿ ಮಾತ್ರವೇ ಕನ್ನಡವನ್ನು ಗುರುತಿಸುವ, ಕನ್ನಡಕ್ಕಾಗಿ ಪ್ರಾಣವನ್ನೇ ತೆರುವ ಹುಟ್ಟುಹೋರಾಟಗಾರರು, ಅರ್ಥಾತ್ 'ಕನ್ನಡಪರ' ಸಂಘಟನೆಗಳು; (೨) ಆಧುನಿಕ ಶಿಕ್ಷಣ ನೀತಿ ಜಾರಿ ಇದ್ದಾಗ್ಯೂ, ಸಂವಿಧಾನರೀತ್ಯಾ ಶಿಕ್ಷಣದ ಹಕ್ಕು ಪಡೆದಿದ್ದಾಗ್ಯೂ, ಭಾರತೀಯ ಸಾಮಾಜಿಕ ವ್ಯವಸ್ಥೆಯ ಕಟ್ಟುಪಾಡುಗಳಿಗೆ ಒಳಗಾಗಿ, ಅವಕಾಶ ವಂಚಿತರಾಗಿ ಆಂಗ್ಲಭಾಷೆಯ ಅರಿವಿಲ್ಲದಿರುವುದರಿಂದಲೇ ಸಾಮಾಜಿಕವಾಗಿ, ಕೀಳರಿಮೆಯಿಂದ ಕಾಣಲ್ಪಟ್ಟ ಒಂದು ವರ್ಗ; ಮತ್ತು (೩) ಆಧುನಿಕ ಶಿಕ್ಷಣ ವ್ಯವಸ್ಥೆಯ ಎಲ್ಲಾ ಸವಲತ್ತುಗಳನ್ನು, ಉಪಯುಕ್ತತೆಗಳನ್ನು ಅನುಭವಿಸಿ, ಗ್ರಾಮೀಣ ಜನತೆಯನ್ನು, ಹಿಂದುಳಿದ ವರ್ಗಗಳನ್ನು ನಿರಂತರವಾಗಿ ಅಂಧಕಾರದಲ್ಲಿಡುವ ಹುನ್ನಾರ ನಡೆಸುವ ಯಥಾಸ್ಥಿತಿವಾದಿಗಳು.

ಸರ್ಕಾರದ ಉದ್ದೇಶವು ಎಷ್ಟೇ ಉತ್ತಮವಾಗಿದ್ದರೂ, ಪ್ರಾಥಮಿಕ ಹಂತದಿಂದಲೇ ಆಂಗ್ಲ ಭಾಷೆಯನ್ನು ಕಲಿಸುವ ವಿಷಯದಲ್ಲಿ ಸರ್ಕಾರ ಸಾಕಷ್ಟು ಎಚ್ಚರ ವಹಿಸಬೇಕಾಗುತ್ತದೆ. ಪ್ರಪ್ರಥಮವಾಗಿ ರಾಜ್ಯದಲ್ಲಿ ಪ್ರಾಥಮಿಕ ಶಿಕ್ಷಣದ ವ್ಯಾಪ್ತಿಯಲ್ಲಿ ಸುಧಾರಣೆ ಆಗಬೇಕಾಗಿದೆ. ಇತ್ತೀಚಿನ ಒಂದು ಸಂಶೋಧನಾ ವರದಿಯ ಪ್ರಕಾರ ಶೇಕಡ ೬೦ರಷ್ಟು ಶಾಲೆಗಳಲ್ಲಿ ಒಬ್ಬರೇ ಶಿಕ್ಷಕರಿದ್ದರೆ, ಶೇಕಡ ೬೫ರಷ್ಟು ಶಾಲೆಗಳಲ್ಲಿ ಕಪ್ಪು ಹಲಗೆಗಳಾಗಲಿ, ಶೌಚಾಲಯಗಳಾಗಲಿ, ಉತ್ತಮ ಕಟ್ಟಡಗಳಾಗಲಿ, ಇರುವುದಿಲ್ಲ. ಶೇಕಡ ೨೦ರಷ್ಟು ಶಾಲೆಗಳಲ್ಲಿ ಶಿಕ್ಷಕರ ಕೊರತೆ ಎದ್ದುಕಾಣುತ್ತದೆ. ಬಹುಪಾಲು ಶಾಲೆಗಳಲ್ಲಿ ಪ್ರಯೋಗಶಾಲೆಗಳಾಗಲಿ, ವಾಚನಾಲಯವಾಗಲಿ ಇರುವುದಿಲ್ಲ.

ಮಾತೃಭಾಷೆಯಾಗಲಿ ಪರಭಾಷೆಯಾಗಲಿ ಅದು ಕೇವಲ ಒಂದು ಸಂಪರ್ಕ ಸಾಧನವಷ್ಟೆ. ಅಭಿವ್ಯಕ್ತಿ ಮಾಧ್ಯಮದ ಪ್ರಮುಖ ಅಂಶವಾಗಿರುವ ಭಾಷೆಗೆ ಯಾವುದೇ ಎಲ್ಲೆಗಳಿರುವುದಿಲ್ಲ. ಮಾತೃಭಾಷೆ ಅಥವಾ ರಾಷ್ಟ್ರೀಯ ಭಾಷೆಯ ಬಗೆಗಿನ ವ್ಯಾಮೋಹ ಅಥವಾ ಅಭಿಮಾನ ಭಾವೋದ್ರೇಕಕ್ಕೊಳಗಾಗದಿದ್ದಲ್ಲಿ, ಯಾವುದೇ ಭಾಷೆಯೂ ಪರಕೀಯವಾಗುವುದಿಲ್ಲ. ಆಂಗ್ಲಭಾಷೆಯ ವಿಸ್ತಾರ ಮತ್ತು ಅರಿವಿಗೆ ಇದೇ ಪ್ರಮುಖ ಕಾರಣವೆಂದು ಹೇಳಬಹುದು. ವಿಶ್ವದ ಎಲ್ಲಾ ಪ್ರಮುಖ ಭಾಷೆಗಳನ್ನು ನುಂಗಿಹಾಕುವುದರೊಂದಿಗೆ ಅನೇಕ ಭಾಷೆಗಳನ್ನು ತನ್ನೊಳಗೆ ಅಳವಡಿಸಿಕೊಂಡು ಬೆಳೆದಿರುವ ಆಂಗ್ಲಭಾಷೆ, ಜಾಗತೀಕರಣದ ಸನ್ನಿವೇಶದಲ್ಲಿ ತನ್ನದೇ ಆದ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಆಂಗ್ಲಭಾಷೆಯ ಹೆಚ್ಚುಗಾರಿಕೆಯನ್ನು ಮುರಿಯುವ ಉದ್ದೇಶದಿಂದ ಅಲ್ಲವಾದರೂ, ಒಂದು ವಿಶ್ವಮಾನ್ಯ ಜಾಗತಿಕ ಸಂಪರ್ಕ ಭಾಷೆಯಾಗಿ ಆಂಗ್ಲಭಾಷೆ ಇಂದು ಅತ್ಯವಶ್ಯವಾಗಿದೆ. ಹಾಗಾಗಿ ಈ ಭಾಷೆಯನ್ನು ಪ್ರಾಥಮಿಕ ಹಂತದಿಂದಲೇ ಮಕ್ಕಳಿಗೆ ಕಲಿಸುವುದು ಅಗತ್ಯವಾಗಿದೆ.

ಭಾವನೆಗಳಿಗೆ ಬಲಿಯಾಗಿ ನಾವು ಚೀನಾ-ರಷ್ಯಾ-ಜಪಾನ್ ದೇಶಗಳೊಡನೆ ತುಲನೆ ಮಾಡುವುದು ಸಮಂಜಸವಾಗುವುದಿಲ್ಲ. ಆ ದೇಶಗಳಲ್ಲಿ ಈಗೀಗ ಆಂಗ್ಲ ಭಾಷೆ ನುಸುಳುತ್ತಿರುವುದಾದರೂ, ಭಾರತಕ್ಕೂ ಈ ದೇಶಗಳಿಗೂ ಬಹಳಷ್ಟು ಅಂತರವಿದೆ. ೨೬೦೦ಕ್ಕೂ ಹೆಚ್ಚು ಭಾಷೆಗಳನ್ನು ಹೊಂದಿರುವ ಭಾರತೀಯ ಸಮಾಜದ ನವ ಪೀಳಿಗೆಗೆ ಆಂಗ್ಲ ಭಾಷೆ ಸಂಪರ್ಕ ಸಾಧನವಾಗುವುದಾದರೆ ತವಕಪಡುವುದೇಕೆ ? ಪ್ರಾಥಮಿಕ ಹಂತದಿಂದ ಆಂಗ್ಲ ಭಾಷೆ ಕಲಿಸಿದರೆ ಕನ್ನಡಕ್ಕೆ ಕುತ್ತು ಬರುವುದೆಂಬ ಕನ್ನಡ ಸಂಘಟನೆಗಳ ಹೋರಾಟಗಾರರ ಅಭಿಪ್ರಾಯ ಹುರುಳಿಲ್ಲದ್ದು. ಸಂಸ್ಕೃತ-ಲ್ಯಾಟಿನ್-ಗ್ರೀಕ್-ಹಿಬ್ರೂಗಳಂತೆ ಕನ್ನಡ ಕೇವಲ ಒಂದು ಪ್ರಾದೇಶಿಕ ಅಥವಾ ಜನಾಂಗೀಯ ಭಾಷೆಯಾಗಿ ಉಳಿದಿಲ್ಲ. ಸಾವಿರಾರು ವರ್ಷಗಳ ಇತಿಹಾಸ ಇರುವ ಆರುಕೋಟಿ ಜನರ ಆಡುಭಾಷೆಯಾಗಿರುವ ಭಾಷೆ ಅಷ್ಟು ಸುಲಭವಾಗಿ ಅವನತಿ ಹೊಂದುವುದಿಲ್ಲ.

ಪ್ರಸ್ತುತ ಸನ್ನಿವೇಶವನ್ನೇ ಅವಲೋಕನ ಮಾಡಿದರೆ ಗ್ರಾಮೀಣ ಮತ್ತು ನಗರಗಳ ವಿದ್ಯಾರ್ಥಿಗಳಲ್ಲಿ ಖಾಸಗಿ ಶಾಲೆ-ಸರ್ಕಾರಿ ಶಾಲೆಗಳ ವಿದ್ಯಾರ್ಥಿಗಳಲ್ಲಿ ಅಪಾರವಾದ ಕಂದರ ಉಂಟಾಗಿದೆ. ಗ್ರಾಮೀಣ ಕ್ಷೇತ್ರಗಳಿಂದ ನಗರಗಳಿಗೆ ವಲಸೆ ಬರುವವರ ಸಂಖ್ಯೆ ಜಾಗತೀಕರಣದ ಪರಿಣಾಮವಾಗಿ ದಿನೇ ದಿನೇ ಹೆಚ್ಚಾಗುತ್ತಿದ್ದು, ಈ ರೀತಿ ವಲಸೆ ಬಂದ ಮಕ್ಕಳ ವಿದ್ಯಾಭ್ಯಾಸಕ್ಕೆ ಆಂಗ್ಲಭಾಷೆ ಒಂದು ತೊಡಕಾಗಿದೆ. ನಗರ ಹಾಗೂ ಪಟ್ಟಣಗಳಲ್ಲಿ ಖಾಸಗಿ ಶಾಲೆಗಳಲ್ಲಿ ಒಂದನೇ ತರಗತಿಯಿಂದಲೇ ಆಂಗ್ಲ ಭಾಷೆ ಕಲಿಸಲಾರಂಭಿಸಿದರೆ, ಸರ್ಕಾರಿ ಶಾಲೆಗಳಲ್ಲಿನ ಮಕ್ಕಳು ಐದನೆಯ ತರಗತಿಯಿಂದ ಕಲಿಯಲಾರಂಭಿಸುತ್ತಾರೆ. ಪ್ರೌಢಶಾಲೆ ಅಥವಾ ಕಾಲೇಜು ಹಂತಕ್ಕೆ ಬರುವಾಗ ಈ ಎರಡು ವರ್ಗಗಳ ನಡುವಿನ ಕಂದರ ಸ್ಪಷ್ಟವಾಗಿ ಅರಿವಾಗುತ್ತದೆ. ನಗರಗಳಲ್ಲಿ ಖಾಸಗಿ ಶಾಲೆಗೆ ಸೇರ ಬಯಸುವ ಮಕ್ಕಳಿಗೆ ಆಂಗ್ಲಭಾಷಾ ಜ್ಞಾನದ ಕೊರತೆಯೇ ಕಂಟಕಪ್ರಾಯವಾಗುತ್ತದೆ. ಜಾಗತೀಕರಣದ ಪ್ರಭಾವ ದಿಂದ ಸರ್ಕಾರ ಪ್ರಾಥಮಿಕ ಶಿಕ್ಷಣಕ್ಕೆ ಅಷ್ಟಾಗಿ ಗಮನ ನೀಡುತ್ತಿಲ್ಲವಾದ್ದರಿಂದ, ಅನೇಕ ಸರ್ಕಾರಿ ಶಾಲೆಗಳು ಮುಚ್ಚಿಹೋಗುತ್ತಿವೆ. ಸರ್ಕಾರಿ ಶಾಲೆಗಳಲ್ಲಿ ೭ನೆಯ ತರಗತಿ ಓದಿ, ಪ್ರೌಢಶಿಕ್ಷಣಕ್ಕೆ ಖಾಸಗಿ ಶಾಲೆಗೆ ಸೇರಬಯಸುವ ಮಕ್ಕಳಿಗೂ ಆಂಗ್ಲಭಾಷಾ ಜ್ಞಾನವೇ ಒಂದು ತೊಡಕಾಗುತ್ತದೆ. ಆಗ ಅನಿವಾರ್ಯವಾಗಿ ಮಕ್ಕಳು ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮುಂದುವರಿಸಬೇಕಾಗುತ್ತದೆ.

ಕನ್ನಡ ಮಾಧ್ಯಮದಲ್ಲಿ ಓದುವುದು ಅಪರಾಧವೇನೂ ಅಲ್ಲ. ಆದರೆ ಕೇಂದ್ರ ರಾಜ್ಯ ಸರ್ಕಾರಗಳ ನವ ಆರ್ಥಿಕ ನೀತಿಗಳ ಪರಿಣಾಮವಾಗಿ ವ್ಯಾಸಂಗ ಮುಗಿಸಿದ ವಿದ್ಯಾರ್ಥಿಗಳಿಗೆ ನೌಕರಿ ಒಂದು ಮರೀಚಿಕೆಯಾಗಿದೆ. ಇತ್ತೀಚಿನ ಒಂದು ಸಮೀಕ್ಷೆಯ ಪ್ರಕಾರ ಶೇಕಡ ೬೫ರಷ್ಟು ವಿದ್ಯಾರ್ಥಿಗಳು ಇಂದಿಗೂ ಸರ್ಕಾರಿ ನೌಕರಿಯನ್ನೇ ಬಯಸುತ್ತಾರೆ. ಆದರೆ ಸರ್ಕಾರಿ ನೌಕರಿ ಗಗನ ಕುಸುಮವಾಗಿದೆ. ಲಭ್ಯವಿರುವ ಖಾಸಗೀ ಕ್ಷೇತ್ರದ ನೌಕರಿಯಲ್ಲಿ ಗಣಕಯಂತ್ರ ಆಧಾರಿತ ನೌಕರಿಯೇ ಸಿಂಹಪಾಲು ಹೊಂದಿದೆ. ಬಿ.ಪಿ.ಓ.ಗಳಲ್ಲಿ, ಕಾಲ್

ಸೆಂಟರ್‌ಗಳಲ್ಲಿ, ಬಹುರಾಷ್ಟ್ರೀಯ ಕಂಪನಿಗಳಲ್ಲಿ, ಕನಿಷ್ಠ ಹೋಟೆಲ್‌ಗಳಲ್ಲೂ ಸಹ ನೌಕರಿಯ ಅರ್ಹತೆಯ ಪಟ್ಟಿಯಲ್ಲಿ ಆಂಗ್ಲಭಾಷಾ ಜ್ಞಾನ ಪ್ರಮುಖವಾಗಿರುತ್ತದೆ. ಹಾಗೆಂದ ಮಾತ್ರಕ್ಕೆ ಉತ್ತಮ ಆಂಗ್ಲಭಾಷಾ ವಾಗ್ಮಿಯಾಗಿರಬೇಕಾದ ಅವಶ್ಯಕತೆಯಿಲ್ಲ, ಅರೆ-ಬರೆ ಭಾಷೆಯಾದರೂ, ಇಂದು ಆಂಗ್ಲಭಾಷಾ ಜ್ಞಾನ ನೌಕರಿಯ ದೃಷ್ಟಿಯಿಂದ ಅಗತ್ಯವಾಗಿಬಿಟ್ಟಿದೆ. ಇನ್ನು ಮಧ್ಯಮ ಹಾಗೂ ಮೇಲ್ವರ್ಗದವರಿಗೆ, ಇಂಜನಿಯರಿಂಗ್, ವೈದ್ಯಕೀಯ ಓದುವವರಿಗೆ ಆಂಗ್ಲಭಾಷಾ ಜ್ಞಾನ ಅನಿವಾರ್ಯವಾಗಿರುತ್ತದೆ. ಸಂಪೂರ್ಣ ಕನ್ನಡ ಮಾಧ್ಯಮದಲ್ಲೇ ಓದಿದವರಿಗೆ ಪ್ರಾಥಮಿಕ ಹಂತದಿಂದಲೇ ಆಂಗ್ಲಭಾಷೆ ಕಲಿಸುವುದರಿಂದ ಭಾಷಾಪ್ರೌಢಿಮೆ ಬೆಳೆದಿರುತ್ತದೆ.

ಚಾರಿತ್ರಿಕ ದೃಷ್ಟಿಯಿಂದ ನೋಡಿದರೆ, ಹಿಂದಿನ ಕಾಲದಲ್ಲಿ ದಾರ್ಶನಿಕರು, ಬುದ್ಧಿಜೀವಿಗಳೆಲ್ಲಾ ಆಂಗ್ಲಭಾಷೆ ಓದಿದ್ದರೆ ಎಂದು ಕೇಳುವುದು ಅರ್ಥಹೀನವೆನಿಸುತ್ತದೆ. ಕಳೆದ ೪೦ ವರ್ಷಗಳಲ್ಲಿ ಮಾನವ ಸಮಾಜ ತೀವ್ರತರನಾದ ಬದಲಾವಣೆಗಳನ್ನು ಕಂಡಿದೆ. ಭಾರತೀಯ ಸಮಾಜದಲ್ಲಿ ಅನೇಕ ಪರಿವರ್ತನೆಗಳು ಉಂಟಾಗಿವೆ. ಸಾಮಾಜಿಕ ವ್ಯವಸ್ಥೆಯಲ್ಲಿ ಭಾರಿ ಮಾರ್ಪಾಟಾಗಿದೆ. ೭೦ರ ದಶಕದಲ್ಲಿ ಲಭ್ಯವಿದ್ದ ಅವಕಾಶಗಳು ಇಂದು ಕಂಡುಬರುವುದಿಲ್ಲ. ಹಾಗೆಯೇ ಪ್ರಸ್ತುತ ಸನ್ನಿವೇಶದಲ್ಲಿ ಕೆಲವು ಕ್ಷೇತ್ರಗಳಲ್ಲಿ ಲಭ್ಯವಿರುವ ಅವಕಾಶಗಳು ೭೦ರ ದಶಕದಲ್ಲಿ ಊಹಿಸಲೂ ಅಸಾಧ್ಯವಾಗಿತ್ತು. ಜಾಗತೀಕರಣ-ಉದಾರೀಕರಣ-ಖಾಸಗೀಕರಣದ ವಿರುದ್ಧ ಹೋರಾಡುತ್ತಲೇ, ಸಮಾಜವಾದ ಸಮತಾವಾದದ ಪುನರ್‌ಸ್ಥಾಪನೆಗಾಗಿ ಹೋರಾಟ ನಡೆಸುತ್ತಲೇ, ಸಾಮಾಜಿಕ ವ್ಯವಸ್ಥೆಯಲ್ಲಿ ಆಯಾ ಕಾಲಘಟ್ಟದಲ್ಲಿ ತಲೆದೋರುವ ಅಸಮಾನತೆಗಳನ್ನು ತೊಡೆದುಹಾಕುವುದು ಪ್ರಜ್ಞಾವಂತ ನಾಗರಿಕ ಸಮಾಜದ ಕರ್ತವ್ಯವಾಗಿದೆ. ೨೧ನೆಯ ಶತಮಾನದ ಆರಂಭದಲ್ಲಿ ಮಾನವ ಮತ್ತು ಯಂತ್ರಗಳ ನಡುವೆ ಉಂಟಾಗಿದ್ದ ಘರ್ಷಣೆ ಇಂದು ವಿಭಿನ್ನ ಸ್ವರೂಪ ಪಡೆದಿದೆ. ಒಂದೆಡೆ ಸಾಮ್ರಾಜ್ಯಶಾಹಿ ಜಾಗತೀಕರಣವನ್ನು ವಿರೋಧಿಸುತ್ತಲೇ ಇನ್ನೊಂದೆಡೆ ಇಡೀ ಜಗತ್ತನ್ನು ಒಂದು ಗ್ರಾಮವನ್ನಾಗಿಸುವ ಸಂಪರ್ಕ ಕ್ರಾಂತಿಯ ಉಪಯೋಗ ಪಡೆಯಬೇಕಾಗಿದೆ. ಇಲ್ಲಿ ಆಂಗ್ಲಭಾಷೆ ಹೆಚ್ಚು ಪ್ರಸ್ತುತ ಎನಿಸಿದೆ.

ಬಂಡವಾಳಶಾಹಿ-ಸಾಮ್ರಾಜ್ಯಶಾಹಿಯ ಬೆಳವಣಿಗೆಯು ಉನ್ನತಾವಸ್ಥೆಯಲ್ಲಿರುವ ಈ ಸಂದರ್ಭದಲ್ಲಿ ಆಳುವ ವರ್ಗಗಳು, ಪಟ್ಟಭದ್ರ ಹಿತಾಸಕ್ತಿಗಳು, ಪ್ರಬಲ ವರ್ಗಗಳು ಸಮಾಜದಲ್ಲಿ ಅಸಮಾನತೆಯನ್ನು ಹೆಚ್ಚಿಸಲು ಎಲ್ಲಾ ರೀತಿಯ ಪ್ರಯತ್ನಗಳನ್ನು ಮಾಡುತ್ತವೆ. ಧರ್ಮ-ಭಾಷೆ-ಜಾತಿ-ರಾಜಕೀಯ-ಪ್ರಾದೇಶಿಕತೆ-ಜನಾಂಗೀಯತೆ ಮುಂತಾದವುಗಳು ಆಳುವ ವರ್ಗಗಳಿಗೆ ಪ್ರಮುಖ ಸಾಧನಗಳಾಗಿಬಿಡುತ್ತವೆ. ಈ ಎಲ್ಲಾ ಸಾಧ್ಯತೆಗಳ ವಿರುದ್ಧ ಬ್ರಹ್ಮಾಸ್ತ್ರವಾಗಿ ಭಾಷೆ ಕೆಲಸ ನಿರ್ವಹಿಸುತ್ತದೆ. ಏಕೆಂದರೆ, ಸಂಪರ್ಕ ಕ್ರಾಂತಿಯ ಆಧುನಿಕ ಯುಗದಲ್ಲಿ ಭಾಷಾಜ್ಞಾನ ಜಾಗತಿಕ ಮಟ್ಟದಲ್ಲಿ ಜನರನ್ನು ಒಂದುಗೂಡಿಸುತ್ತದೆ.

ಹಾಗೆಂದಮಾತ್ರಕ್ಕೆ ಪ್ರಾಥಮಿಕ ಹಂತದಿಂದ ಆಂಗ್ಲಭಾಷೆ ಕಲಿಸುವುದರಿಂದ ಎಲ್ಲ ವಿದ್ಯಾರ್ಥಿಗಳೂ ಆಂಗ್ಲಭಾಷಾ ಪ್ರವೀಣರಾಗುತ್ತಾರೆಂದು ಅರ್ಥವಲ್ಲ. ಭಾಷಾಜ್ಞಾನಕ್ಕೂ ಭಾಷಾ ಪಾಂಡಿತ್ಯಕ್ಕೂ ಅಪಾರ ವ್ಯತ್ಯಾಸವಿದೆ. ಕೇವಲ ಅಂಕಗಳಿಕೆಯ ದೃಷ್ಟಿಯಿಂದ ಭಾಷಾ ಅಧ್ಯಯನ ಮಾಡಿದಲ್ಲಿ ಅದು ನಿಷ್ಪ್ರಯೋಜಕ. ರಾಜ್ಯ ಸರ್ಕಾರದ ಈಗಿನ ತೀರ್ಮಾನದಿಂದ ಈ ಅಪಾಯವೂ ಸಂಭವಿಸಬಹುದು. ಆಂಗ್ಲಭಾಷೆಯನ್ನು ಒಂದು ಪಠ್ಯ ವಿಷಯವನ್ನಾಗಿ ಮಾಡಿದ ಕೂಡಲೇ ಎಲ್ಲಾ ವಿದ್ಯಾರ್ಥಿಗಳೂ ಆಂಗ್ಲಭಾಷಾ ಪ್ರವೀಣರಾಗುವುದಿಲ್ಲ. ಹಾಗೆ ನೋಡಿದರೆ ಆಂಗ್ಲ ಮಾಧ್ಯಮದ ಶಾಲೆಗಳು ಬೀದಿಗೊಂದು ಇದ್ದರೂ ನಮ್ಮ ಜನರ ಆಂಗ್ಲಭಾಷಾ ಜ್ಞಾನವನ್ನು ಭಾರತೀಯ ಇಂಗ್ಲಿಷ್, ಹಿಂಗ್ಲಿಷ್, ಕಂಗ್ಲಿಷ್, ಎಂದೇ ಗುರುತಿಸಲಾಗಿದೆ. ಏಕೆಂದರೆ, ಆಂಗ್ಲ ಮಾಧ್ಯಮದ ಶಾಲೆಗಳಲ್ಲಿ ಪಾಠ ಮಾಡುವ ಶಿಕ್ಷಕ-ಶಿಕ್ಷಕಿಯರಿಗೆ ಆಂಗ್ಲಭಾಷಾ ಪ್ರಾವೀಣ್ಯತೆ ಇರುವುದಿಲ್ಲ. ಇದೇ ಪರಿಸ್ಥಿತಿ ಸರ್ಕಾರಿ ಶಾಲೆಗಳಲ್ಲೂ ಇದೆ.

ಹಾಗಾಗಿ ರಾಜ್ಯ ಸರ್ಕಾರವು ತನ್ನ ನಿರ್ಧಾರವನ್ನು ಅನುಷ್ಠಾನಗೊಳಿಸುವ ಮುನ್ನ ಆಂಗ್ಲಭಾಷಾ ಶಿಕ್ಷಕರಿಗೆ ಉತ್ತಮ ಗುಣಮಟ್ಟದ ತರಬೇತಿ ನೀಡಬೇಕಾಗುತ್ತದೆ. ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಟಿ.ಸಿ.ಎಚ್. ಹಂತದಲ್ಲಿ ಆಂಗ್ಲಭಾಷೆಯನ್ನು ಅಧ್ಯಯನ ಮಾಡಿಸುವುದು ಅವಶ್ಯವಾಗುತ್ತದೆ. ಶೈಕ್ಷಣಿಕ ಸುಧಾರಣೆಗಳಲ್ಲಿ ಇದು ಮುಖ್ಯ ಅಂಶವಾಗಿದೆ. ಇಲ್ಲವಾದಲ್ಲಿ ಗ್ರಾಮೀಣ ಮಕ್ಕಳು ಹಾಗೂ ಸರ್ಕಾರಿ ಶಾಲೆಗಳ ಮಕ್ಕಳು ಅತ್ತ ಕನ್ನಡವನ್ನೂ ಕಲಿಯದೆ, ಇತ್ತ ಆಂಗ್ಲಭಾಷೆಯನ್ನೂ ಸರಿಯಾಗಿ ಕಲಿಯದೆ ಎಡಬಿಡಂಗಿಗಳಾಗಿಬಿಡುವ ಸಾಧ್ಯತೆಗಳಿವೆ. ನೌಕರಿಗಾಗಿ ಉಪವಾಸ ಸತ್ಯಾಗ್ರಹ ಮಾಡಿ ಆಸ್ಪತ್ರೆ ಸೇರುತ್ತಿರುವ ಸಾವಿರಾರು ನಿರುದ್ಯೋಗಿ ಶಿಕ್ಷಕರನ್ನು ಈ ನಿಟ್ಟಿನಲ್ಲಿ ಸರ್ಕಾರ ನೇಮಕ ಮಾಡಬಹುದು. ಯಾವುದೇ ಭಾಷೆಯ ಕಲಿಕೆ-ಕಲಿಸುವಿಕೆಯಲ್ಲಿ ಆ ಭಾಷೆಯ ಸೌಂದರ್ಯತತ್ವಕ್ಕೆ ಚ್ಯುತಿ ಬಾರದಂತೆ ಎಚ್ಚರವಹಿಸುವುದು ಅಗತ್ಯ. ಕರ್ನಾಟಕ ರಾಜ್ಯ ಸರ್ಕಾರ ಈ ದೃಷ್ಟಿಕೋನದಿಂದ ತನ್ನ ನಿರ್ಧಾರವನ್ನು ಅನುಷ್ಠಾನಗೊಳಿಸುವಲ್ಲಿ ಮುಂದಿನ ಪೀಳಿಗೆಯವರಿಗೆ ನೆರವಾಗುತ್ತದೆ.

ನಾ. ದಿವಾಕರ
ನಂ. ೫೧೪, ೧೩ನೇ ಕ್ರಾಸ್, ಶ್ರೀರಾಂಪುರ ೨ನೇ ಹಂತ, ಮೈಸೂರು - ೫೭೦ ೦೨೩

## ಕವಿತೆ ಕಾಣೆಯಾಗಿದೆ



ಕಾಣೆಯಾಗಿದೆ
ವಜ್ರ, ವೈಢೂರ್ಯ,
ಕಾರು, ಸೂಟಕೇಸು,
ಬುಕ್ಕು, ಪೆನ್ನು ಯಾವುದೂ ಅಲ್ಲ
ಕಾಣೆಯಾಗಿದೆ ; ನನ್ನಂತರಂಗದ ಒರತೆ
ಶಬ್ದತೀರದ ಕವಿತೆ !

ಸಿಗಬಹುದು ನಿಮ್ಗೆ ಮಾರ್ಕೆಟ್ಟಿನಲ್ಲಿ,
ಮೊಬೈಲ್, ಕಂಪ್ಯೂಟರ್‌ನಲ್ಲಿ,
ಗೆಳೆಯರ ಗಣ ಗುಂಪಿನಲ್ಲಿ,
ಸಿನೇಮಾ, ಪಾರ್ಕಿನಲ್ಲಿ,
ಮ್ಯಾಥ್ಸ್, ಸೈನ್ಸ್ ಬುಕ್ಕಿನಲ್ಲಿ
ಅಥವಾ ಗೆಳತಿಯ ಗುಂಗಿನಲ್ಲಿ !

ದಯವಿಟ್ಟು ಹುಡುಕಿ ಕೊಡಿ
ಸಿಕ್ಕವರಿಗೆ ಬಹುಮಾನವೂ ಇದೆ.
ಹಣ, ಕಾರು ಕೊಡೋದಿಲ್ಲ -
ಮಾಡಿ ನಮ್ಗೆ ಮಾಫಿ.
ಒಂದು ಕವನದ ಪುಸ್ತಕ,
ಎರಡು ಬಿಸ್ಕೀಟು, ಒಂದು ಕಾಫಿ !!

ಮರ್ಗೀಬ ಅಲಂ ಮೋಮಿನ
ಗುರುವಾರ ಪೇಟ
ಚನ್ನಮ್ಮನ ಕಿತ್ತೂರು
ಬೆಳಗಾವಿ ಜಿಲ್ಲೆ

# ಗಾದೆಗಳಲ್ಲಿ ಗಮ್ಮತ್ತು

**ಬಂಡಿಗನವಿಲೆ ಭಗವಾನ್**

ಗಾದೆಗಳಿಲ್ಲದ ಭಾಷೆಯೇ ಇಲ್ಲ. ವೇದ ಸುಳ್ಳಾದರೂ ಗಾದೆ ಸುಳ್ಳಾಗದೆಂಬ ಮಾತುಂಟು. ಸ್ವಾನುಭವ, ಮೊನಚು, ಸಂಕ್ಷಿಪ್ತತೆ, ಸಾರಯುಕ್ತತೆ, ರೀತಿ ನೀತಿಯ ಪರೋಕ್ಷ ನಿರೂಪಣೆ, ನವಿರು ವಿನೋದ – ಇವೆಲ್ಲವನ್ನೂ ಗಾದೆ ತನ್ನಲ್ಲಿ 'ಗರ್ಭೀಕರಿಸಿ' ಕೊಂಡಿರುತ್ತದೆ. ಗಾದೆಗಳು ವ್ಯಕ್ತಿಯಿಂದ ವ್ಯಕ್ತಿಗೆ, ಪೀಳಿಗೆಯಿಂದ ಪೀಳಿಗೆಗೆ ಹರಿದುಬರುವ ಜಾಣ್ನುಡಿಗಳು. ಗಾದೆ ಮುಟ್ಟದ ಬದುಕಿನ ಭಾಗವೇ ಇಲ್ಲ. ಅದು ನಮ್ಮನ್ನು ಕೈಹಿಡಿದು ಮೇಲೆತ್ತುವ ಹಿತವಾದ ಆಡಕ ಮಾತು. ಸುಲಭವಾಗಿ ನೆನಪಿನ ಬುತ್ತಿಯಲ್ಲಿ ಭದ್ರವಾಗಿ ಇರಿಸಿಕೊಳ್ಳಬಹುದಾದಷ್ಟು ಪ್ರಾಸಬದ್ಧತೆ ಅದರ ವೈಶಿಷ್ಟ್ಯ. ಗಾದೆಗಳಲ್ಲಿ ಮೊಗೆದಷ್ಟೂ ಹಾಸ್ಯ, ವಿಡಂಬನೆ, ವ್ಯಂಗ್ಯ, ವಿಮರ್ಶೆ. ಒಂದಷ್ಟನ್ನು ಅವಲೋಕಿಸೋಣ.

ಗ್ರಾಮವೊಂದರಲ್ಲಿ ಒಂದು ತುಂಬಿದ ಮನೆಗೆ ನೆಂಟರು ಬಂದಿದ್ದರು. ಮನೆಯೊಡತಿ ಅವರೊಂದಿಗೆ ಉಭಯಕುಶಲೋಪರಿ ನಡೆಸುತ್ತಿದ್ದಳು. ಆಗತಾನೆ ಆಕೆಯ ಹಿರಿಸೊಸೆ ಹಿತ್ತಿಲಬಾಗಿಲ ಮೂಲಕ ಹೊಲದಿಂದ ಬಂದಳು. ಸಹಜವಾಗಿಯೆ ಅತ್ತೆ ತನ್ನ ಸೊಸೆಗೆ ಮನೆಯ ವೈಭವ ಹೇಳು ಅನ್ನುತ್ತಾಳೆ. ಆಗ ಸೊಸೆ ಪ್ರತಿಕ್ರಿಯಿಸಿದ್ದಾದರೂ ಹೇಗೆ ?

*'ಇಡಗರ ಹೇಳೆ ಹಿರೇಸೊಸೆ ಅಂದ್ರೆ*
*ಹುಲ್ಲು ಮಾರಿದ ದುಡ್ಡು ಎಲ್ಲಿಕ್ಕಲತ್ತೆ ?'*

ಮನೆಯ ಇಡಗರ (ಶ್ರೀಮಂತಿಕೆ) ಬಣ್ಣಿಸು ಎನ್ನುತ್ತಿದ್ದಂತೆ ಸೊಸೆ ಹುಲ್ಲು ಮಾರಿ ಬಂದ ಹಣವನ್ನು ಎಲ್ಲಿಡಲಿ ಎಂದು ಕೇಳುತ್ತಾಳೆ! ನಿಜಕ್ಕೂ ಎಂತಹ ಎಡವಟ್ಟಲ್ಲವೆ ಇದು ?! ಅತ್ತೆಗೆ ಆದ ಪೇಚು ಎಷ್ಟೆಂದು ನೀವೇ ಊಹಿಸಿರಿ. ಇಂತಹದ್ದೇ ಇನ್ನೊಂದು ಸಂದರ್ಭ.

*'ಬೀಗಿತಿ ಮನೆಮನೆಗೋಗವ್ಳೆ ಚಾಪೆಗೆ*
*ನಮಗ್ಹೇಳಿದ್ರೆ ನಾವೇ ತರುತಿದ್ವೊ'*

ಪ್ರಸಂಗ ಸ್ಪಷ್ಟವಾಗಿಯೆ ಇದೆ. ಗಂಡಿನ ಕಡೆಯವರು ಮನೆಗೆ ಬಂದಿದ್ದಾರೆ. ಆತಿಥೇಯ ಹೆಣ್ಣಿನ ಕಡೆಯವರಿಗೋ ಸಡಗರ. ಬೀಗರು ಬಂದಿದ್ದಾರೆ, ಚೆನ್ನಾಗಿ ಉಪಚರಿಸಿ ಆದರಿಸ ಬೇಕೆಂಬ ಆಸೆ ಅವರಿಗೆ. ಹೆಣ್ಣಿನ ತಾಯಿ (ಬೀಗಿತಿ) ಚಾಪೆ ಹೊಂದಿಸಲು ಕಂಡವರ ಮನೆ ಮನೆಗೆ ಹೋಗುತ್ತಾಳೆ! ಈ ಪರದಾಟ ಕಂಡು ಬಂದವರು ಎಷ್ಟು ಬೇಸರಗೊಂಡಿರ ಬಹುದು ? ಅವರ ಮಾರ್ಮಿಕ ಮಾತಿದು. ನಿಜಕ್ಕೂ ಇದರಲ್ಲಿ ಎಷ್ಟೊಂದು ಗಂಭೀರತಮ ವಿನೋದ ಅಂತರ್ಗತವಾಗಿದೆ ಅಲ್ಲವೆ? ಇಬ್ಬರು ದಡ್ಡರು ಒಂದೆಡೆ ಕಲೆತರೆ ಯಾವುದಾದರೊಂದು ತೀರ್ಮಾನಕ್ಕೆ ಬಂದಾರು. ಅದೇ ಒಬ್ಬ ದಡ್ಡ, ಒಬ್ಬ ಜಾಣ ಕಲೆತರೆ ಎರಡು ದಾರಿ. ಇಬ್ಬರೂ ಜಾಣರಾಗಿಬಿಟ್ಟರೆ ಅಲ್ಲಿ ತಬ್ಬಿಬ್ಬಂತೆ. ಈ ಗಾದೆ ನೋಡಿ. ಇದನ್ನು ಸಕಾರಾತ್ಮಕವಾಗಿಯೂ ಪರಿಗಣಿಸಬಹುದೆನ್ನಿ.

*'ದಡ್ಡ ದಡ್ಡರಿಗೆ ಒಂದೇ ದಾರಿ*
*ದಡ್ಡ ಜಾಣರಿಗೆ ಎರಡು ದಾರಿ*
*ಜಾಣ ಜಾಣರಿಗೆ ಮೂರು ದಾರಿ'*

ಮನುಷ್ಯ ಸ್ವಭಾವವನ್ನು ಪರಿಣಾಮಕಾರಿಯಾಗಿ ಚಿತ್ರಿಸುವ ಗುಣ ಗಾದೆಗೆ. ನೇರವಾಗಿ ಹೊಲಕ್ಕೆ ಹೋಗಿ ಇಂಥ ಸೊಪ್ಪು, ತರಕಾರಿ ಕೊಡು ಎಂದು ಕೇಳಿದರೆ, ಇಲ್ಲ ಮನೆಗೆ ಬಂದರೆ ಕೊಡುವೆ ಎನ್ನುವವರು ಅಪರೂಪ ವೇನಲ್ಲ! ಆ ಸಂಬಂಧ ಒಂದು ಗಾದೆ.

*'ಹೊಲದಲ್ಲಿ ಅಣ್ಣೆಸೊಪ್ಪು ಕೊಡದೋನು*
*ಮನೇಲಿ ರಾಗಿ ಕೊಟ್ಟಾನ ?'*

ಅದೇ ಹೊಲದಲ್ಲಿ ಅದು ಇದು ಹರಟುತ್ತಲೆ ಕಾಯಿ, ಹಣ್ಣು ವಗೈರೆ ಕೀಳುವ ಜಾಣರಿರುತ್ತಾರೆ. ಊರಿನ ಗೌಡ ಹೊಲದ ಒಡೆಯನೊಂದಿಗೆ ಮಾತಾಡುತ್ತಲೇ ಅವರೆಕಾಯಿ ಕಿತ್ತ ಎಂಬ ನುಡಿ ವಿಶೇಷವಾಗಿ ಹಳ್ಳಿಗಾಡಿನಲ್ಲಿ ಪ್ರಚಲಿತವಿದೆ. ಗಾದೆಗಳಲ್ಲಿ ಉದ್ದನೆಯ ಸಾಲುಗಳೂ ಕಂಡುಬರುತ್ತವೆ. ಏನು ಸಾರು ಮಾಡಿದೆ ಇವೊತ್ತು ಅಂತ ಕೇಳಿದಾಗ ಬಂದ ಉತ್ತರ ನಗೆ ತರಿಸುತ್ತದೆ.

*'ಸಾರೇನೇ ಮಿಣಿಕಿ ಅಂದ್ರೆ*
*ಹುಳ್ಳಿ ಉದುರಿಸಿ, ಬ್ಯಾಳೆ ಬೆದರಿಸಿ*
*ತಪ್ಪರು ತಡಕಿ ಹಾಕಿ, ಸೊಪ್ಪು ಹುಡುಕಿ ಹಾಕಿ*
*ಹಾಗಲಕಾಯಿ ಹೆಚ್ಚಿ ಹಾಕಿ, ಕುಂಬಳಕಾಯಿ ಹೊಡೆದು ಹಾಕಿ*
*ನೆಲ್ಲವರೆಕಾಯಿ ಮೆಲ್ಲಗೆ ಹಾಕಿ, ಈರೇಕಾಯಿ ಹಿಡಿದು ಹಾಕಿ*
*ಸೋರೆಕಾಯಿ ಜಡಿದು ಹಾಕಿ, ಹಸಿಕಾಳೆಸರು ಮಾಡಿ*
*ಬಿಸಿಮುದ್ದೆ ಮಾಡಿದ್ದೆ ಅಂದ್ಲಂತೆ'*

ಇಷ್ಟೊಂದು ಸಮೃದ್ಧವಾಗಿ ಸಾರನ್ನು ಆಕೆ ತಯಾರಿಸಿದ್ದಳೋ ಇಲ್ಲವೋ ಅದು ಬೇರೆ ಪ್ರಶ್ನೆ. ಆದರೆ ಸಾರಿಗೆ ಬಳಸಲು ಎಂತೆಂತಹ ಕಾಯಿಪಲ್ಯೆಗಳು ಎನ್ನುವುದನ್ನು ಗಾದೆಯಂತೂ ಸೊಗಸಾಗಿ ಬಣ್ಣಿಸಿ ಬಾಯಿಯಲ್ಲಿ ಯಾರಿಗಾದರೂ ನೀರೂರಿಸುತ್ತದೆ ತಾನೆ! ಮನೆಯ ಆದಾಯ, ವೆಚ್ಚವನ್ನು ವಿವೇಕದಿಂದ ನಿಭಾಯಿಸಬೇಕು. ಅದುಬಿಟ್ಟು ಇದ್ದಾಗ ವೈಭವದ ಅಡಿಗೆ, ಊಟ, ಉಡುಗೊರೆಗಳಿಗೆ ಗೊತ್ತುಗುರಿ ಇಲ್ಲದೆ ದುಬಾರಿಯಾಗಿ ವ್ಯಯಿಸುವುದು, ಕೈ ಬರಿದಾದಾಗ ಪರದಾಡುವುದು ಸಲ್ಲದು. ಅಗೋ ಅದಕ್ಕೊಂದು ವಿವೇಕಯುತ ಗಾದೆ : 'ಇದ್ದಾಗ ಹಿರಿಹಬ್ಬ, ಇಲ್ದಾಗ ತಿರಿಹಬ್ಬ'. ಇಲ್ಲೊಬ್ಬ ಗರತಿ ತನ್ನ ಪತಿರಾಯನ ಶೌರ್ಯವನ್ನು ಗೇಲಿಮಾಡುವ ಪರಿ ಸ್ವಾರಸ್ಯಕರವಾಗಿದೆ. ಯಾರಾದರೂ ಬಾಳೆಗಿಡದ ಬುಡವನ್ನು ಸುಲಭವಾಗಿ ಕಡಿದುಹಾಕಬಹುದು. 'ಬಾಳೆ ಕಡಿಯಾಕೆ ನನ್ನ ಗಂಡ ಗೂಳಿ' ಎನ್ನಬೇಕೆ ಆ ಮಾರಾಯ್ತಿ? ಕತ್ತೆಯ ಮೇಲೆ ಸವಾರಿ ಮಾಡೋದು ಎಷ್ಟೊಂದು ಆತಂಕ ಅಲ್ಲವೆ ? 'ಕುದುರೆ ಕೈಲಿ ಒದೆಸಿಕೊಂಡ್ರೂ ಕತ್ತೆ ಸವಾರಿ ತರವಲ್ಲ' ಎನ್ನುವ ಗಾದೆಯ ಹಿಂದಿನ ವ್ಯಂಗ್ಯವನ್ನು ಗಮನಿಸಿ. 'ನನ್ನ ಸಿರಿ ನಮ್ಮತ್ತೆ ಸಂತೆಯಿಂದ ಬರೋತನಕ', 'ಕಳ್ಳರು ಬಿದ್ದ ಆರು ತಿಂಗಳಿಗೆ ನಾಯಿ ಬೊಗಳಿದ್ಹಂಗೆ', 'ಕಳವಾದ ಮೇಲೆ ಕಾವಲಿಕ್ಕಿದ್ಹಂಗೆ', 'ಸಾಲಗಾರ ಸುಮ್ಮನಿದ್ರೂ ಸಾಕ್ಷಿಗಾರ ಸುಮ್ಮನಿರ' ಮುಂತಾದ ಗಾದೆಗಳು ನಗೆ ಚಿಮ್ಮುವುದರೊಂದಿಗೆ ಬದುಕಿನ ಇಬ್ಬಂದಿತನವನ್ನು ತೆರೆದಿಡುತ್ತವೆ. ಆಕೆ ತೊಟ್ಟಿಲುಗಳನ್ನು ಮಾರಿ ಹೊಟ್ಟೆ ಹೊರಿಯುವವಳು. ಹಳ್ಳಿಯ ಬೀದಿಗಳಲ್ಲಿ ಮಾರುತ್ತಾ ಅವಳು ಸಾಗಿದಾಗ ಅವಳ ಮನಸ್ಸಿನಲ್ಲಿ ಮೂಡುವ ಭ್ರಮೆ ಏನು ಗೊತ್ತೆ? 'ತೊಟ್ಟಿಲು ಮಾರುವವಳಿಗೆ ಊರ್‍ನ ಹೆಂಗಸ್ರೆಲ್ಲ ಗರ್ಭಿಣಿಯರೆ' ಎನ್ನುವ ಆಡುಮಾತಿದೆ !

ಕೆಲವು ಗಾದೆಗಳಲ್ಲಿನ ಪ್ರಾಸ ಮೋಹಕವಾಗಿರುತ್ತದೆ. ಮತ್ತೆ ಮತ್ತೆ ಅವನ್ನು ಬಂಧುಮಿತ್ರರೊಂದಿಗೆ ಹಂಚಿಕೊಳ್ಳಬೇಕೆನಿಸುತ್ತದೆ.

*'ಬೆನ್ನು ನೋಯ್ತದೆ ಗುದ್ದಿಗೆ, ಕಣ್ಣು ತೂಕಡಿಸ್ತದೆ ನಿದ್ದೆಗೆ'*
*'ಮಕ್ಕಳ ನೆವದಲ್ಲಿ ನಿದ್ದೆ, ಗಂಡನ ನೆವದಲ್ಲಿ ಊಟ'*
*'ನಾನೆದ್ದು ಬಗುಳೋಕೆ ನಾಯಾಕೆ ಸಾಕಬೇಕು ?'*
*'ಗೋರಿಕಾಯಿ ತಾಳ್ದ ಮಾಡಿ, ಗೋಲಿಗಾತ್ರ ಮುದ್ದೆ ಮಾಡಿ*
*ಗೋಣಾಡ್ಕೊಂಡು ಇಕ್ಕಿದ್ಲು ಗೂಳೂರೋಳು'*

ಗೂಳೂರು ತುಮಕೂರಿಗೆ ಹತ್ತಿರವಿರುವ ಒಂದೂರು. ಅಲ್ಲಿ ವಿಭೂತಿ ಗಟ್ಟಿಗೆಗಳನ್ನು ತಯಾರಿಸುತ್ತಿದ್ದರೆನ್ನಲಾಗಿದೆ. ಕೆಲವು ಪಂಗಡಗಳವರು ಹಣೆಯಲ್ಲಿ ವಿಭೂತಿಯಿಲ್ಲದೆ ಭೋಜನ ಸ್ವೀಕರಿಸುವುದಿಲ್ಲ. ಇದು ಅವರ ಶಿಸ್ತು ಅನ್ನೋಣ. ಯಾತ್ರಿಕನೊಬ್ಬ ತಾನೊಬ್ಬ ಭಕ್ತ, ನೇಮನಿಷ್ಠ ಎಂದು ತೋರಿಸಿಕೊಳ್ಳುವ ಸಲುವಾಗಿ ವಿಭೂತಿ ಧರಿಸಿದನಂತೆ. ಹಣೆಯಲ್ಲಿ ವಿಭೂತಿ ಪಟ್ಟೆ ನೋಡಿ ಅವನಿಗೆ ಊಟವಾಯಿತೆಂದು ಯಾರೂ ಊಟ ನೀಡಲಿಲ್ಲವಂತೆ; *'ಗೂಳೂರು ಗಟ್ಟಿ ಏಳೂರನ್ನ ಕೆಡಿಸ್ತು.'*

ಬಂಡಿಗನವಿಲೆ ಭಗವಾನ್
ಉಪನ್ಯಾಸಕರು, ಕೊಂಗಾಡಿಯಪ್ಪ ಪದವಿಪೂರ್ವ ಕಾಲೇಜು, ದೊಡ್ಡಬಳ್ಳಾಪುರ




ತುಮಕೂರಿನಲ್ಲಿ ದಿನಾಂಕ ೧೪.೦೬.೨೦೦೫ರಂದು ಪ್ರಾರಂಭಗೊಂಡ ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ಶ್ರೀ ಎಸ್. ನಾಗಣ್ಣ, ಸಂಪಾದಕರು, ಪ್ರಜಾಪ್ರಗತಿ ದಿನಪತ್ರಿಕೆ ಇವರು ಉದ್ಘಾಟಿಸಿದರು.
ಮುಖ್ಯ ಅತಿಥಿಗಳಾಗಿ : ಶ್ರೀ ಎ. ಚಿಕ್ಕವೀರಯ್ಯ (ಖ್ಯಾತ ಸಾಹಿತಿಗಳು)
ಶ್ರೀ ಟಿ. ಆರ್. ರೇವಣ್ಣ (ಹಿರಿಯ ಸ್ವಾತಂತ್ರ್ಯ ಹೋರಾಟಗಾರರು)
ಶ್ರೀಮತಿ ಅನ್ನಪೂರ್ಣಮ್ಮ (ಅಧ್ಯಕ್ಷರು, ಲೇಖಕಿಯರ ಸಂಘ, ತುಮಕೂರು)
ಶ್ರೀ ಆರ್. ಎಫ್. ದೇಸಾಯಿ (ಗ್ರಂಥಾಲಯಾಧಿಕಾರಿಗಳು) ಭಾಗವಹಿಸಿದ್ದರು.

# ಜಾತಿ ಆಧಾರದ ಮೀಸಲಾತಿಯ ಪ್ರಸ್ತುತತೆ

> ಸದ್ಯದ ಪರಿಸ್ಥಿತಿಯಲ್ಲಂತೂ ಮೀಸಲಾತಿಗೆ ಅರ್ಥವೇ ಇಲ್ಲದಂತಾಗಿದೆ. ಯಾಕೆಂದರೆ, ಅದು ಪೂರ್ಣ ಪ್ರಮಾಣದಲ್ಲಿ ಚಾಲನೆಗೆ ಬರುತ್ತಿಲ್ಲ, ಸಮರ್ಪಕವಾದ ಬಳಕೆ ಕೂಡ ಇಲ್ಲ; ಹೆಸರಿಗೆ ಮಾತ್ರವೇ ಉಳಿದುಕೊಂಡಿದೆ. ವಿಶ್ವವಿದ್ಯಾಲಯಗಳ ಮಟ್ಟದಲ್ಲಿ ಸ್ವಲ್ಪ ಇಣುಕಿ ನೋಡಿದರೆ, ಮೀಸಲಾತಿಯಡಿ ಬರುವ ವಿದ್ಯಾರ್ಥಿಗಳ ಸವಲತ್ತು ಅಲ್ಲದೆ ಇನ್ನಿತರ ಯೋಜನೆಗಳಿಗೆ ಒಂದೊಂದಾಗಿ ಕತ್ತರಿ ಹಾಕುವ ಹುನ್ನಾರ ನಡೆದಿದೆ. ಸಂಘಟನೆಗಳ ಮೂಲಕ ಬೇಡಿಕೆಗಳು ಬಂದರೆ, ಅವುಗಳಿಗೆ ಏನಾದರೊಂದು ಬಣ್ಣ ಬಳಿದು ಬಿಡುತ್ತಾರೆ. ಇದರಿಂದ ಮೀಸಲಾತಿಯಡಿ ಬರುವ ಎಲ್ಲ ವಿದ್ಯಾರ್ಥಿಗಳು ವಂಚಿತರಾಗುತ್ತಿದ್ದಾರೆ. ಕಾರಣ, ಜಾತಿಯಾಧಾರದ ಮೀಸಲಾತಿಯು ಇನ್ನೂ ಅವಶ್ಯಕತೆಯಿದೆ.

ಇಂದು ಮೀಸಲಾತಿಯು ಒಂದು ಗಂಭೀರವಾದ ಚರ್ಚಾಸ್ಪದ ವಿಷಯವಾಗಿದೆ. ಆ ಕುರಿತ ಪರ-ವಿರೋಧ ವಿಚಾರಗಳಂತೂ ಅಲ್ಲಲ್ಲಿ ಕೇಳಿ ಬರುತ್ತಿವೆ. ಇತ್ತೀಚೆಗೆ ಖ್ಯಾತ ಲೇಖಕ ಕೆ. ಪಿ. ಪೂರ್ಣಚಂದ್ರ ತೇಜಸ್ವಿಯವರು ಮೀಸಲಾತಿಗೆ ಸಂಬಂಧಪಟ್ಟಂತೆ ಮೈಸೂರಿನ ಸಭೆಯೊಂದರಲ್ಲಿ ''ಮೀಸಲಾತಿ ಇಲ್ಲದಿದ್ದರೆ ಬದುಕೋದು ಕಷ್ಟ ಎನ್ನುವವರು ಮುಟ್ಠಾಳರು'' ಎಂದು ಆಡಿರುವ ಮಾತುಗಳಿಗೆ ಮೀಸಲಾತಿಯ ಬಗ್ಗೆ ಚರ್ಚೆ, ಹೋರಾಟ, ಪ್ರತಿಭಟನೆ ಮಾಡಿಕೊಂಡುಬಂದವರಲ್ಲಿ ದಿಗ್ಭ್ರಮೆ ಉಂಟುಮಾಡಿದ್ದರೆ ಆಶ್ಚರ್ಯವಿಲ್ಲ. ತೇಜಸ್ವಿಯವರ ಮಾತುಗಳಿಗೆ ವಿರುದ್ಧವಾದ ಪ್ರತಿಕ್ರಿಯೆಗಳು ಬಂದಿವೆ; ಬರುತ್ತಿವೆ. ಈ ರೀತಿ ಮೀಸಲಾತಿಯ ಬಗ್ಗೆ ಅಲೆಗಳು ಆಗಾಗ ಏಳುತ್ತಲೇ ಇವೆ.

ಅದಿರಲಿ, ಈಗಿದ್ದ ಮೀಸಲಾತಿ ಪದ್ಧತಿಯನ್ನು ವಿರೋಧಿಸಿ ತಮ್ಮ ಜಾತಿಗೆ ಅನುಗುಣವಾಗಿ ಒಳ ಮೀಸಲಾತಿ ಬೇಡಿ ುು ಸಲುವಾಗಿ ಹೋರಾಡುವವರು ಒಂದು ಕಡೆ ಇದ್ದರೆ, ಮೀಸಲಾತಿಯಿಂದ ತಮ್ಮ ಆರ್ಥಿಕ ಮತ್ತು ಶೈಕ್ಷಣಿಕ ಮಟ್ಟವನ್ನು ಸುಧಾರಿಸಿಕೊಂಡು ಸಮಾಜದಲ್ಲಿ ಉನ್ನತಿಗೇರುವ ದಲಿತರನ್ನು ಕಂಡರೆ ಕೆಲವರಿಗೆ ಆಗಿ ಬರುವುದಿಲ್ಲ. ಅಂಥವರು ಮೀಸಲಾತಿಯನ್ನು ವಿರೋಧಿಸುತ್ತಿದ್ದಾರೆ. ಇವರು ಬಲಿಷ್ಠರಾದರೆ ದಬ್ಬಾಳಿಕೆ, ದೌರ್ಜನ್ಯಗಳಿಂದ ಮೆರೆಯುತ್ತಿದ್ದ ತಮ್ಮ ಪುಢಾರಿತನ ಎಲ್ಲಿ ಮಾಯವಾಗುತ್ತದೋ ಏನೋ ಎನ್ನುವ ಹುನ್ನಾರ ಅವರದು.

ಶತಶತಮಾನಗಳಿಂದ ಶೋಷಣೆಗೊಳಗಾಗಿ, ನೋವು-ನಲಿವನ್ನುಂಡು ಸೊರಗಿ ಹೋಗಿರುವ ದಲಿತ ಜನಾಂಗಕ್ಕೆ ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ ತಮ್ಮ ಸ್ಥಾನ-ಮಾನಗಳನ್ನು ಸುಧಾರಿಸಿಕೊಳ್ಳಬೇಕಾದರೆ ಜಾತಿ ಆಧಾರಿತ ಮೀಸಲಾತಿಯ ಅವಶ್ಯಕತೆಯು ಜರೂರಾಗಿದೆ.

''೧೯೫೩ರಲ್ಲಿ, ಸಂವಿಧಾನದ ೩೪೦ನೇ ಅನುಚ್ಛೇದದ ಅನುಸಾರ ಭಾರತದ ಮೊದಲ ಹಿಂದುಳಿದ ವರ್ಗಗಳ ಆಯೋಗವನ್ನು ಕಾಕಾಸಾಹೇಬ ಕಾಲೇಲ್ಕರ್ ಅವರ ಅಧ್ಯಕ್ಷತೆಯಲ್ಲಿ ರಚಿಸಲಾಯಿತು. ೧೯೫೫ರಲ್ಲಿ ಆ ಆಯೋಗವು ಸಲ್ಲಿಸಿದ ವರದಿಯಲ್ಲಿ ಜಾತಿ ಆಧಾರದ ಮೇಲೆಯೇ ಹಿಂದುಳಿದಿರುವಿಕೆಯನ್ನು ನಿರ್ಧರಿಸುವಂತೆ ಶಿಫಾರಸ್ಸು ಮಾಡಲಾಯಿತು. ಅಂತೆಯೇ ಹಿಂದುಳಿದ ವರ್ಗಗಳ ಪಟ್ಟಿಯನ್ನು ಸಿದ್ಧಪಡಿಸಿ ಕೊಡಲಾಯಿತು.'' ಈ ಮಾದರಿಯ ಅಧ್ಯಯನ ಇಂದಿನ ಅವಶ್ಯಕತೆಯಾಗಿದೆ.

ಸಧ್ಯದ ಪರಿಸ್ಥಿತಿಯಲ್ಲಂತೂ ಮೀಸಲಾತಿಗೆ ಅರ್ಥವೇ ಇಲ್ಲದಂತಾಗಿದೆ. ಯಾಕೆಂದರೆ, ಅದು ಪೂರ್ಣಪ್ರಮಾಣದಲ್ಲಿ ಚಾಲನೆಗೆ ಬರುತ್ತಿಲ್ಲ, ಸಮರ್ಪಕವಾದ ಬಳಕೆ ಕೂಡ ಇಲ್ಲ; ಹೆಸರಿಗೆ ಮಾತ್ರವೇ ಉಳಿದುಕೊಂಡಿದೆ. ವಿಶ್ವವಿದ್ಯಾಲಯಗಳ ಮಟ್ಟದಲ್ಲಿ ಸ್ವಲ್ಪ ಇಣುಕಿ ನೋಡಿದರೆ, ಮೀಸಲಾತಿಯಡಿ ಬರುವ ವಿದ್ಯಾರ್ಥಿಗಳ ಸವಲತ್ತು ಅಲ್ಲದೆ ಇನ್ನಿತರ ಯೋಜನೆಗಳಿಗೆ ಒಂದೊಂದಾಗಿ ಕತ್ತರಿ ಹಾಕುವ ಹುನ್ನಾರ ನಡೆದಿದೆ. ಸಂಘಟನೆಗಳ ಮೂಲಕ ಬೇಡಿಕೆಗಳು ಬಂದರೆ, ಅವುಗಳಿಗೆ ಏನಾದರೊಂದು ಬಣ್ಣ ಬಳಿದುಬಿಡುತ್ತಾರೆ. ಇದರಿಂದ ಮೀಸಲಾತಿಯಡಿ ಬರುವ ಎಲ್ಲ ವಿದ್ಯಾರ್ಥಿಗಳು ವಂಚಿತರಾಗುತ್ತಿದ್ದಾರೆ. ಕಾರಣ, ಜಾತಿಯಾಧಾರದ ಮೀಸಲಾತಿಯು ಇನ್ನೂ ಅವಶ್ಯಕತೆ ಇದೆ; ಅದು ಕಟ್ಟು-ನಿಟ್ಟಾಗಿ ಜಾರಿಯಾಗಬೇಕಿದೆ.

ವಿಜಯ ಆರ್. ಕಾಂಬಳೆ

ಇತ್ತೀಚೆಗೆ ಕೊನೆಗೊಂಡ ಬ್ಯಾಕ್‌ಲಾಗ್ ಸಿಸ್ಟಮ್‌ಅನ್ನು ಗಮನಿಸಿದರೆ ಮೀಸಲಾತಿಯು ಎಷ್ಟು ಸಮರ್ಪಕವಾಗಿ ಬಳಕೆಯಾಯಿತು ಎಂಬುದು ನಮಗೆ ತಿಳಿಯುತ್ತದೆ. ಕಣ್ಣಿಗೆ ಬೆಣ್ಣೆ ಸವರುವ ಕಾರ್ಯ ಅಲ್ಲಿ ನಡೆದಿದೆ. ಕೇವಲ ಹೆಸರಿಗೆ ಮಾತ್ರ ಬ್ಯಾಕ್‌ಲಾಗ್ ಸಿಸ್ಟಮ್‌ಅನ್ನು ಸೃಷ್ಟಿಸಿದ್ದು ಮತ್ತು ಅದರ ಕಾರ್ಯ ಅಪೂರ್ಣವಾದದ್ದು, ಇಷ್ಟರಲ್ಲೇ ಎಲ್ಲರ ಗಮನಕ್ಕೆ ಬರಲಿದೆ. ಕಟ್ಟು-ನಿಟ್ಟಾಗಿ ಅದು ಜಾರಿಗೆ ಬಂದಿದ್ದರೆ, ಸಂಪೂರ್ಣವಾಗಿ ಬ್ಯಾಕ್‌ಲಾಗ್ ಸಿಸ್ಟಮ್‌ಅನ್ನು ಬಳಸಿದ್ದರೆ, ಮೀಸಲಾತಿಯ ಅಡಿಯಲ್ಲಿ ಬರುವ ಎಲ್ಲ ಅಭ್ಯರ್ಥಿಗಳಿಗೂ ಅದರ ಫಲ ದೊರೆಯುತ್ತಿತ್ತು. ಆ ಕಾರಣವಾಗಿ ದಲಿತರ ಮೇಲೆ ಆಗುತ್ತಿರುವ ಇಂಥ ಅನ್ಯಾಯಗಳನ್ನು ಸರಿಪಡಿಸಬೇಕಾದರೆ ಈ ಜಾತಿ ಆಧಾರಿತ ಮೀಸಲಾತಿಯು ಮುಂದುವರೆಯಲೇಬೇಕು. ಅಲ್ಲದೆ ಮೀಸಲಾತಿಯು ಸಮರ್ಪಕವಾಗಿ ಸದ್ಬಳಕೆಯಾಗುವ ನಿಟ್ಟಿನಲ್ಲಿಯೂ ಜಾಗೃತಿ ವಹಿಸಬೇಕಾಗಿದೆ.

ವಿಶ್ವವಿದ್ಯಾಲಯ ಮಟ್ಟದಲ್ಲೇ ಅಲ್ಲದೆ, ಇಡೀ ಮೀಸಲಾತಿಯಡಿ ಬರುವ ಜನಾಂಗವು ಯೋಜನೆಗಳಿಂದ ವಂಚಿತರಾಗುವುದಕ್ಕೆ, ಸವಲತ್ತುಗಳಿಂದ ದೂರ ಉಳಿಯುವುದಕ್ಕೆ ಅದೇ ಮೀಸಲಾತಿಯಡಿ ಲಾಭ ಪಡೆದು ಸರ್ಕಾರದಲ್ಲಿರುವ ಮಂತ್ರಿಗಳಾರೂ ಪರಿಹಾರ ಕೊಟ್ಟಿಲ್ಲ. ಉನ್ನತ ಅಧಿಕಾರಗಳ ಇನ್ನಿತರರ ಅಲಕ್ಷ್ಯತನವೇ ಕಾರಣವೆಂದು ಬೇರೆ ಹೇಳಬೇಕಾಗಿಲ್ಲ. ಅವರೇನಾದರೂ ತಮ್ಮ ಜನಾಂಗದಪರ ಕಾಳಜಿ ವಹಿಸಿ, ಇತ್ತ ಕಡೆ ಲಕ್ಷ್ಯ ವಹಿಸಿದ್ದರೆ ಇಂಥ ಸಮಸ್ಯೆಗಳು ಇರುತ್ತಿಲಿಲ್ಲ. ಬಹಳಷ್ಟಿಲ್ಲದಿದ್ದರೂ ಒಂದಷ್ಟು ಜನಾಂಗದವರಾದರೂ ಈ ಮೀಸಲಾತಿಯಿಂದ ದೂರ ಉಳಿಯಲು ಸಾಧ್ಯವಾಗುತ್ತಿತ್ತೇನೋ.

ಆದಕ್ಕಾಗಿ ಇಂಥ ಸಮಸ್ಯೆಗಳ ವಿರುದ್ಧವಾಗಿ ಒಮ್ಮನಸ್ಸಿನ ಹೋರಾಟದ ಅವಶ್ಯಕತೆ ಈಗ ಬಂದೊದಗಿದೆ. ಸಾವಿನಂಚಿನಲ್ಲಿರುವ ಮೀಸಲಾತಿಯ ಲಾಭ ಬೇಕು, ಆದರೆ ಅದೇ ಮೀಸಲಾತಿಯ ಬಗ್ಗೆ ಅದರ ಸವಲತ್ತುಗಳ ಬಗ್ಗೆ ಮತ್ತು ಇನ್ನಿತರ ವಿಷಯಗಳ ಕುರಿತು ಉಳಿವಿನ ಕಡೆಗೆ ಕೆಲವು ದಲಿತರಲ್ಲಿ ಹಾಗೂ ಮೀಸಲಾತಿ ಪಡೆಯುವವರಲ್ಲಿ ಅಲಕ್ಷ್ಯತನ, ಬೇಜವಾಬ್ದಾರಿತನ ಹೆಚ್ಚಾಗುತ್ತಿದೆ. ''ಮೀಸಲಾತಿ ಪಡೆಯುವ ಬಗ್ಗೆ ಅನೇಕರು ಮುಂದಾಗುತ್ತಾರೆ. ಅದೇ ಅಂಬೇಡ್ಕರ್ ಅವರ ಚಿಂತನೆಗಳೆಂದರೆ ಕಳ್ಳರಂತೆ ಓಡಿ ಹೋಗುತ್ತಾರೆ. ಕೋಟಿ ಕೋಟಿ ಸಂಖ್ಯೆಯಲ್ಲಿರುವ ದಲಿತರಲ್ಲಿ ಅಂಬೇಡ್ಕರ್ ಅವರ ಚಿಂತನೆಗಳನ್ನು ಅರಿತವರು ಎಷ್ಟು ಜನರು ಇರಬಹುದು ಎಂದು ನೋಡಿದರೆ, ಎಷ್ಟೋ ವಿದ್ಯಾವಂತ ದಲಿತರು, ಉನ್ನತ ಶಿಕ್ಷಣ ಪಡೆದ ದಲಿತರು ಅಂಬೇಡ್ಕರ್‌ರವರ ಒಂದು ಕೃತಿಯನ್ನೂ ಮುಟ್ಟಿಯೂ ನೋಡಿರುವುದಿಲ್ಲ. ಅಂಥವರಿಗೆ ಮೀಸಲಾತಿಯ ಲಾಭ ಬೇಕೇ ಹೊರತು, ಈ ವ್ಯವಸ್ಥೆಗೆ, ಈ ಸಮುದಾಯಕ್ಕೆ ಹಾಗೂ ಇವತ್ತಿನ ಅನೇಕ ಸವಾಲುಗಳಿಗೆ ತಮ್ಮ ಸಂಬಂಧ ಎಂತಹುದು ಎಂಬುದರ ಬಗ್ಗೆ ಒಮ್ಮೆಯೂ ಆಲೋಚಿಸಿರುವುದಿಲ್ಲ'' ಎನ್ನುವ ಮೊಗಳ್ಳಿ ಗಣೇಶ ಅವರ ಮಾತುಗಳು ಗಮನಾರ್ಹ. ಆ ಕಾರಣದಿಂದಲೇ ಇಂಥ ಎಲ್ಲ ವಿಷಯಗಳ ಕುರಿತು ವೈಚಾರಿಕ ನೆಲೆಯನ್ನು ಬೆಳೆಸಿಕೊಳ್ಳುವುದು ಇಂದಿನ ಅವಶ್ಯಕತೆಯಾಗಿದೆ.

ಮೀಸಲಾತಿಯಲ್ಲಿ ಇಂದು ಒಳ ಮೀಸಲಾತಿಯ ಬಗ್ಗೆ ಬೇಡಿಕೆ, ಆ ಕುರಿತ ಹೋರಾಟಗಳು, ಸಂಘಟನೆಗಳಿಂದ ಜಾಥಾ, ಸಭೆ, ಸಮಾರಂಭಗಳು ಅಲ್ಲಲ್ಲಿ ನಡದೇ ಇವೆ. ಅಂಥದ ಮಾದರಿಯನ್ನು

ಮುಂದಿಟ್ಟುಕೊಂಡು ಕರ್ನಾಟಕದ ಮಾದಿಗ ಜನಾಂಗದವರು ಕೂಡ ತಮ್ಮ ಪಾಲಿನ ಒಳ ಮೀಸಲಾತಿಯನ್ನು ಬೇಡುತ್ತಿದ್ದಾರೆ. ಪರಿಶಿಷ್ಟ ಜಾತಿಯಲ್ಲೇ ತಮ್ಮ ಜನಾಂಗದ ಜನಸಂಖ್ಯೆ ಅಧಿಕವಿರುವ ಕಾರಣ ಅವರು ತಮ್ಮ ಪಾಲಿನ ಮೀಸಲಾತಿಯನ್ನು ಪಡೆದುಕೊಳ್ಳಲು ಹವಣಿಸುತ್ತಿದ್ದಾರೆ. ಜನಸಂಖ್ಯೆ ಆಧಾರಿತ ಮೀಸಲಾತಿಯ ಹಂಚಿಕೆ ಡಾ|| ಅಂಬೇಡ್ಕರ್ ರವರ ವಿಚಾರವೂ ಆಗಿತ್ತು. ಆದರೆ ಅದರ ಹಿಂದಿನ ಅವಕಾಶವಾದಿಗಳ ಧೂರ್ತ ಶಕ್ತಿಗಳ ಮೋಸಕ್ಕೆ ಬಲಿಯಾಗಬಾರದು. ಯಾಕೆಂದರೆ ''ಇವತ್ತು ಎಡಗೈ-ಬಲಗೈ ಮೀಸಲಾತಿಯ ಪ್ರಶ್ನೆ ಒಂದು ಸಾಮಾಜಿಕ ಸಮಸ್ಯೆಯಾಗಿ ಬೆಳೆಯುತ್ತಿದೆ. ಸಂಖ್ಯೆಯ ದೃಷ್ಟಿಯಲ್ಲಿ ಇಬ್ಬರನ್ನೂ ವಿಂಗಡಿಸಿ ಪ್ರತ್ಯೇಕ ಮೀಸಲಾತಿಯನ್ನು ಜಾರಿಗೆ ತರಬೇಕು ಎನ್ನುವ ಹೋರಾಟಗಳು ಪ್ರಗತಿಯನ್ನು ಸೂಚಿಸುತ್ತವೆಯೋ, ವಿಗತಿಯನ್ನು ಹೇಳುತ್ತವೆಯೋ ಎಂಬುದರ ಚರ್ಚೆಗೆ ಮೇಲುಜಾತಿಗಳು ತಲೆಹಾಕುವುದಿಲ್ಲ. ಜಾತಿಯ ಒಳಗೆ ಇರುವ ಈ ಪೈಪೋಟಿಯನ್ನು ರಾಜಕಾರಣವು ತನ್ನ ಓಟಿನ ತಂತ್ರಕ್ಕಾಗಿ ಬಳಸಿಕೊಳ್ಳುತ್ತದೆ.'' ಜೊತೆಗೆ ಈ ದಾಯಾದಿಗಳಲ್ಲಿ ಒಡಕನ್ನು ಸೃಷ್ಟಿಸಿ ಅವರಲ್ಲೇ ವೈರತ್ವವನ್ನು ಹುಟ್ಟಿಹಾಕಿ ಲಾಭ ಪಡೆದುಕೊಳ್ಳುವ ತಂತ್ರ ರಾಜಕೀಯ ವಲಯಗಳಲ್ಲಿ ಜರುಗುತ್ತಿದೆ.

ಮೀಸಲಾತಿಯ ಬಗ್ಗೆ ತುಚ್ಛವಾಗಿ ಮಾತನಾಡುವ ಜನ ತಾವು ಕೂಡ ಮೀಸಲಾತಿಯ ಅಡಿಯಲ್ಲೇ ಬದುಕುತ್ತಿದ್ದಾರೆ ಎಂಬುದನ್ನು ಮರೆಯುತ್ತಿದ್ದಾರೆ. ಒಂದಲ್ಲ ಒಂದು ರೀತಿಯಲ್ಲಿ ಎಲ್ಲರೂ ಮೀಸಲಾತಿಯ ಅನುಕಂಪದಲ್ಲೇ ನಿಲ್ಲುತ್ತಾರೆ. ದಲಿತರು ಕೇವಲ ೧೮ ಪ್ರತಿಶತ ಮೀಸಲಾತಿಯನ್ನು ಪಡೆಯುತ್ತಿದ್ದರೆ ನೂರರಲ್ಲಿ ಉಳಿದ ೮೨ ಪ್ರತಿಶತ ಮೀಸಲಾತಿಯು ಎಲ್ಲಿ ಹಂಚಿಹೋಗಿದೆ ಎಂಬುದರ ಬಗ್ಗೆ ಯಾರೂ ಗಮನ ಹರಿಸುವುದಿಲ್ಲ. ಅವರ ಕಣ್ಣಿಗೆ ಬೀಳುವುದು ದಲಿತರ ಮೀಸಲಾತಿ ಮಾತ್ರ. ಡಾ|| ಅಂಬೇಡ್ಕರ್‌ರವರು ಕೇವಲ ದಲಿತರಿಗಷ್ಟೇ ಮೀಸಲಾತಿ ಸೂಚಿಸಿದ್ದಾರೆ ಎಂದು ಆರೋಪಿಸುತ್ತಾರೆ. ಉಳಿದ ಪ್ರತಿಶತ ೮೨ ಮೀಸಲಾತಿಯನ್ನು ಪಡೆಯುತ್ತಿದ್ದ ಜನಾಂಗವು ಈಗ ಅನೇಕ ಕ್ಷೇತ್ರಗಳಲ್ಲಿ ಮುಂದುವರೆದಿದ್ದಾರೆ. ಹಾಗೆ ಲಭ್ಯವಿದ್ದ ಮೀಸಲಾತಿಯು ಮತ್ತೆ ದಲಿತರಿಗೆ ಒದಗಿಸಬೇಕು. ಉಳಿದ ಪ್ರತಿಶತ ೪೦ ಮೀಸಲಾತಿಯನ್ನು ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ವಲಯಗಳಲ್ಲಿ ಎಷ್ಟು ಜನವಿಭಾಗಗಳಾಗಿ ಹಿಂದೆ ಇವೆ ಎಂಬುದನ್ನು ಕೂಲಂಕಷವಾಗಿ ಪತ್ತೆಹಚ್ಚಬೇಕು. ಅದಕ್ಕಾಗಿ ಕಟ್ಟು-ನಿಟ್ಟಾದ ಒಂದು ಅಧ್ಯಯನಕ್ಕೆ ತೊಡಗುವ ಆಯೋಗ ರಚಿಸಿ ಅದನ್ನು ಗುರುತಿಸಿ ಅಂಥವರಿಗೆ ಆ ಮೀಸಲಾತಿಯನ್ನು ಬಳಸುವ ಕಾರ್ಯ ತ್ವರಿತವಾಗಿ ಆಗಬೇಕಿದೆ. ಹಾಗಾದರೆ ಈ ಜಾತಿಯಾಧಾರಿತ ಮೀಸಲಾತಿಯು ಸದ್ಬಳಕೆಯಾಗುವಲ್ಲಿ ಎರಡು ಮಾತಿಲ್ಲ; ಅದು ಸೂಕ್ತವೂ ಕೂಡ.

ಆಯಾ ಸಮುದಾಯಗಳು ಮೀಸಲಾತಿಯಿಂದ ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ತಮ್ಮ ಸಾಮರ್ಥ್ಯಗಳನ್ನು ಹೆಚ್ಚಿಸಿಕೊಳ್ಳುತ್ತವೆ. ಆದರೆ ಜಾತಿಯಿಂದ ಮಾತ್ರ ದೂರ ಉಳಿಯಲಾರವು. ಎಂಥವರೇ ಆಗಲಿ ಮೀಸಲಾತಿಯನ್ನು ಉಪಯೋಗಿಸಿಕೊಂಡು ಮುಂದೆ ಬಂದರೂ ಅವರನ್ನು ಸಮಾಜವು ಮತ್ತೆ ಗುರುತಿಸಲಿಕ್ಕೆ ಆಧಾರ ಜಾತಿಯೇ. ಜಾತಿಯನ್ನು ಹೋಗಲಾಡಿಸುವ ಸಲುವಾಗಿ ಮೀಸಲಾತಿಯು ನಮಗೆ ಎಷ್ಟೇ ಸಹಾಯಕವಾದರೂ ಕೂಡ, ಜಾತಿಯ ಆಧಾರದ ಮೇಲೆ ದಲಿತರು ಒಂದಿಲ್ಲೊಂದು ತುಳಿತಕ್ಕೊಳಗಾಗಿರುವುದನ್ನು ನೋಡುತ್ತೇವೆ. ಹೀಗಾಗಿ ಮೀಸಲಾತಿಯಿಂದ ಅನಿಷ್ಟ ಜಾತಿಯ ಪದ್ಧತಿಯು ಹೆಚ್ಚಾಗುತ್ತಿದೆಯೋ ಅಥವಾ ಕಡಿಮೆಯಾಗುತ್ತಿದೆಯೋ ಎಂಬುದರ ಬಗ್ಗೆ ಯಾರೂ ಅಷ್ಟು ಲಕ್ಷ್ಯ ವಹಿಸಿಲ್ಲ. ಆ ಕಾರಣವಾಗಿ ಮೀಸಲಾತಿಯಿಂದ ಜಾತಿ ಉಳಿಯುವುದು ನಿಜ; ಆದರೆ ಅದನ್ನು ಹೋಗಲಾಡಿಸಲು ಕೆಲವೊಂದು ಉಪಾಯಗಳನ್ನು ಕಂಡುಕೊಳ್ಳಬೇಕಾಗಿದೆ.

''ಭಾರತ ದೇಶ ಉನ್ನತಿಗೇರಬೇಕಾದರೆ ಇಲ್ಲಿರುವ ಜಾತಿ ಅಸಮಾನತೆ ಮೊದಲು ದೂರವಾಗಬೇಕು. ಸಮಾನತೆ ತರಬೇಕಾದರೆ ಬಹಳ ಪ್ರಮುಖವಾಗಿ ಕೈಗೊಳ್ಳಬೇಕಾದ ಒಂದಂಶದ ಕಾರ್ಯಕ್ರಮವೆಂದರೆ ಕಡ್ಡಾಯ ಅಂತರ್‌ಜಾತಿ ವಿವಾಹ. ಅಂತರ್‌ಜಾತೀಯ ವಿವಾಹಗಳಿಂದ ಸಂಬಂಧಗಳು ಗಟ್ಟಿಗೊಂಡ ಮೇಲೆ ಜಾತಿಯಾದರೂ ಎಲ್ಲಿರುತ್ತದೆ ?'' ಎನ್ನುವ ಕೆ. ಸಿದ್ರಾಮ ಅವರ ಮಾತು ಇಲ್ಲಿ ಪ್ರಸ್ತುತ.

ಡಾ|| ಮುನಿವೆಂಕಟಪ್ಪ ಅವರು ಹೇಳುವಂತೆ, ಭಾರತದಲ್ಲಿ ಜಾತಿಪದ್ಧತಿ ಎಂಬ ಮಾನಸಿಕ ರೋಗ ಇರುವವರೆಗೂ ಜಾತಿಯಾಧಾರಿತ ಮೀಸಲಾತಿ ಮುಂದುವರೆಯಲೇಬೇಕು. ಸಂವಿಧಾನದಲ್ಲಿ ಮೀಸಲಾತಿಯು ಕೇವಲ ಹತ್ತು ವರ್ಷಗಳ ಅವಧಿಗೆ ನಿಗದಿಯಾಗಿದೆ. ಅವಶ್ಯವಿದ್ದಲ್ಲಿ ಅದನ್ನು ಮುಂದುವರೆಸುವುದಾಗಿಯೂ ಹೇಳಲಾಗಿದೆ. ಆದರೆ ಈ ದೇಶದಲ್ಲಿ ಜಾತಿಪದ್ಧತಿ ಜೀವಂತವಾಗಿದೆ. ಜಾತಿ ಮನಸ್ಸುಗಳು ಎಚ್ಚೆತ್ತುಕೊಂಡಿವೆ. ಆದುದರಿಂದ ಮೀಸಲಾತಿ ಅನಿವಾರ್ಯವೆಂದು ಹೇಳಲೇಬೇಕಿದೆ.

ಇಂದು ನಾವು ಜಾತಿಯಾಧಾರಿತ ಮೀಸಲಾತಿ ಇರಬೇಕೋ ಅಥವಾ ಇರಬಾರದೋ ಎಂಬುದನ್ನು ಚರ್ಚಿಸುವುದಕ್ಕಿಂತ ಹೆಚ್ಚಾಗಿ ಈಗಿದ್ದ ಮೀಸಲಾತಿಯಲ್ಲಿ ದಲಿತರಿಗೆ ಆಗುತ್ತಿರುವ ಅನ್ಯಾಯ, ಆತಂಕ, ಎಡರು- ತೊಡರುಗಳ ಕುರಿತು ಗಂಭೀರವಾಗಿ ಚಿಂತನೆ ಮಾಡಬೇಕಾಗಿದೆ. ಯಾಕೆಂದರೆ, ಎಷ್ಟೋ ಮಂದಿ ಮುಗ್ಧ ದಲಿತರಿಗೆ ಮೀಸಲಾತಿಯ ಅನುಕಂಪ ಸ್ವಲ್ಪವೂ ಸ್ಪಂದಿಸಿಲ್ಲ ಎಂಬುದನ್ನು ಇನ್ನುಳಿದ ದಲಿತರು ಆತ್ಮವಿಮರ್ಶೆ ಮಾಡಿಕೊಳ್ಳಬೇಕಾಗಿದೆ. ಮೀಸಲಾತಿಯಡಿಯಲ್ಲಿ ಬರುವ ಸವಲತ್ತುಗಳನ್ನು ಬಳಸಿಕೊಳ್ಳುವ ಸಂದರ್ಭದಲ್ಲಿ 'ತಾವು ದಲಿತರು' ಎಂದು ಸಣ್ಣ ಧ್ವನಿಯಲ್ಲಿ ಹೇಳಿ ಮಿಂಚಿ ಮರೆಯಾಗುವವರಿದ್ದಾರೆ. ಆದರೆ ಮೀಸಲಾತಿಯ ಲಾಭವನ್ನು ಮಾತ್ರ ತಮಗೆ ಅವಶ್ಯವಿದ್ದಲ್ಲಿ ಪಡೆದೇ ಪಡೆಯುತ್ತಾರೆ. ಈಗಾಗಲೇ ತಯಾರಿಸಲ್ಪಟ್ಟ ಮೀಸಲಾತಿ ಪಟ್ಟಿಯಲ್ಲಿ ಇಂಥ ಅನೇಕ ಉಪಜಾತಿಗಳಿದ್ದದ್ದನ್ನು ನಾವು ಕಾಣುತ್ತೇವೆ; ಜೊತೆಗೆ ಆ ವರ್ತನೆಯನ್ನೂ ಕೂಡ.

''ಈಗ ಎಡಗೈ ಬಲಗೈ ಆಗಿ ಪ್ರತ್ಯೇಕ ಮೀಸಲಾತಿಯನ್ನು ಒತ್ತಾಯಿಸುತ್ತಿರುವುದು ಒಂದು ಕಡೆ ಇದ್ದರೂ, ಮುಂದಿನ ವರ್ಷಗಳಲ್ಲಿ ಹೊಲೆ-ಮಾದಿಗರಿಗಿಂತಲೂ ಈ ಮೀಸಲಾತಿಯನ್ನು ಚಾಣಾಕ್ಷತೆಯಿಂದ ತಮ್ಮ ಕಡೆಗೆ ಸೆಳೆದುಕೊಳ್ಳುವಲ್ಲಿ ಉಳಿದ ಉಪಜಾತಿಗಳು ಮುಂದಾಗುತ್ತವೆ. ಆಗ ಈ ಎಡ ಬಲಗಳ ಸ್ಥಿತಿ ಇನ್ನೂ ಚಿಂತಾಜನಕವಾಗಬಲ್ಲದು.'' ಆದ್ದರಿಂದಲೇ ಮೊಗಳ್ಳಿ ಗಣೇಶ ಅವರ ಈ ಮಾತಿನಂತೆ, ಈ ಕುರಿತು ಜಾಗೃತವಾಗಬೇಕಿದೆ. ''ಸೂಕ್ಷ್ಮವಾಗಿ ಈಗಾಗಲೇ ಮೀಸಲಾತಿಯ ಪಟ್ಟಿಯ ಒಳಗಿರುವ ಹೊಲೆ-ಮಾದಿಗರಲ್ಲದ ಜಾತಿಗಳು ತಮ್ಮ ಸ್ಥಾನಗಳನ್ನು ಭದ್ರಪಡಿಸಿಕೊಳ್ಳುತ್ತಿವೆ. ವಿಚಿತ್ರ ಎಂದರೆ ಅಷ್ಟು ಅಸ್ಪೃಶ್ಯರಲ್ಲ ಎನ್ನಬಹುದಾದ ದಲಿತರನ್ನೇ ಇವತ್ತಿನ ಮೀಸಲಾತಿಯಲ್ಲಿ ವಿಶೇಷವಾಗಿ ಆಯ್ಕೆ ಮಾಡಿಕೊಳ್ಳಲಾಗುತ್ತಿದೆ. ಇದನ್ನು ಉದ್ದೇಶಪೂರ್ವಕವಾಗಿ ಮಾಡುವ ತಂತ್ರ ಈ ವ್ಯವಸ್ಥೆಗೆ ಇರುವುದರಿಂದ ಇಂತಹ ಒಳ ಪ್ರಕ್ರಿಯೆಗಳನ್ನು ಯಾರೇ ಆದರೂ ವಿರೋಧಿಸಬೇಕಾಗುತ್ತದೆ. ಅದರ ವಿರುದ್ಧ ಹೋರಾಟವು ಜರುಗಬೇಕಿದೆ.''

ನಮ್ಮ ಚರಿತ್ರೆಯ ಪುಟಗಳನ್ನು ತಿರುವಿ ನೋಡಿದಾಗ ಈ ವೈದಿಕಶಾಹಿ ಮತ್ತು ಬಂಡವಾಳಶಾಹಿಗಳು ಒಂದೇ ನಾಣ್ಯದ ಎರಡು ಮುಖಗಳಂತೆ ಎಂಬುದು ಗೊತ್ತಾಗುತ್ತದೆ. ಯಾಕೆಂದರೆ, ವೈದಿಕಶಾಹಿಯವರು ಸಾಂಸ್ಕೃತಿಕ ಮಾಧ್ಯಮಗಳ ಮೇಲೆ ತಮ್ಮ ಹಿಡಿತವನ್ನು ಸಾಧಿಸಿದರೆ, ಅದೇ ಹಿಡಿತವನ್ನು ಬಂಡವಾಳಶಾಹಿಗಳು ರಾಜಕೀಯ, ಅಧಿಕಾರ ಮತ್ತು ಭೂ ಒಡೆತನಗಳ ಮೇಲೆ ಸಾಧಿಸಿದವು. ಭಾರತವು ಸ್ವತಂತ್ರವಾದ ಸಂದರ್ಭದಲ್ಲಿ ಇಲ್ಲಿಯ ಸಮಾಜ ವ್ಯವಸ್ಥೆಯು 'ಊಳಿಗಮಾನ್ಯ' ಹಂತದಲ್ಲಿತ್ತು. ಆ ವೇಳೆಗೆ ಹೆಚ್ಚಾಗಿ ಅಧಿಕಾರದ ಸೂತ್ರವನ್ನು ಹಿಡಿದಿದ್ದವರು ಈ ಭೂ ಒಡೆಯ ಜಾತಿಗಳವರೆ. ಇದರಿಂದಾಗಿ ಇನ್ನುಳಿದ ಹತ್ತು-ಹಲವು ಜಾತಿಗಳು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಾಗೂ ರಾಜಕೀಯವಾಗಿ ಹಿಂದುಳಿಯಲು ಕಾರಣವಾಯಿತೆನ್ನಬಹುದು.

ಹೀಗೆ ಮೊದಲಿನಿಂದಲೂ ಅಸಮಾನ ಹಂಚಿಕೆಯು ಎಲ್ಲೆಡೆಯೂ ಪಸರಿಸುವುದರಿಂದ ಸದ್ಯದಲ್ಲಿ ಈ ಜಾತಿಯಾಧಾರಿತ ಮೀಸಲಾತಿ ಸೂಕ್ತತೆ ಮತ್ತು ಅವಶ್ಯಕತೆಯ ಬಗ್ಗೆ ಒತ್ತಿ ಹೇಳಬೇಕಾಗಿಲ್ಲ. ಈ ಸಂದರ್ಭದಲ್ಲಿ ಪ್ರೊ|| ಲಕ್ಷ್ಮಣ ತೆಲಗಾವಿಯವರ ಮಾತನ್ನು ಇಲ್ಲಿ ಹೇಳಲೇಬೇಕು. ''ಸಮಾನತಾ ತತ್ವಕ್ಕೆ ಮಾನ್ಯತೆ ಇರುವ ಎಡೆಯಲ್ಲಿ ತಾರತಮ್ಯ ಎಲ್ಲಿರುತ್ತದೆ ? ಮೀಸಲಾತಿಯ ಅಗತ್ಯವಾದರೂ ಏಕೆ ? ಒಡೆಯ-ಗುಲಾಮ, ಪ್ರಥಮ ದರ್ಜೆ ಪ್ರಜೆ-ದ್ವಿತೀಯ ದರ್ಜೆ ಪ್ರಜೆಗಳೆಂಬ ವಿಭಾಗಗಳಾದರೂ ಏಕಿರುತ್ತವೆ ? ಮೂಲಭೂತ ಹಕ್ಕು ಬಾಧ್ಯತೆಗಳಿಗೆ ಚ್ಯುತಿ ಉಂಟಾದಾಗ ಪ್ರತಿಭಟನೆಯ ಅಲೆ ತಾನಾಗಿಯೇ ಏಳುತ್ತದೆ. ಹೀಗಾಗಿ ಅಸಮಾನತೆಯನ್ನು ಕೊನೆಗಾಣಿಸಿ ಸಮಾನತೆಯನ್ನು ತರಬೇಕಾದರೆ ಮೀಸಲಾತಿಯ ಪಾತ್ರ ಬಹುಮುಖ್ಯ.''

ಕೊನೆಯದಾಗಿ, ಇಂದು ಮೀಸಲಾತಿಯನ್ನು ರದ್ದುಗೊಳಿಸುವುದು ಸಾಧ್ಯವಿಲ್ಲ. ಅದನ್ನು ಬಿಟ್ಟರಲೂ ಆಗುವುದಿಲ್ಲ. ಯಾಕೆಂದರೆ ಇವರಿಗೆ ಸಹಾಯವಾಗಬಲ್ಲ ಎಲ್ಲ ವ್ಯವಸ್ಥೆಗಳು ಇಂದು ಖಾಸಗೀಕರಣ, ಜಾಗತೀಕರಣ, ಕಂಪ್ಯೂಟರೀಕರಣಗಳ ಪಾಲಾಗಿರುವುದರಿಂದ ಈ ದುಃಸ್ಥಿತಿಯಲ್ಲಿ ಮೀಸಲಾತಿಯು ಎಟುಕದ ಮಾತಾಗಿದೆ. ಅದಕ್ಕಾಗಿ ಪರ್ಯಾಯ ವ್ಯವಸ್ಥೆಗಳನ್ನು ಸಜ್ಜುಗೊಳಿಸಬೇಕಾಗಿದೆ. ಮೀಸಲಾತಿಯನ್ನು ಅವಲಂಬಿಸಿರುವ ದಲಿತರು ಈ ಸಂದರ್ಭದಲ್ಲಿ ಬದಲಾದ ಆಧುನಿಕ ತಂತ್ರಜ್ಞಾನ ವ್ಯವಸ್ಥೆಗಳಿಗೆ ಹೊಂದಿಕೊಳ್ಳುವಂತೆ ಸಜ್ಜುಗೊಳ್ಳಲು ಸಮರ್ಪಕವಾದ ತಕ್ಕ ಸೂಕ್ತ ತಂತ್ರಜ್ಞಾನ ಶಿಕ್ಷಣ, ತರಬೇತಿಯಂಥ ಹಲವು ಉಪಾಯಗಳನ್ನು ಸಿದ್ಧಪಡಿಸಿಕೊಳ್ಳಬೇಕಾಗಿದೆ. ಸರ್ಕಾರ ಅಂಥ ಶೈಕ್ಷಣಿಕ ಸಬಲೀಕರಣವನ್ನು ಜಾರಿಗೆ ತರಬೇಕಾಗಿದೆ. ಇದರಿಂದ ಮೀಸಲಾತಿಯು ಖಂಡಿತವಾಗಿಯೂ ದಲಿತರಿಗೆ ಫಲಕಾರಿಯಾಗುತ್ತದೆ.

ವಿಜಯ ಆರ್. ಕಾಂಬಳೆ
ಮಲಪ್ರಭಾ ವಸತಿ ನಿಲಯ, ರೂಮ್ ನಂ.೩೪, ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ - ೫೮೦ ೦೦೩

# ವಾನರರಿಂದ ಮಾನವನವರೆಗೆ



ಮೂಲ : ಫ್ರೆಡರಿಕ್ ಏಂಗೆಲ್ಸ್ ಅನುವಾದ : ಡಾ|| ಜಿ. ರಾಮಕೃಷ್ಣ

ಪ್ರಕಾಶಕರು

ನವಕರ್ನಾಟಕ ಪ್ರಕಾಶನ, ಎಂಬೆಸಿ ಸೆಂಟರ್, ೧೧, ಕ್ರೆಸೆಂಟ್ ರಸ್ತೆ

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧

• ಯು. ಎನ್. ಸಂಗನಾಳಮಠ

ಕಾರ್ಲ್ ಮಾರ್ಕ್ಸ್ ಅವರ ಸ್ನೇಹಿತ ಫ್ರೆಡರಿಕ್ ಏಂಗೆಲ್ಸ್ ೧೮೭೬ರಲ್ಲಿ ರಚಿಸಿದ The part played by labour in the transition from Ape to Man 'ವಾನರಾವಸ್ಥೆಯಿಂದ ಮಾನವಾವಸ್ಥೆಗೆ' ಆಗಿರುವ ಪರಿವರ್ತನೆಯಲ್ಲಿ ದುಡಿಮೆಯು ನಿರ್ವಹಿಸಿರುವ ಪಾತ್ರ ಎಂಬ ಅಪೂರ್ಣ ಕಿರುಹೊತ್ತಿಗೆಯ ಕನ್ನಡ ಅನುವಾದ ಡಾ|| ಜಿ. ರಾಮಕೃಷ್ಣ ಅವರಿಂದ 'ವಾನರರಿಂದ ಮಾನವನವರೆಗೆ' ಎಂಬ ಹೆಸರಿನೊಂದಿಗೆ ಪ್ರಕಟವಾಗಿದೆ. ಏಂಗೆಲ್ಸರ ಮರಣದ ನಂತರ ೧೮೯೬ರಲ್ಲಿ ನಾವೀ ಜೈಟ್ ಎಂಬ ಪತ್ರಿಕೆಯಲ್ಲಿ ಪ್ರಕಟವಾಯಿತು.

ಹಲವು ಲಕ್ಷ ವರ್ಷಗಳ ಹಿಂದೆ ಭೂಮಿಯ ಮೂರನೆಯ ಯುಗ ಎಂಬ ಯುಗದ ಅಂತ್ಯಭಾಗದ ಸುಮಾರಿನಲ್ಲಿ ಉಷ್ಣವಲಯದ ಒಂದು ಭಾಗದಲ್ಲಿ ಸಾಕಷ್ಟು ವಿಕಾಸ ಹೊಂದಿದ ವಾನರ ಕುಲವೊಂದು ವಾಸಿಸುತ್ತಿತ್ತು. ಇದನ್ನು anthropoid ಎನ್ನುತ್ತಾರೆ. ಇವು ಬಾಲವಿಲ್ಲದೆ ಮಾನವರನ್ನು ಸಾಕಷ್ಟು ಹೋಲುತ್ತಿದ್ದವು. ಮಾನವರ ಪೂರ್ವಜರಾಗಿದ್ದ ಇವು ಮೈಮೇಲೆ ಕೂದಲು ಹೊಂದಿ, ಚೂಪಾದ ಕಿವಿಗಳನ್ನು ಹೊಂದಿದ್ದವು. ಗುಂಪು ಗುಂಪಾಗಿ




ಮರಗಳ ಮೇಲೆ ವಾಸಿಸುತ್ತಿದ್ದವು. ಮರ ಹತ್ತುವ ಕ್ರಿಯೆ ಕೈ ಕಾಲುಗಳಿಗೆ ವಿವಿಧ ಕೆಲಸಗಳನ್ನು ವಿಧಿಸುವುದಲ್ಲದೇ ಮುಂದೆ ಸಮನಾದ ನೆಲದ ಮೇಲೆ ಚಲಿಸುವಾಗ, ನಡೆಯುವುದಕ್ಕೆ ಕೈಗಳನ್ನು ಉಪಯೋಗಿಸುವುದನ್ನು ಬಿಟ್ಟು ನಿಂತು ನಡೆಯುವುದನ್ನು ರೂಢಿ ಮಾಡಿಕೊಂಡಾಗ ವಾನರರಿಂದ ಮಾನವ ಕುಲಕ್ಕೆ ಪರಿವರ್ತನೆ ಹೊಂದುವುದರಲ್ಲಿ ನಿರ್ಣಾಯಕ ಹೆಜ್ಜೆಯಾಗಿತ್ತು.

ಈ ಪರಿವರ್ತನೆಗೆ ದುಡಿಮೆ ಮೂಲಾಧಾರ ಎನ್ನುತ್ತಾನೆ ಏಂಗೆಲ್ಸ್. ಈ ದುಡಿಮೆ ಬುದ್ಧಿಯ ವಿಕಾಸಕ್ಕೆ, ವಿಚಾರಗಳ ಬೆಳವಣಿಗೆಗೆ, ನಾಂದಿಯಾಯಿತು. ''ಕೈ ದುಡಿಮೆಯ ಸಾಧನ ಮಾತ್ರವಲ್ಲ ಅದು ದುಡಿಮೆಯ ಪರಿಣಾಮ ಕೂಡ.'' ದುಡಿಮೆ ಮಾನವ ಕೈಯನ್ನು ಪರಿಪೂರ್ಣತೆಯ ಮಾರ್ಗದಲ್ಲಿ ನಡೆಸುತ್ತದೆ. ಆ ಕೈಗಳ ಪ್ರಯೋಜನ ಇಡೀ ದೇಹಕ್ಕೆ ಉಂಟಾಗುವುದು. ಈ ಪ್ರಯೋಜನ ಎರಡು ವಿಧ : ಒಂದು ವೈಯಕ್ತಿಕ, ಎರಡು ಸಾಮೂಹಿಕ. ತನ್ನ ನಂಬಿದವರ ಮತ್ತು ಸಮಾಜದ ಸಲುವಾಗಿ ದುಡಿಮೆಯ ಬೆಳವಣಿಗೆ ಪ್ರಾರಂಭವಾಯಿತು. ಕೈಯ ಈ ವಿಕಾಸವು ಮಾತಿನ ಅಗತ್ಯತೆಯನ್ನು ಉಂಟುಮಾಡಿತು. ಕ್ರಮೇಣ ಭಾಷೆಯ ಉಗಮಕ್ಕೆ ಕಾರಣವಾಯಿತು; ಜ್ಞಾನವಿಕಾಸವಾಯಿತು.

''ಮೊದಲಿಗೆ ದುಡಿಮೆ, ಆನಂತರ ಮತ್ತು ಜೊತೆಗೆ ಮಾತು – ವಾನರರ ಮೆದುಳು ಮಾನವನ ಮೆದುಳಾಗಿ ಪರಿವರ್ತನೆ ಹೊಂದುವುದರಲ್ಲಿ ಅತಿ ಪ್ರಮುಖವಾದ ಉತ್ತೇಜಕಗಳಾಗಿದ್ದವು... ಮೆದುಳು ಮತ್ತು ಅದಕ್ಕೆ ಹೊಂದಿಕೊಂಡ ಇಂದ್ರಿಯಗಳ ಬೆಳವಣಿಗೆಯು ದುಡಿಮೆ ಮತ್ತು ಭಾಷೆಯ ಮೇಲೆ ಉಂಟುಮಾಡಿರುವ ಪ್ರತಿಕ್ರಿಯೆ, ಇದರಿಂದ ಉತ್ಪನ್ನವಾದ ಹೆಚ್ಚಿನ ಪ್ರಜ್ಞಾಶಕ್ತಿಯ ಸ್ಪಷ್ಟತೆ, ಭಾವಗ್ರಹಣ ಮತ್ತು ವಿಮರ್ಶಾಶಕ್ತಿಗಳು ದುಡಿಮೆ ಮತ್ತು ಭಾಷೆಗಳು ಇನ್ನೂ ಮುಂದುವರಿದು ಬೆಳೆಯಲು ಪ್ರೇರಕವಾದವು.''

ಏಂಗೆಲ್ಸ್ ಮುಂದುವರಿದು, ವಾನರನು ನರನಾಗಿ ಪರಿವರ್ತನೆ ಹೊಂದುವಲ್ಲಿ ಆಹಾರ ಅನ್ವೇಷಣೆ ಬಗ್ಗೆ ಈ ರೀತಿ ಹೇಳುತ್ತಾನೆ: ''ಪ್ರಾಣಿಗಳು ಕೊಳ್ಳೆ ಹೊಡೆದು ಜೀವನ ನಿರ್ವಹಿಸುವ ಪದ್ಧತಿ:'' ಜೀವಿಗಳು ತಾವು ರೂಢಿ ಮಾಡಿಕೊಂಡಿರುವ ಆಹಾರದಿಂದ ಭಿನ್ನವಾದ ಆಹಾರವನ್ನುಂಡು ಜೀವಿಸಲು ಸಾಧ್ಯವಾಗುವಂತೆ ಕಾಲಕ್ರಮದಲ್ಲಿ ಮಾರ್ಪಾಡಾಗುವುದಕ್ಕೆ ಈ ಪದ್ಧತಿ ಪ್ರಮುಖ ಪಾತ್ರ ವಹಿಸುವುದು. ಇದರಿಂದಾಗಿ ಪ್ರಾಣಿಗಳ ರಕ್ತದಲ್ಲಿ ನವೀನ ರಾಸಾಯನಿಕ ಸಂಯೋಜನೆ ಕಾಣಬರುತ್ತದೆ ಮತ್ತು ಇಡೀ ದೇಹರಚನಾ ಕ್ರಮದಲ್ಲಿ ಬದಲಾವಣೆಯುಂಟಾಗುತ್ತದೆ. ಹೀಗೆ ಪರಿಸ್ಥಿತಿಗೆ ಒಗ್ಗುವಂತೆ ಬದಲಾಗದ ಪ್ರಾಣಿಗಳ ವಂಶ ನಶಿಸುತ್ತದೆ.

ವಾನರರು ತಿನ್ನುತ್ತಿದ್ದ ಆಹಾರದಲ್ಲಿ ವೈವಿಧ್ಯತೆ ಹೆಚ್ಚುತ್ತ ಪೌಷ್ಟಿಕಾಂಶವು ಹೆಚ್ಚಾಯಿತು, ಇದರಿಂದ ರಾಸಾಯನಿಕ ಕ್ರಿಯೆ ಉಂಟಾಯಿತು, ಪರಿಣಾಮವಾಗಿ ವಾನರರು ದೈಹಿಕ ರೂಪದಲ್ಲಿ ಬದಲಾವಣೆ ಹೊಂದಿ ನರರಾದರು. ಈ ಪರಿವರ್ತನೆ ಹಂತದಲ್ಲಿ ಮಾಂಸಾಹಾರ ಮಹತ್ವದ ಪಾತ್ರ ವಹಿಸಿದೆ ಎನ್ನುತ್ತಾನೆ ಏಂಗೆಲ್ಸ್. ''ಮಾಂಸಾಹಾರದಲ್ಲಿ ಜೀವಿಯ ಶರೀರದ ರಾಸಾಯನಿಕ ಕ್ರಿಯೆಗಳಿಗೆ ಒದಗುವ ಮುಖ್ಯವಾದ ಮೂಲಸಾಮಗ್ರಿಗಳು ಸಿದ್ಧರೂಪದಲ್ಲಿ ದೊರೆಯುತ್ತವೆ. ಆಹಾರವು ಜೀರ್ಣವಾಗುವುದಕ್ಕೆ ತಗಲುವ ಕಾಲವನ್ನು ಮಾಂಸಾಹಾರ ಕಡಿಮೆ ಮಾಡಿತು. ಮಾನವನು ಮಾಂಸಾಹಾರಿ ಆದಾಗ ಅವನಿಗೆ ದೈಹಿಕ ಶಕ್ತಿ ಹೆಚ್ಚಿತು ಮತ್ತು ಸ್ವತಂತ್ರನಾಗಿ ವಿಕಾಸ ಹೊಂದಲು ಹೆಚ್ಚು ಅವಕಾಶ ಕಲ್ಪಿಸಿಕೊಟ್ಟಿತು. ಮಾಂಸಾಹಾರದ ಪ್ರಭಾವ ಬಹಳವಾಗಿ ಆದದ್ದು ಮೆದುಳಿನ ಮೇಲೆ. ಅದರ ಪಾಲನೆ ಮತ್ತು ಬೆಳವಣಿಗೆಗೆ ಬೇಕಾದ ಹೆಚ್ಚಿನ ಸತ್ವ ದೊರೆಯಿತು. ಅದರಿಂದಾಗಿ ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಹೆಚ್ಚು ಶೀಘ್ರವಾಗಿ ಮಾನವ ವೃದ್ಧಿಹೊಂದಲು ಸಾಧ್ಯವಾಯಿತು...'' ಮಾಂಸಾಹಾರ ನಿರ್ಣಾಯಕವಾಗಿ ಎರಡು ನವೀನ ಮುನ್ನಡೆಗಳಿಗೆ ಎಡೆ ಮಾಡಿಕೊಟ್ಟಿತು. ಒಂದು ಬೆಂಕಿಯ ಬಳಕೆ, ಇನ್ನೊಂದು ಪ್ರಾಣಿ ಸಾಕಾಣಿಕೆ. ಮೊದಲನೆಯದು ಜೀರ್ಣಕ್ರಿಯೆಯನ್ನು ಸುಗಮ ಮಾಡಿತು, ಎರಡನೆಯದು ಮಾಂಸವನ್ನು ಹೇರಳವಾಗಿ ದೊರೆಯುವಂತೆ ಮಾಡಿತು. ಆದ್ದರಿಂದ ಮಾನವ ಕೈಗೊಂಡ ಮೊದಲ ದುಡಿಮೆ ಎಂದರೆ ಮೀನುಗಾರಿಕೆ ಮತ್ತು ಬೇಟೆಗಾರಿಕೆ. ಪುರಾತನ ಕಾಲದ ವಾನರ – ನರನಾಗುವುದಕ್ಕೆ ಮಾಂಸಾಹಾರ ಒಂದು ಕಾರಣವಾಗಿರಬಹುದು.

ನಿಸರ್ಗದ ಬದಲಾವಣೆಗಳಿಗೆ ತಕ್ಕಂತೆ ರಕ್ಷಣೆ ಹೊಂದಿ ಹೇಗೆ ಜೀವಿಸಬೇಕೆಂಬುದನ್ನು ಅರಿತು, ದುಡಿಮೆಯ ಹೊಸ ವಿಧಾನಗಳಿಂದ ತನ್ನ ವೈಚಾರಿಕ ನಿಲುವಿನಿಂದ ಮಾನವ ಇತರ ಪ್ರಾಣಿಗಳಿಂದ ಭಿನ್ನವಾದನು. ಇದೆಲ್ಲ ಸಾಧ್ಯವಾದದ್ದು ಮೆದುಳಿನ ಬೆಳವಣಿಗೆ ಮತ್ತು ಕ್ರಿಯಾಶೀಲತೆಯಿಂದ ಎಂದಿದ್ದಾನೆ ಏಂಗೆಲ್ಸ್.

ಏಂಗೆಲ್ಸನ ಪ್ರಕಾರ ''ಪ್ರಾಣಿ ತನ್ನ ಪರಿಸರವನ್ನು ಉಪಯೋಗಿಸಿಕೊಳ್ಳುತ್ತದೆ ಮಾತ್ರ. ತನ್ನ ಇರುವಿಕೆಯಿಂದ ಬದಲಾವಣೆಗಳನ್ನುಂಟುಮಾಡುತ್ತದೆ. ಆದರೆ ಮಾನವ ತನ್ನನ್ನು ಬದಲಾಯಿಸಿಕೊಂಡು ಪ್ರಕೃತಿಯು ತನ್ನ ಉದ್ದೇಶ ಸಾಧನೆಗೆ ನೆರವಾಗುವಂತೆ ಮಾಡಿಕೊಳ್ಳುತ್ತಾನೆ ಅರ್ಥಾತ್ ಪ್ರಕೃತಿಯನ್ನು ಮಾನವನು ಸ್ವಾಧೀನಪಡಿಸಿಕೊಳ್ಳುತ್ತಾನೆ. ಮನುಷ್ಯನಿಗೂ ಇನ್ನಿತರ ಪ್ರಾಣಿಗಳಿಗೂ ಇರುವ ಅಂತಿಮ ಮತ್ತು ಮೂಲಭೂತ ವ್ಯತ್ಯಾಸ ಇದು. ಮತ್ತು ವ್ಯತ್ಯಾಸವನ್ನುಂಟುಮಾಡುವುದು ಸಹ ದುಡಿಮೆಯೇ.''

ಏಂಗೆಲ್ಸ್ ಹೇಳುವಂತೆ ಎಲ್ಲ ಉತ್ಪಾದನಾ ವಿಧಾನಗಳು ದುಡಿಮೆಯ ತತ್‌ಕ್ಷಣವಾದ ಹಾಗೂ ನೇರವಾಗಿ ಪ್ರಯೋಜನಕರವಾದ ಪರಿಣಾಮಗಳನ್ನು ಸಾಧಿಸುವ ಗುರಿಯನ್ನು ಹೊಂದಿವೆ. ಮುಂದೆ ತಮ್ಮ ಕಿರು ಹೊತ್ತಿಗೆಯಲ್ಲಿ ಏಂಗೆಲ್ಸ್ ಅವರು ಸಾಮೂಹಿಕ ಒಡೆತನವಿದ್ದ ಭೂಮಿಯ ಮೇಲಿನ ಹಿಡಿತ ಕ್ಷೀಣಿಸುತ್ತಾ ಬಂದು ಉತ್ಪಾದನಾ ವಿಧಾನ ಆಳುವ ವರ್ಗ ಶೋಷಿತ ವರ್ಗ ಎಂದು ವಿಭಜಿಸಿ ಎರಡು ವರ್ಗಗಳ ನಡುವೆ ವಿರೋಧವಾಗಿ ಬಂಡವಾಳಗಾರರು

೫೮ನೇ ಪುಟಕ್ಕೆ



**ಆಯ್ದ ವಚನಗಳು**

*ಸಂ : ಡಾ|| ಸಂಗಮೇಶ ಸವದತ್ತಿಮಠ*

*ಡಾ|| ಎಸ್. ಎಂ. ಹಿರೇಮಠ*

**ಪುಟ : ೧೪೪** **ಬೆಲೆ : ರೂ. ೫೦**

**ಪ್ರಸಾರಾಂಗ,** ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

ಈ ಪಠ್ಯಪುಸ್ತಕ 'ಸಾಹಿತ್ಯ ಸಂಕಲನ ಮಾಲೆ'ಯಲ್ಲಿ ಬಂದಿದ್ದು ವಿದ್ಯಾರ್ಥಿಗಳಿಗಷ್ಟೇ ಅಲ್ಲದೆ ವಚನ ಸಾಹಿತ್ಯದಲ್ಲಿ ಆಸಕ್ತಿ ಇರುವ ಎಲ್ಲರಿಗೂ ಉಪಯುಕ್ತವಾಗಿದೆ. ಇಪ್ಪತ್ತು ವಚನಕಾರರ ಪ್ರಾತಿನಿಧಿಕ ವಚನಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ವಚನಗಳ ಆಯ್ಕೆಯಲ್ಲಿ ಉತ್ತಮ ಗುಣಮಟ್ಟವಿದೆ. ಹೀಗಾಗಿ ವಚನ ಸಾಹಿತ್ಯದ ಓದಿಗೆ ಇದು ಒಂದು ಉತ್ತಮ ಪ್ರವೇಶಿಕೆಯಾಗಿದೆ. ಎಸ್. ಎಂ. ಹಿರೇಮಠ ಅವರು ವಚನ ಸಾಹಿತ್ಯದ ಬಗ್ಗೆ ಪ್ರಸ್ತಾವನೆಯನ್ನು ಬರೆದಿದ್ದು ಅಂತಹ ಹೊಸ ವಿಚಾರಗಳನ್ನು ಹೇಳದಿದ್ದರೂ ವಿದ್ಯಾರ್ಥಿಗಳಿಗೆ ಪರೀಕ್ಷೆಯ ದೃಷ್ಟಿಯಿಂದ ಉಪಯುಕ್ತವಾಗಿದೆ. ವಚನಕಾರರ ಸಂಕ್ಷಿಪ್ತ ಪರಿಚಯ, ಪಾರಿಭಾಷಿಕ ಪದಗಳ ವಿವರಣೆ, ಶಬ್ದಕೋಶ ಸಹ ಪಠ್ಯಪುಸ್ತಕಕ್ಕೆ ಸರಿಯಾದ ಚೌಕಟ್ಟನ್ನು ಒದಗಿಸಿವೆ. ಆದರೂ ಕೆಲವು ಸಂಕೀರ್ಣವಾದ ವಚನಗಳಿಗೆ ಟಿಪ್ಪಣಿ ಕೊಡಬಹುದಾಗಿತ್ತು. ಅಚ್ಚುಕಟ್ಟಾಗಿ ತಪ್ಪಿಲ್ಲದೆ ಪುಸ್ತಕ ಪ್ರಕಟವಾಗಿದ್ದು ಪಠ್ಯಪುಸ್ತಕದ 'ಮಾಮೂಲಿ ಚಹರೆ'ಯಿಂದ ದೂರವಾಗಿರುವುದು ಮೆಚ್ಚಿಗೆಯ ಅಂಶವಾಗಿದೆ.



**ಕುವೆಂಪು** – ಒಂದು ಪುನರನ್ವೇಷಣೆ

*ಸಂ : ಡಿ. ಎಸ್. ನಾಗಭೂಷಣ*

**ಪುಟ : ೩೬೪** **ಬೆಲೆ : ರೂ. ೧೫೦**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ ಬಳ್ಳಾರಿ - ೫೮೩ ೧೦೩

ಮುಖ್ಯ ಲೇಖಕರ ಬಗ್ಗೆ ಹೇಳಿದ್ದನ್ನೇ ಹೇಳುವ ಸಿದ್ಧ ಬರಹಗಳಿಗಿಂತ ಪುನರ್‌ಮೌಲ್ಯಕ್ಕೆ ಒಳಪಡಿಸುವ ಲೇಖನಗಳು ಸಾಹಿತ್ಯ ವಿಮರ್ಶೆಯ ದೃಷ್ಟಿಯಿಂದ ಆರೋಗ್ಯಕರ. ಕುವೆಂಪು ಅವರ ಬಗ್ಗೆ ಈ ಸಂಕಲನದಲ್ಲಿ ಮೂವತ್ತು ಲೇಖನಗಳಿದ್ದು ಬಹುಪಾಲು ಮೌಲಿಕವಾಗಿವೆ. ಸಂಪಾದಕರಾದ ಡಿ. ಎಸ್. ನಾಗಭೂಷಣ ಅವರ ಎರಡು ಬರಹಗಳು ಹಾಗೂ ಮುನ್ನುಡಿ ಕುವೆಂಪು ಅವರ ಕೃತಿಗಳ ವಿಚಾರಗಳ ಚರ್ಚೆಯ ಮುಂದುವರಿಕೆಗೆ ಸಹಾಯಕವಾಗಿವೆ.

ನವೋದಯದ ಸಂದರ್ಭದಲ್ಲಿ ಕುವೆಂಪುರವರನ್ನು ಆರಾಧಕ ಮನೋಭಾವದಿಂದ ವಿಮರ್ಶಿಸಿದವರೇ ಹೆಚ್ಚು. ಸದ್ಯದ ಸಂದರ್ಭದಲ್ಲಿ ಅವರಿಗೆ ಸಿಗಬೇಕಾದ ಸರಿಯಾದ ಮಾನ್ಯತೆ ದೊರೆಯಲಿಲ್ಲ. ಈಗ ಮತ್ತೆ ಬದಲಾದ ಸಾಂಸ್ಕೃತಿಕ ಸಂದರ್ಭದಲ್ಲಿ ಕುವೆಂಪು ಅವರ ಪ್ರಾಮುಖ್ಯತೆಯನ್ನು ಇಲ್ಲಿನ ಲೇಖನಗಳು ಚರ್ಚಿಸಿವೆ. ಕುವೆಂಪು ಅವರ ಬದುಕು-ಬರಹಗಳನ್ನು ಇಲ್ಲಿನ ಬರಹಗಳು ಬೇರೆ ಬೇರೆ ನೆಲೆಯಲ್ಲಿ ಗುರುತಿಸಿವೆ. ಕನ್ನಡ ವಿಮರ್ಶೆಯ ಸಂದರ್ಭದಲ್ಲಿ ಕುವೆಂಪು ಬಗ್ಗೆ ಬಂದ ಉತ್ತಮ ಸಂಕಲನಗಳಲ್ಲಿ ಇದೂ ಒಂದು.



**ಗ್ರಂಥ ಸಂಗಾತಿ** (೧೫೦ ಗ್ರಂಥಗಳ ಅವಲೋಕನ)

*ಸಂ : ಡಾ|| ಜಿ. ಎಂ. ಹೆಗಡೆ*

**ಪುಟ : ೪೬೦** **ಬೆಲೆ : ರೂ. ೩೦೦**

**ಶ್ರೀ ರಾಘವೇಂದ್ರ ಪ್ರಕಾಶನ,** ಅಂಕೋಲಾ, ಉ.ಕನ್ನಡ - ೫೮೧ ೩೧೪

ಅಂಕೋಲೆಯ ರಾಘವೇಂದ್ರ ಪ್ರಕಾಶನವು ವಿಷ್ಣುನಾಯಕರ ಮಾರ್ಗದರ್ಶನದಲ್ಲಿ ಮೂವತ್ತು ವರ್ಷಗಳ ಅವಧಿಯಲ್ಲಿ ನೂರೈವತ್ತು ಪುಸ್ತಕಗಳನ್ನು ಪ್ರಕಟಿಸಿದೆ. ಆ ಎಲ್ಲಾ ಕೃತಿಗಳ ಅವಲೋಕನ ಗ್ರಂಥ 'ಗ್ರಂಥ ಸಂಗಾತಿ'. ಸಂಪಾದಕರಾದ ಜಿ. ಎಂ. ಹೆಗಡೆಯವರು ಪ್ರಕಾಶನದ ಕೃತಿಗಳನ್ನು ಸಾಹಿತ್ಯ ಪ್ರಕಾರಗಳ ಹಿನ್ನೆಲೆಯಲ್ಲಿ ರೂಪಿಸಿ ಅವುಗಳ ಸಮೀಕ್ಷೆಯ ಕೃತಿಯನ್ನು ವ್ಯವಸ್ಥಿತವಾಗಿ ತಂದಿದ್ದಾರೆ. ಇದರಿಂದ ಒಂದು ಪ್ರಕಾಶನ ಸಂಸ್ಥೆ ಬೆಳೆದುಬಂದ ಬಗೆಯನ್ನು ಮತ್ತು ಅದರ ಸ್ವರೂಪವನ್ನು ಗುರುತಿಸಬಹುದಾಗಿದೆ. ಇಲ್ಲಿನ ಬಹುಪಾಲು ಲೇಖಕರು ಉತ್ತರ ಕನ್ನಡದವರು ಎಂಬ ಅಂಶ ಎದ್ದು ಕಾಣುತ್ತದೆ. ಗೌರೀಶ ಕಾಯ್ಕಿಣಿಯವರ ಸಮಗ್ರ ಸಾಹಿತ್ಯವನ್ನು ಹತ್ತು ಸಂಪುಟಗಳಲ್ಲಿ ಪ್ರಕಾಶನ ಸಂಸ್ಥೆ ತಂದಿದೆ. ಪ್ರಕಾಶನದ ಪುಸ್ತಕಗಳ ದಾಖಲೆಯ ಮಾಹಿತಿ ಉಪಯುಕ್ತವಾದರೂ ಅವುಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸುವುದಕ್ಕಿಂತ ಕಂಪ್ಯೂಟರ್‌ನಲ್ಲಿ ಅಳವಡಿಸುವುದು ಹೆಚ್ಚು ಸೂಕ್ತ. ಈ ಮಾತು ಇಂತಹ ಹಲವು ಪುಸ್ತಕಗಳಿಗೆ ಅನ್ವಯಿಸುತ್ತದೆ. ಈ ಕೃತಿಯಲ್ಲಿ ಕೆಲವು ಲೇಖನಗಳು ಗಂಭೀರ ವಿಮರ್ಶೆ ಆಗಿದ್ದರೆ ಮತ್ತೆ ಕೆಲವು ಪರಿಚಯಾತ್ಮಕವಾಗಿವೆ. ಪತ್ರಿಕೆಯಲ್ಲಿ ಬಂದ ಪುಸ್ತಕ ವಿಮರ್ಶೆಯ ಕೆಲವು ಬರಹಗಳಿವೆ.



**ಚಿತ್ತಾರ** (ಕವನ ಸಂಕಲನ) ಸಬಿಹಾ ಭೂಮಿಗೌಡ

**ಪುಟ : ೭೨** **ಬೆಲೆ : ರೂ. ೪೦**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ ಗಾಂಧಿನಗರ, ಬಳ್ಳಾರಿ - ೫೮೩ ೧೦೩

ಮಹಿಳೆಯರು ರಚಿಸುತ್ತಿರುವ ಸಾಹಿತ್ಯದಲ್ಲಿ ಇಂದು ಕಾವ್ಯಕ್ಕೆ ಸಾಕಷ್ಟು ಪ್ರಾಮುಖ್ಯತೆ ಕಂಡುಬಂದಿದೆ. ಸ್ತ್ರೀವಾದಿ ಚಿಂತನೆಗಳ ಅಬ್ಬರದ ಸಾಹಿತ್ಯದ ಸೃಷ್ಟಿ ಒಂದು ಕಡೆ ಕಂಡುಬಂದರೆ ಮತ್ತೆ ಕೆಲವು ಲೇಖಕಿಯರು ತಮ್ಮದೇ ಆದ ವಿಶಿಷ್ಟ ಅನುಭವಗಳನ್ನು ಸೂಕ್ಷ್ಮವಾಗಿ ಚಿತ್ರಿಸಿರುವುದನ್ನು ಕಾಣಬಹುದು. ಈ ಸಾಲಿನಲ್ಲಿ ಸಬಿಹಾ ಭೂಮಿಗೌಡ ಸೇರುತ್ತಾರೆ. ಈ ಕೃತಿಗೆ ವೈದೇಹಿಯವರ ಪತ್ರರೂಪದ ಮುನ್ನುಡಿ ಇದೆ.

ಪುರುಷ ಸಮಾಜದಿಂದ ಸ್ತ್ರೀಯರಿಗೆ ಆದ ಅನ್ಯಾಯಗಳನ್ನು ಕೆಲವು ಕೃತಿಗಳು ದಾಖಲಿಸಿದರೆ ಮತ್ತೆ ಕೆಲವು ಕೃತಿಗಳು ಜನಪ್ರಿಯವಾದ ಸ್ತ್ರೀಪರ ನಂಬಿಕೆಗಳನ್ನು ಪ್ರಕಟಿಸುತ್ತವೆ. ಈ ಎರಡೂ ಅತಿಗಳಲ್ಲದೆ ಸಬಿಹಾ ಅವರ ಕವನಗಳು ಹೆಣ್ಣಿನ ಅಂತರಂಗವನ್ನು ಸಮರ್ಥವಾಗಿ ತಿಳಿಸುತ್ತವೆ. 'ಹೆಣ್ಣುತನ'ದ ವಿಶಿಷ್ಟತೆಯನ್ನು ಬೆರಗಿನಿಂದ 'ಅಡುಗೆ', 'ಲಕ್ಷಣರೇಖೆಗಳು' ಅಂತಹ ಕವನಗಳು ಸಮರ್ಥವಾಗಿ ತಿಳಿಸುತ್ತವೆ. ಕಾವ್ಯದ ಶಿಲ್ಪದ ದೃಷ್ಟಿಯಿಂದ, ರೂಪಕದ ಅಭಾವದಿಂದ ಕೆಲವು ಕವನಗಳು ಗದ್ಯದ ಮಟ್ಟದಲ್ಲಿಯೇ ನಿಲ್ಲುತ್ತವೆ. ಹಲವು ಉತ್ತಮ ಕವನಗಳಿವೆ.



**ಕತ್ತಲೂರಿನ ಬೆಳಕು**

*ಸಂ : ಎ. ಎಸ್. ಮಕಾನದಾರ, ಎಸ್. ವ್ಹಿ. ಕಮ್ಮಾರ*

**ಪುಟ : ೧೬೩** **ಬೆಲೆ : ರೂ . ೧೦೦**

**ನಿರಂತರ ಪ್ರಕಾಶನ,** ಗಜೇಂದ್ರಗಡ - ೫೮೨ ೧೧೪

ಹದಿನೇಳು ಸಣ್ಣಕತೆಗಳ ಸಂಕಲನ. ಸಂಪಾದಕರು 'ಕರ್ನಾಟಕದ ಪ್ರಾತಿನಿಧಿಕ ಕಥಾ ಸಂಪುಟ' ಎಂದು ಘೋಷಿಸಿಕೊಳ್ಳುವ ಅವಶ್ಯಕತೆಯಿರಲಿಲ್ಲ. ಏಕೆಂದರೆ ಯಾವುದೇ ಸಂಕಲನ ಸಂಪಾದಕರ ವೈಯಕ್ತಿಕ ಅಭಿರುಚಿಯ ಹಿನ್ನೆಲೆಯಲ್ಲಿ ರೂಪಿತವಾಗಿರುವುದರಿಂದ ಎಲ್ಲ ದೃಷ್ಟಿಯಲ್ಲಿ ಪ್ರಾತಿನಿಧಿಕತೆ ಸಾಧ್ಯವಿಲ್ಲ. ಪರಿವಿಡಿಯಲ್ಲಿ ಕತೆಗಳ ಹೆಸರಿನ ಜೊತೆಯಲ್ಲಿ ಲೇಖಕರ ಹೆಸರು ಇರಬೇಕಿತ್ತು. ಕುಂ. ವೀರಭದ್ರಪ್ಪ, ಅಮರೇಶ ನುಗಡೋಣಿ ಅಂತಹ ಶ್ರೇಷ್ಠ ಕತೆಗಾರರ ಕತೆಗಳನ್ನು ಈ ಸಂಕಲನ ಒಳಗೊಂಡಿದೆ. ದಲಿತ-ಬಂಡಾಯ ಚಳುವಳಿಯ ಆಶಯಗಳನ್ನು, ಸ್ತ್ರೀವಾದಿ ದೃಷ್ಟಿಕೋನಗಳನ್ನು ಕೆಲವು ಕತೆಗಳಲ್ಲಿ ಗುರುತಿಸಬಹುದು. ಐದು ಜನ ಮುಸ್ಲಿಂ ಲೇಖಕರ ಕತೆಗಳನ್ನು ಈ ಕೃತಿ ಒಳಗೊಂಡಿರುವುದು ಗಮನಾರ್ಹ. ಕಲಾತ್ಮಕ ದೃಷ್ಟಿಯಿಂದ ಅನುಭವಗಳ ಶೋಧನೆಯ ಮೂಲಕ ಕೆಲವು ಕತೆಗಳು ಉತ್ತಮ ಕತೆಗಳೆನ್ನಿಸಿಕೊಂಡರೆ ಮತ್ತೆ ಕೆಲವು ಕತೆಗಳು ಸರಳವಾದ ಚಿಂತನೆಗಳ ವರದಿಯ ಮಟ್ಟದಲ್ಲಿಯೇ ನಿಲ್ಲುತ್ತವೆ. ಅನಿತಾ ಹುಳಿಯಾರ್‌ರವರ 'ಉಂಗುರ' ಕತೆ ವಿಭಿನ್ನವಾಗಿ ಗಮನ ಸೆಳೆಯುತ್ತದೆ. ಇಂತಹ ಸಂಕಲನಗಳ ಪ್ರಕಟಣೆ ಸ್ವಾಗತಾರ್ಹ.



**ಹದ್ದು ಮತ್ತು ಇತರ ಪ್ರಬಂಧಗಳು**

*ಪ್ರೊ|| ಎಚ್. ಜಿ. ಸಣ್ಣಗುಡ್ಡಯ್ಯ*

**ಪುಟ : ೧೩೫** **ಬೆಲೆ : ರೂ. ೭೫**

**ಅಕ್ಷಯ ಪ್ರಕಾಶನ,** ತುಮಕೂರು

ನವೋದಯ ಸಾಹಿತ್ಯದ ಸಂದರ್ಭದಲ್ಲಿ ಪ್ರಮುಖ ಸಾಹಿತ್ಯ ಪ್ರಕಾರವಾಗಿದ್ದ ಲಲಿತ ಪ್ರಬಂಧ ನವ್ಯದ ಸಂದರ್ಭದಲ್ಲಿ ಹಿಂದಕ್ಕೆ ಸರಿದಿತ್ತು. ಆದರೆ ಇತ್ತೀಚಿನ ವರ್ಷಗಳಲ್ಲಿ ಕೆ. ಸತ್ಯನಾರಾಯಣ, ಚಂದ್ರಶೇಖರ ಆಲೂರು ಅಂತಹವರು ಲಲಿತ ಪ್ರಬಂಧಕ್ಕೆ ಮತ್ತೆ ಪ್ರಾಮುಖ್ಯತೆಯನ್ನು ತಂದುಕೊಟ್ಟಿದ್ದಾರೆ. ಅಂತಹ ಪಟ್ಟಿಯಲ್ಲಿ ಎಚ್. ಜಿ. ಸಣ್ಣಗುಡ್ಡಯ್ಯ ಅವರೂ ಸೇರುತ್ತಾರೆ. ಹದ್ದು ಮತ್ತು ಇತರ ಪ್ರಬಂಧಗಳು ಪರಿಷ್ಕೃತ ರೂಪದಲ್ಲಿ ೨೦೦೪ರಲ್ಲಿ ಬಂದಿದೆ. ಲಲಿತ ಪ್ರಬಂಧಕ್ಕೆ ನಿರ್ದಿಷ್ಟ ಬಂಧ ಇರಬೇಕೆಂದು ಖಚಿತವಾಗಿ ಹೇಳಲು ಆಗದಿದ್ದರೂ ಅದು ಕಲಾಕೃತಿಯಾಗಿ ಮೂಡಿಬರುವಲ್ಲಿ ಉತ್ತಮವಾದ ಗದ್ಯಶಿಲ್ಪ ಬೇಕಾಗುತ್ತದೆ. ಸಣ್ಣಗುಡ್ಡಯ್ಯ ಅವರ ಪ್ರಬಂಧಗಳಲ್ಲಿ ಇಂತಹ ನಿರ್ದಿಷ್ಟ ಆಕೃತಿ ಕಾಣುವುದಿಲ್ಲ. ಭಾಷಣದ ಧಾಟಿಯಲ್ಲಿ, ಹರಟೆಯ ಬಗೆಯಲ್ಲಿ, ವೈಚಾರಿಕ ಪ್ರಬಂಧದ ರೀತಿಯಲ್ಲಿ ಇಲ್ಲಿನ ಪ್ರಬಂಧಗಳು ವ್ಯಕ್ತವಾಗಿವೆ. ಲೇಖಕರ ಮಾನವೀಯ ಉದಾರ ಧೋರಣೆ, ಪ್ರಗತಿಶೀಲ ಮನೋಭಾವ, ಅಧ್ಯಯನಶೀಲತೆ, ವ್ಯಕ್ತಿ-ಸಮಾಜ ಸಂತೋಷವಾಗಿರಬೇಕೆಂಬ ಹಂಬಲ ಪ್ರಬಂಧಗಳು ಓದನ್ನು ಆಪ್ತವಾಗಿಸುತ್ತವೆ.

**ಎಚ್ಚೆಸ್ವೆಮ್**





# ಮಾಂಸಾಹಾರ ವರ್ಜ್ಯವೆ?

**ಡಾ॥ ವೆಂಕಟಯ್ಯ ಅಪ್ಪಗೆರೆ**

**ಭಾವನಾತ್ಮಕವಾಗಿ ಮಾಂಸಾಹಾರವನ್ನು ವರ್ಜಿಸಬೇಕು; ಸಸ್ಯಾಹಾರವನ್ನಷ್ಟೇ ಜಾಗತಿಕವಾಗಿ ಎಲ್ಲರೂ ಅಳವಡಿಸಿಕೊಳ್ಳಬೇಕು; ಸಸ್ಯಾಹಾರವೊಂದೇ ಶ್ರೇಷ್ಠ; ಅದರಿಂದ ಆರೋಗ್ಯ, ಆಯುಷ್ಯ ವೃದ್ಧಿಸುತ್ತದೆ. ಮಾಂಸಾಹಾರ ಸೇವನೆಯಿಂದ ಆರೋಗ್ಯ ಕ್ಷೀಣಿಸಿ ರೋಗಪೀಡಿತರಾಗುವ ಸಂಭವ ಹೆಚ್ಚು ಎಂದೆಲ್ಲಾ ಹಲವರು ಪ್ರಚುರ ಪಡಿಸುತ್ತಿದ್ದಾರೆ. ಈ ಕೂಗು ನಮ್ಮ ದೇಶದಲ್ಲಿ ವ್ಯಾಪಕವಾಗಿ ಕೇಳಿಬರುತ್ತಿದೆ. ಇದು ಕೇವಲ ಸೀಮಿತವಾಗಿ ಯೋಚನೆ ಮಾಡುವ ಕೆಲವರ ವ್ಯವಸ್ಥಿತ ಪ್ರಚಾರ.**

ಭಾವನಾತ್ಮಕವಾಗಿ ಮಾಂಸಾಹಾರವನ್ನು ವರ್ಜಿಸಬೇಕು; ಸಸ್ಯಾಹಾರವನ್ನಷ್ಟೇ ಜಾಗತಿಕವಾಗಿ ಎಲ್ಲರೂ ಅಳವಡಿಸಿಕೊಳ್ಳಬೇಕು; ಸಸ್ಯಾಹಾರವೊಂದೇ ಶ್ರೇಷ್ಠ; ಅದರಿಂದ ಆರೋಗ್ಯ, ಆಯುಷ್ಯ ವೃದ್ಧಿಸುತ್ತದೆ. ಮಾಂಸಾಹಾರ ಸೇವನೆಯಿಂದ ಆರೋಗ್ಯ ಕ್ಷೀಣಿಸಿ ರೋಗಪೀಡಿತರಾಗುವ ಸಂಭವ ಹೆಚ್ಚು ಎಂದೆಲ್ಲಾ ಹಲವರು ಪ್ರಚುರಪಡಿಸುತ್ತಿದ್ದಾರೆ. ಈ ಕೂಗು ನಮ್ಮ ದೇಶದಲ್ಲಿ ವ್ಯಾಪಕವಾಗಿ ಕೇಳಿಬರುತ್ತಿದೆ. ಇದು ಕೇವಲ ಸೀಮಿತವಾಗಿ ಯೋಚನೆ ಮಾಡುವ ಕೆಲವರ ವ್ಯವಸ್ಥಿತ ಪ್ರಚಾರ. ನಮ್ಮ ದೇಶದಲ್ಲಿ ಇಂಥವರು ಇಲ್ಲಿನವರಿಗೆ ಹೇಳಿ ತಲೆಕೆಡಿಸುವುದಲ್ಲದೆ ಹೊರದೇಶದವರಿಗೂ ವೈಭವೀಕರಿಸಿ ಹೇಳಿ ದಿಕ್ಕು ತಪ್ಪಿಸುತ್ತಿದ್ದಾರೆ. ಮತೀಯ ಕಲಹ ತರುತ್ತಿದ್ದಾರೆ. ಆ ಮೂಲಕ ತಮ್ಮ ಖಾಸಗಿ ನಂಬಿಕೆಗಳನ್ನು ಮತ್ತು ಧರ್ಮವನ್ನು ಸಾರ್ವಜನಿಕವಾಗಿ ಹೇರುವ ಹುನ್ನಾರ ಇದು. ಇದು ಎಷ್ಟು ಸಾಧು, ವೈಜ್ಞಾನಿಕವಾಗಿ ಸಿಂಧುವೆ, ವಿವೇಚಿಸೋಣ.

ವಿಶ್ವಸಂಸ್ಥೆಯ ಅಧೀನ ಸಂಸ್ಥೆಯಾದ ವಿಶ್ವ ಆಹಾರ ಸಂಸ್ಥೆ (ವರ್ಲ್ಡ್ ಫುಡ್ ಆರ್ಗನೈಸೇಶನ್) ೧೯೯೦ರಲ್ಲಿ ಈ ಬಗ್ಗೆ ಜಾಗತಿಕಮಟ್ಟದ ಸರ್ವೇಕ್ಷಣೆ ಜರುಗಿಸಿದೆ. ಆ ಸಮೀಕ್ಷೆಯಲ್ಲಿ ಕಂಡುಬಂದ ಒಂದು ಖಚಿತವಾದ ಅಂಶವೆಂದರೆ ಜಾಗತಿಕವಾಗಿ ಎಲ್ಲರೂ ಮಾಂಸಾಹಾರ ತೊರೆದು ಸಸ್ಯಾಹಾರವೊಂದನ್ನೇ ಸೇವಿಸಿದರೆ, ಆ ರೀತಿ ಕಡ್ಡಾಯಗೊಳಿಸಿದರೆ ಒಂದು ವರ್ಷದಲ್ಲೇ ವಿಶ್ವದ ಜನಸಂಖ್ಯೆಯ ಶೇ.೪೦ರಷ್ಟು ಮಂದಿ ಆಹಾರದ ಕೊರತೆಯಿಂದ ಅನಿವಾರ್ಯವಾಗಿ ಅಸು ನೀಗುತ್ತಾರೆ. ಅದರಲ್ಲೂ ಮಾಲ್ಡೀವ್ಸ್‌ನಂತಹ ದ್ವೀಪ ಸಮೂಹಗಳು ಮತ್ತು ಸಮುದ್ರ ತೀರದ ಪ್ರದೇಶದ ಜನವೆಲ್ಲಾ ಈ ಪ್ರಕ್ಷುಬ್ಧತೆಗೆ ಈಡಾಗಿ ನಾಮಾವಶೇಷವಾಗುತ್ತದೆ. ಕಾರಣ ವಿಶ್ವದ ಶೇ.೪೦ರಷ್ಟು ಜನಸಂಖ್ಯೆ ಸಾಗರಜೀವಿಯ ಮಾಂಸಾಹಾರದಿಂದಲೇ ಬದುಕುತ್ತಿರುವುದು. ಇದಲ್ಲದೆ ಒಳನಾಡು ಪ್ರದೇಶದಲ್ಲಿ ಉಳಿದ ಶೇ.೨೦ರಷ್ಟು ಜನರು ಇತರೆ ಮಾಂಸಾಹಾರದಿಂದ ಬದುಕುತ್ತಿದ್ದಾರೆ. ಇನ್ನುಳಿದ ಶೇ.೨೦ರಷ್ಟು ಮಂದಿ ದ್ವಿ ಆಹಾರಿಗಳಾಗಿ ಬದುಕುತ್ತಿದ್ದಾರೆ. ಉಳಿದಂತೆ ವಿಶ್ವದ ಶೇ.೨೦ರಷ್ಟು ಮಂದಿ ಮಾತ್ರ ಶುದ್ಧ ಸಸ್ಯಾಹಾರದಿಂದಷ್ಟೇ ಬದುಕುತ್ತಿರುವುದು. ಅಂದರೆ ಈಗಿನ ಸಸ್ಯಾಹಾರದ ಒಟ್ಟಾರೆ ಉತ್ಪನ್ನ ನಮ್ಮ ವಿಶ್ವದ ಶೇ.೨೦ರಷ್ಟು ಜನರಿಗಷ್ಟೇ ಸಾಕಾಗುವುದು. ಉಳಿದವರಿಗೆ (ಶೇ.೮೦ರಷ್ಟು) ಯಾವುದೇ ಮಾರ್ಗೋಪಾಯ ಯೋಜನೆಗಳಿಂದ ಸಂಪೂರ್ಣ ಸಸ್ಯಾಹಾರವನ್ನು ಉತ್ಪಾದಿಸುವುದಾಗಲೀ ಒದಗಿಸುವುದಾಗಲೀ ಅಸಲಿ ಸಾಧ್ಯವಾಗದ ಮಾತು. ಮೇಲಾಗಿ ಸಸ್ಯಾಹಾರವನ್ನು ಮಾತ್ರ ಬಳಸಬೇಕಾದರೆ, ಹೆಚ್ಚಿನ ಪ್ರಮಾಣದಲ್ಲಿ ಸೇವಿಸಬೇಕು. ಅದೇ ಮಾಂಸಾಹಾರವನ್ನು ಸ್ವಲ್ಪ ಪ್ರಮಾಣದಲ್ಲಿ ಸೇವಿಸಿದರೆ ಸಾಕು. ಅದನ್ನು ಕೆಳಗಿನ ವಾಸ್ತವ ವಿದ್ಯಮಾನದಿಂದ ಪ್ರಮಾಣಿಸಬಹುದು.

ಸಸ್ಯಾಹಾರಿಗಳಾದ ಹಸು, ಎಮ್ಮೆ, ಮೊಲ, ಆನೆ ಇತ್ಯಾದಿಗಳು ದಿನಪೂರ್ತಿ ತಿನ್ನುತ್ತಲೇ ಇರುತ್ತವೆ. ಒಂದು ಹೊತ್ತು ಹುಲ್ಲು ಮೇಯಲಿಲ್ಲವೆಂದರೆ 'ಅಂಬಾ' ಎನ್ನುತ್ತ ಹಸು, ಎಮ್ಮೆ, ಕುರಿ-ಆಡುಗಳಾಗಲಿ ಅರಚುತ್ತವೆ. ಒಂದೆರಡು ದಿನ ಏನನ್ನೂ ಮೇಯಿಸದಿದ್ದರೆ ಸತ್ತೂ ಹೋಗುತ್ತವೆ. ಜೊತೆಗೇ ಹೊರೆಗಟ್ಟಲೆ ಮೇವು ಹಾಕಬೇಕು. ಯಥೇಚ್ಛ ನೀರು ಕುಡಿಸಬೇಕು. ನೀರನ್ನೂ ಹೀರುತ್ತವೆ. ಆದರೆ ಮಾಂಸಾಹಾರಿ ಪ್ರಾಣಿಗಳು ಒಮ್ಮೆ ಬೇಟೆಯಾಡಿ ತಿಂದರೆ ತಿಂಗಳಾನುಗಟ್ಟಲೆ ಏನೂ ತಿನ್ನದೇ ಬದುಕಬಲ್ಲವು. ಹುಲಿ, ಸಿಂಹ, ಸರೀಸೃಪಗಳು ೨-೩ ತಿಂಗಳು ಏನನ್ನೂ ತಿನ್ನದೆ, ನೀರನ್ನು ನೆಕ್ಕದೆ ಬದುಕಬಲ್ಲವು. ಅದರಲ್ಲೂ ತಿಗಣೆ ಜಾತಿಯ ರಕ್ತಹೀರುವ ಪ್ರಾಣಿಗಳು ಒಮ್ಮೆ ರಕ್ತ ಹೀರಿದರೆ (ಒಂದು ಡಬ್ಬಿಯಲ್ಲಿಟ್ಟು ನೋಡಿ) ತಿಂಗಳ ನಂತರ ತೆಗೆದರೂ ಬದುಕಿರುತ್ತವೆ. ಅದೇ ಜಾತಿಯ ರಕ್ತ ಹೀರದೆ ಇರುವ ಪ್ರಾಣಿ-ಜಂತುಗಳು (ಸಸ್ಯಾಹಾರಿ ವರ್ಗ) ಒಂದು ದಿನದಲ್ಲೇ ಸಾಯುತ್ತವೆ. ಮಾಂಸಾಹಾರಿಗಳು ಮಿತಾಹಾರಿಗಳು ಮತ್ತು ನೀರನ್ನು ಅಲ್ಪ ಪ್ರಮಾಣದಲ್ಲಿ ಸೇವಿಸುತ್ತವೆ. ಅಂದರೆ ಕೇವಲ ನೆಕ್ಕುತ್ತವೆ. ಒಮ್ಮೆ ಸೇವಿಸಿದ ಆಹಾರ ದೊರೆತರೆ ಮುಂದೆ ಹಸಿವಾಗುವವರೆಗೆ ಬೇರೆ ಆಹಾರಕ್ಕಾಗಿ ಹಾತೊರೆಯುವುದಿಲ್ಲ. ಪದೇ ಪದೇ ನೀರು ಕುಡಿಯುವುದಿಲ್ಲ. ಅಷ್ಟೇ ಏಕೆ, ದ್ವಿಹಾರಿಗಳಾದ ಮನುಷ್ಯ ಒಮ್ಮೆ ಮಾಂಸಾಹಾರ ಸೇವಿಸಿದರೆ ಮುಂದಿನ ಹೊತ್ತಿನ ಆಹಾರ ಆತನಿಗೆ ಬೇಕಾಗಿಲ್ಲ. ಇಲ್ಲವೆ ಕೇವಲ ಲಘು ಆಹಾರ ಸೇವಿಸುತ್ತಾನೆ. ಆದರೆ ಬರೀ ಸಸ್ಯಾಹಾರ ಸೇವಿಸಿದರೆ ಬೇಗ ಹಸಿವು ಕಾಡುತ್ತದೆ. ಇದರಿಂದ ವ್ಯಕ್ತವಾಗುವುದೇನೆಂದರೆ ಮಾಂಸಾಹಾರ 'ಪ್ರಬಲ ಆಹಾರ', ಅದನ್ನು ಅಲ್ಲಗಳೆಯಲಾಗದು. ಹೆಚ್ಚಿನ ಸತ್ವಯುತ, ಪೋಷಕಾಂಶಗಳಿಂದ ಕೂಡಿದ ಆಹಾರ ಹೆಚ್ಚಿನ ಶಕ್ತಿದಾಯಕ. ಇದು ಕಟು ವಾಸ್ತವ. ಮಾಂಸಾಹಾರ ತಿಂದ ಮೈಗೂ(ದೇಹದಾರ್ಢ್ಯ), ಬರೀ ಸಸ್ಯಾಹಾರ ತಿಂದ ಮೈಗೂ ತುಲನಾತ್ಮಕ ನೋಡಿದರೆ ಮಾಂಸಾಹಾರಿಗಳು ಕಟ್ಟುಮಸ್ತಾಗಿ ಹೆಚ್ಚು ದೃಢಕಾಯರಾಗಿರುತ್ತಾರೆ; ಹೆಚ್ಚು ಶಕ್ತಿಶಾಲಿಗಳಾಗಿರುತ್ತಾರೆ. ಉದಾಹರಣೆಗೆ, ಪರ್ಸಿಯನ್, ಕಕೇಷಿಯನ್, ಅರೇಬಿಯನ್ ಜನಾಂಗ.

ಕೇವಲ ಕರುಳಿನ ಉದ್ದ ಹೇಳುತ್ತಾ, ಹಲ್ಲಿನ ರಚನೆಯನ್ನು ಉದಾಹರಿಸುತ್ತಾ ಮಾನವ ಮೂಲತಃ ಸಸ್ಯಾಹಾರಿ ಎನ್ನುವುದು ತಪ್ಪು. ಅದು ಖಾಸಗಿ ನಂಬಿಕೆ, ಭಾವನಾತ್ಮಕ ಹಾಗೂ ಧಾರ್ಮಿಕ ಹಿನ್ನೆಲೆಯ ಪೂರ್ವಗ್ರಹ ಭಾವನೆ.

ಆದಿಮಾನವ ಮೀನು ಇತರೆ ಪ್ರಾಣಿಗಳನ್ನು ಹಿಡಿದು ಇಲ್ಲವೆ ಬೇಟೆಯಾಡಿ ಬದುಕುತ್ತಿದ್ದ. ಇದು ದೊರೆತಿರುವ ಗುಹಾಚಿತ್ರಗಳು, ಶಿಲಾರೇಖೆಗಳು ಮತ್ತು ಪಳೆಯುಳಿಕೆಗಳಿಂದ ವೇದ್ಯವಾಗುತ್ತದೆ. ತದನಂತರದಲ್ಲಿ ಗೆಡ್ಡೆ-ಗೆಣಸುಗಳನ್ನು ಹೆಕ್ಕಿ ತಿನ್ನಲು ಪ್ರಾರಂಭಿಸಿದ. ಅಂದರೆ ನಾವು ಮೂಲತಃ ಮಾಂಸಾಹಾರಿಗಳು ನಂತರ ಸಸ್ಯಾಹಾರಿಗಳಾಗಿ

ಮಾರ್ಪಟ್ಟು ಈಗ ದ್ವಿ ಆಹಾರಿಗಳಾಗಿದ್ದೇವೆ. ಒಂದು ಪಕ್ಷ ನಮ್ಮ ಅಂಗರಚನೆ ಸಸ್ಯಾಹಾರಕ್ಕಷ್ಟೇ ಸೀಮಿತವಾಗಿದ್ದರೆ ಯಾವುದೇ ಸಂದರ್ಭದಲ್ಲಿ ಮಾಂಸಾಹಾರ ಸೇವಿಸಲು ಅಸಾಧ್ಯವಾಗುತ್ತಿತ್ತು. ಉದಾಹರಣೆಗೆ, ಯಾವುದೇ ಪ್ರಯತ್ನದಲ್ಲಿ ನಾವು ಹಸು-ಎಮ್ಮೆ ಅಥವಾ ಮೊಲ, ಜಿಂಕೆಗಳಿಗೆ ಮಾಂಸದ ತುಕುಡವನ್ನು ತಿನ್ನಿಸಲಾಗದು. ಒಂದು ಪಕ್ಷ ಒತ್ತಾಯದಿಂದ ತುರುಕಿದರೂ ಅವು ಅವುಗಳನ್ನು ದಕ್ಕಿಸಿಕೊಳ್ಳಲಾಗದೆ ಖಂಡಿತ ವಾಂತಿ ಮಾಡಿಕೊಳ್ಳುತ್ತವೆ. ಏಕೆ ? ಅವುಗಳ ಅಂಗ ರಚನೆ ಕೇವಲ ಸಸ್ಯಾಹಾರಕ್ಕೆ ಹೊಂದಿಕೊಂಡು ರೂಪುಗೊಂಡಿವೆ. ಅವು ಮೂಲತಃ ಸಸ್ಯಾಹಾರಿಗಳು. ಅವು ಯಾವುದೇ ಕಾರಣದಿಂದ ಸಸ್ಯಾಹಾರ ಸ್ವಭಾವದಿಂದ ಮಾಂಸಾಹಾರಕ್ಕೆ ಪರಿವರ್ತನೆ ಹೊಂದುವುದಿಲ್ಲ. ಆದರೆ ಮಾಂಸಾಹಾರಿ ಪ್ರಾಣಿಗಳು ಸಸ್ಯಾಹಾರವನ್ನು ದಕ್ಕಿಸಿಕೊಳ್ಳಬಲ್ಲವು. ಕೆಲವುಗಳು ದ್ವಿಹಾರಿಗಳು ಇನ್ನು ಕೆಲವು ತುಸುವೇ ತಿನ್ನಬಲ್ಲವು. ಸಸ್ಯಾಹಾರಿ ಪ್ರಾಣಿಗಳಿಗೆ ಜಠರದಲ್ಲಿ ಎರಡು ಕೋಣೆಗಳು ಇರುತ್ತವೆ. ಮಾಂಸಾಹಾರಿಗಳಿಗಿಲ್ಲ. ಮಾನವರಲ್ಲೂ ಆ ಕೋಣೆಗಳಿಲ್ಲ, ಇನ್ನು ಕರುಳಿನ ಉದ್ದ, ಹಲ್ಲಿನ ರಚನೆಯಲ್ಲಿ ಮಾಂಸಾಹಾರದಿಂದ ದ್ವಿಹಾರಿಗಳಾಗಿರುವ ಪರಿವರ್ತನೆಯಿಂದ ಆಗಿರುವ ಮಾರ್ಪಾಡು ಎಂದರೆ ತಪ್ಪಾಗಲಾರದು. ಇದು ಡಾರ್ವಿನ್‌ನ ವಿಕಾಸ ಸಿದ್ಧಾಂತವನ್ನು ಅನ್ವಯಿಸಿದೆ. ಪೂರ್ವದಲ್ಲಿ ಮಾನವನಿಗೆ ಕೋರೆಹಲ್ಲುಗಳು ಮತ್ತು ಜಠರದ ಕರುಳಿನ ಉದ್ದ ಇವೆಲ್ಲಾ ಮಾಂಸಾಹಾರಕ್ಕೆ ತಕ್ಕಂತೆಯೇ ಇದ್ದವು. ಕಾಲಾನಂತರ ಮಾರ್ಪಾಟಾಗಿದೆ. ಅದರ ಅರ್ಥ ನಾವು ಮೂಲತಃ ಸಸ್ಯಾಹಾರಿಗಳಲ್ಲ. ಮೂಲತಃ ಮಾಂಸಾಹಾರಿಗಳು ಈಗಲೂ ಅಮೆಜಾನ್, ಅಂಡಮಾನ್‌ನಂತಹ ಅರಣ್ಯವಾಸಿಗಳಲ್ಲಿ ಕೇವಲ ಮಾಂಸಾಹಾರಿಗಳ ಬುಡಕಟ್ಟಿನ ಜನಾಂಗಗಳಿವೆ. ಅವರಿಗೆ ಕೋರೆಹಲ್ಲು, ಜಠರದ ಕರುಳಿನ ಉದ್ದ ಕಡಿಮೆ, ನೀರನ್ನು ನೆಕ್ಕಿ ಕುಡಿಯುವ – ಇಂತಹ ಲಕ್ಷಣಗಳಿವೆ. ಅವರು ಹಸಿಮಾಂಸ ಸೇವಿಸುವರು, ಮನುಷ್ಯ ಬೇಯಿಸಿ ತಿನ್ನಲು ಮತ್ತು ಬಟ್ಟೆ ಹಾಕಿಕೊಳ್ಳಲು ಪ್ರಾರಂಭಿಸಿದ ಮೇಲೆ ಆತನ ಬಾಹಿಕ ಹಾಗೂ ಆಂತರಿಕ ಅಂಗರಚನೆಯಲ್ಲಿ ವ್ಯತ್ಯಾಸಗಳಾಗಿವೆ.

ಭಾರತ ದೇಶದಲ್ಲಿ ಮೂಲವಾಸಿಗಳಾಗಿದ್ದ ದ್ರಾವಿಡರು, ಕೋಲರು ಕೃಷಿ ಪ್ರಧಾನವಾದ ಸಮಾಜ ಹೊಂದಿ ಗೋವುಗಳನ್ನು ಪೂಜಿಸುತ್ತಿದ್ದರು. ಅದರಿಂದ ಗೋಮಾಂಸ ಭಕ್ಷಣೆ ಹೊರತುಪಡಿಸಿ ಇತರೆ ಪ್ರಾಣಿಗಳ ಮಾಂಸ ಭಕ್ಷಕರಾಗಿದ್ದರು. ಆರ್ಯರು ವಲಸೆ ಬಂದ ನಂತರ ಗೋಮಾಂಸ ಭಕ್ಷಣೆಯೊಂದಿಗೆ ಯಥೇಚ್ಛ ಮಾಂಸಾಹಾರಿಗಳಾದರು. ಕ್ರಿ.ಪೂ.೬-೫ ಶತಮಾನಗಳಿಂದ ಈಚೆಗೆ ಬುದ್ಧನ ಪ್ರಭಾವದಿಂದ ಆತನ ಅಹಿಂಸಾವಾದದ ಪರಿಣಾಮವಾಗಿ ಮಾಂಸಾಹಾರ ಭಕ್ಷಣೆ ಕಡಿಮೆಯಾಗಿ ಸಸ್ಯಾಹಾರ ಸೇವನೆ ಅಧಿಕಗೊಂಡಿತು. ಅದಕ್ಕಾಗಿ ಅಶೋಕನ ಕಾಲದಲ್ಲಿ ಶಾಸನ ತಂದು ರಾಜಾಜ್ಞೆ ಮೂಲಕ ಸಸ್ಯಾಹಾರ ಪ್ರಚಾರಗೊಂಡಿತು. ಯಜ್ಞ-ಯಾಗಾದಿಗಳಲ್ಲಿ ಗೋವು ಇತರ ಪ್ರಾಣಿಗಳ ಬಲಿ, ಮಾಂಸಭಕ್ಷಣೆ ತಪ್ಪಿತು. ಆಗ ಇಂದಿನ ಶುದ್ಧ ಸಸ್ಯಾಹಾರಿ ವರ್ಗದವರು ಕಾಲದ ಪ್ರಭಾವವನ್ನು ಅರಿತು ಜಾಣ್ಮೆಯಿಂದ ಸಸ್ಯಾಹಾರಿಗಳೆಂದು ಘೋಷಿಸಿಕೊಂಡರು. ಮುಂದೆ ಭಕ್ತಿ ಪಂಥ, ಧಾರ್ಮಿಕ ನಿಲುವುಗಳು ಸಸ್ಯಾಹಾರವನ್ನೇ ಬೋಧಿಸುತ್ತಾ, ಆಚರಿಸುತ್ತಾ ಬಂದುವು. ಇದರ ಅರ್ಥ ಭಾರತೀಯರೂ ಮೂಲತಃ ಸಸ್ಯಾಹಾರಿಗಳಲ್ಲ. ಈಗಲೂ ಕರಾವಳಿ ತೀರದ ಪ್ರದೇಶಗಳಲ್ಲಿ ಶುದ್ಧಾಚಾರದ ಭಾರತೀಯರು ಸಸ್ಯಾಹಾರಿಗಳೆಂದು ಘೋಷಿಸಿಕೊಂಡು ಮೀನು ಭಕ್ಷಣೆಗೆ ರಿಯಾಯಿತಿ ಹೊಂದಿದ್ದಾರೆ. ಕಾರಣ, ಅದು ಅವರಿಗೆ ಅನಿವಾರ್ಯವಾಗಿತ್ತು. ಡಾರ್ವಿನ್‌ನ ಮೊದಲ ಸಿದ್ಧಾಂತದಂತೆ 'ಬದುಕಿಗಾಗಿ ಹೋರಾಟ' ಅನಿವಾರ್ಯವಾಗಿತ್ತು. ಕಾಲಕ್ರಮೇಣ ಸಾರಿಗೆ ಸಾಗಾಣಿಕೆ ಹೆಚ್ಚಿದಂತೆ ಕೆಲವು ಮಾರ್ಪಾಟಾಗಿವೆ ಅಷ್ಟೆ.

ಆದಕಾರಣ, ವಿವೇಚನೆಯಿಲ್ಲದೆ ಕೇವಲ ಖಾಸಗಿ ನಂಬಿಕೆಯಿಂದ ಸಾರಾಸಗಟಾಗಿ ಧಾರ್ಮಿಕ ಭಾವನೆಯ ಪೂರ್ವಗ್ರಹದಿಂದ ಸಸ್ಯಾಹಾರ ಕಡ್ಡಾಯ, ಮಾಂಸಾಹಾರ ವರ್ಜ್ಯ ಎಂಬುದು ಅವೈಜ್ಞಾನಿಕ.

**ಡಾ॥ ವೆಂಕಟಯ್ಯ ಅಪ್ಪಗೆರೆ**
೩೭೮೫/೪೬, ನಟರಾಜ ಬಡಾವಣೆ, ೯ನೇ ವಾರ್ಡ್, ಹರಪನಹಳ್ಳಿ - ೫೮೩ ೧೩೧

**ಯಾರಿಗೆ ?**

**ಪ್ರಾರ್ಥನೆ, ಭಕ್ತಿ**
**ಪಾಪಿಗಳಿಗಲ್ಲ!**
**ಆಸ್ತಿಕತೆ**
**ಅನಾಚಾರಿಗಳಿಗೆ ಬೇಕು,**
**ಆಚಾರವಂತರಿಗಲ್ಲ!**

**ಒಪಿಕೆ**
ಮೈಸೂರು




ಹುಬ್ಬಳ್ಳಿ ನಗರಕರ್ ಗ್ರಂಥಾಲಯ ಆವರಣದಲ್ಲಿ
'ನವಕರ್ನಾಟಕ ಪುಸ್ತಕ ಪ್ರದರ್ಶನ'ದ ಉದ್ಘಾಟನೆ
(ಮೇ ೨೮, ೨೦೦೫)
ಹುಬ್ಬಳ್ಳಿಯ ಪೊಲೀಸ್ ಉಪ ಆಯುಕ್ತ
ಶ್ರೀ ಬಿ. ಆರ್. ರವಿಕಾಂತೇಗೌಡ ಅವರಿಂದ.

ವೇದಿಕೆಯಲ್ಲಿ: ಶ್ರೀ ಅನ್ವರ್ ಮುಧೋಳ್ (ರಾಜಕೀಯ ಮುಖಂಡರು)
ಶ್ರೀ ಸುಭಾಸ್ ಮಡಿಮನೆ (ಕಾರ್ಯದರ್ಶಿಗಳು, ನಗರಕರ್ ಗ್ರಂಥಾಲಯ)
ಶ್ರೀ ಬಿ. ಆರ್. ರವಿಕಾಂತೇಗೌಡ
ಶ್ರೀ ಬಿಜೂರ್ (ಕಾರ್ಯದರ್ಶಿಗಳು, ನಗರಕರ್ ಗ್ರಂಥಾಲಯ)
ಶ್ರೀ ಎಂ. ಎ. ಸುಬ್ರಹ್ಮಣ್ಯ (ಸಾಹಿತ್ಯ ಪ್ರಕಾಶನ)

*೫೫ನೇ ಪುಟದಿಂದ (ವಾನರನಿಂದ ಮಾನವನವರೆಗೆ)*

ಪ್ರಾಬಲ್ಯ ಹೆಚ್ಚಾಗಿದ್ದನ್ನು ಅನೇಕ ಉದಾಹರಣೆಗಳಿಂದ ವಿವರಿಸುತ್ತಾನೆ. ೧೮೭೩-೭೪ರ ಆರ್ಥಿಕ ಮುಗ್ಗಟ್ಟನ್ನು ಏಂಗೆಲ್ಸನು ತನ್ನ ಗಮನದಲ್ಲಿಟ್ಟುಕೊಂಡು ಇದನ್ನು ವಿವರಿಸಿದ್ದಾನೆ.

''ಹಾಗೆಯೇ ತನ್ನ ಸ್ವಂತ ದುಡಿಮೆಯನ್ನಾಧರಿಸಿದ ಖಾಸಗಿ ಮಾಲಿಕತ್ವವು ಅನಿವಾರ್ಯವಾಗಿ ಕೆಲಸಗಾರರ ದುಡಿತದ ಫಲದ ಸುಲಿಗೆಯಾಗಿ ಮಾರ್ಪಡುತ್ತದೆ ಮತ್ತು ಸಂಪತ್ತೆಲ್ಲ ದುಡಿಯುವವರಲ್ಲದವರಲ್ಲಿ ಕೇಂದ್ರೀಕೃತವಾಗುತ್ತದೆ. ಇದರಲ್ಲಾದರೂ ಆಶ್ಚರ್ಯವೇನಿದೆ ? ಅಂತೆಯೇ...'' ಎಂದು ಅರ್ಧದಲ್ಲಿಯೇ ಪುಸ್ತಕ ಮುಗಿಯುವುದು.

ಇಲ್ಲಿ ವಾನರಾವಸ್ಥೆಯಿಂದ ಮಾನವಾವಸ್ಥೆಗೆ ಆಗಿರುವ ಪರಿವರ್ತನೆಯಲ್ಲಿ ದುಡಿಮೆಯ ಪಾತ್ರವನ್ನು ವಿವರಿಸಿ ಕ್ರಮೇಣ ಮಾನವನ ಬುದ್ಧಿಶಕ್ತಿಯು ದುಡಿಮೆಯನ್ನು ಶೋಷಣೆಯ ವಸ್ತುವನ್ನಾಗಿ ಮಾಡಿ, ಬೇರೊಬ್ಬರಿಂದ ದುಡಿಸಿಕೊಳ್ಳುವ ಪ್ರವೃತ್ತಿಯನ್ನು ವಿವರಿಸಲಾಗಿದೆ. ಕಾರ್ಲ್ ಮಾರ್ಕ್ಸ್‌ನ ಸಮತಾವಾದ ಅಥವಾ ವೈಜ್ಞಾನಿಕ ಸಮಾಜವಾದವನ್ನು ತಿಳಿಯುವ ಮುನ್ನ ಅವರ ಜೊತೆಗಾರನಾದ ಏಂಗೆಲ್ಸರ ಈ ಚಿಕ್ಕ ಪುಸ್ತಕವನ್ನು ಅಭ್ಯಾಸ ಮಾಡಲೇಬೇಕು.

ಅನುವಾದಕರು ಒಂದೆಡೆ ಈ ರೀತಿ ಹೇಳಿದ್ದಾರೆ : ''ಏಂಗೆಲ್ಸರು ಇದನ್ನು ಬರೆದದ್ದು ಕಳೆದ ಶತಮಾನದಲ್ಲಿ(೧೯ನೇ) ಎಂಬುದನ್ನು ನೆನಪಿಡಬೇಕು. ನಂತರದ ಕಾಲದಲ್ಲಿ ಜ್ಞಾನದ ಅಪಾರ ಬೆಳವಣಿಗೆಯಾಗಿದೆ. ಆದರೆ ಏಂಗೆಲ್ಸರ ಮಾತಿನ ಸತ್ಯಕ್ಕೆ ಬಾಧಕವಾಗಿಲ್ಲ. ಪ್ರಕೃತಿ ಮತ್ತು ಮಾನವನ ನಡುವಣ ಸಂಬಂಧಗಳಲ್ಲಿ ಏಂಗೆಲ್ಸರು ಸೂಚಿಸಿದ ವಿಷಯ ಯಾವತ್ತಿಗೂ ಅನ್ವಯವಾಗುವಂತಹದು.'' ಪ್ರತಿಯೊಬ್ಬ ರಾಜ್ಯಶಾಸ್ತ್ರ ಅಭ್ಯಾಸಿಗನು ಓದಲೇಬೇಕಾದ ಈ ಚಿಕ್ಕ ಪುಸ್ತಕ ಸರಳ ಭಾಷೆಯಲ್ಲಿ ಅನುವಾದಿತವಾಗಿದೆ.

**ಯು. ಎನ್. ಸಂಗನಾಳಮಠ**
ರಾಜ್ಯಶಾಸ್ತ್ರ ಉಪನ್ಯಾಸಕರು, ಸರಕಾರಿ ಪದವಿಪೂರ್ವ ಕಾಲೇಜು
ಹೊನ್ನಾಳಿ

# ಚರಿತ್ರೆಯ ಮಡಿಲಲ್ಲಿ ತನ್ನಿಮಾನಿಗ

ಸಾವಿತ್ರಿ ಕೆ.

ಕರಾವಳಿ ಕರ್ನಾಟಕದ ತುಳು ಜನಪದದಲ್ಲಿ ಭೂತಗಳ ಆರಾಧನೆ ವಿಶಿಷ್ಟವಾದುದು. ಈ ಪ್ರದೇಶದ ಜನಜೀವನದಲ್ಲಿ ಇದು ಹಾಸುಹೊಕ್ಕಾದಂತೆ ಅವರ ನಂಬಿಕೆ, ನಡಾವಳಿಗಳನ್ನು ರೂಪಿಸುವ ಈ ಆರಾಧನೆಗೆ ಹಲವು ಆಯಾಮಗಳಿವೆ. ತುಳು ಜನಪದದ ಅಧ್ಯಯನವೆಂದರೆ ಇದರ ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಸ್ವರೂಪಗಳನ್ನು ತಿಳಿಯುವ ಪ್ರಯತ್ನವೇ ಸರಿ. ಈ ದಿಶೆಯಲ್ಲಿ ಇದುವರೆಗೆ ನಡೆದ ಎಲ್ಲಾ ಅಧ್ಯಯನಗಳು ಸಾಹಿತ್ಯ, ಸಂಸ್ಕೃತಿ, ಜಾನಪದಗಳನ್ನೇ ಪ್ರಧಾನವಾಗಿಟ್ಟು ನಡೆಸಿದ ಅಧ್ಯಯನವಾಗಿದೆ. ಇದಕ್ಕೆ ಭಿನ್ನವಾಗಿ ಹಿಂದಿನ ಎಲ್ಲಾ ಅಧ್ಯಯನ ಪರಂಪರೆಗಳನ್ನು ಗಮನಿಸುತ್ತಾ ಭೂತಾರಾಧನೆಯ ಕ್ಷೇತ್ರಕ್ಕೆ ಚಾರಿತ್ರಿಕ ದೃಷ್ಟಿಯನ್ನು ಹರಿಸುವ ಅಗತ್ಯವಿದೆ. ತುಳುವರ ಭೂತಾರಾಧನೆಯಲ್ಲಿ ೪೦೦ಕ್ಕೂ ಹೆಚ್ಚು ಭೂತಗಳಿದ್ದು ಅದರಲ್ಲಿ ಸ್ತ್ರೀಭೂತಗಳ ಸಂಖ್ಯೆ ೨೦೦ಕ್ಕಿಂತ ಹೆಚ್ಚಿರುವುದು ಗಮನಾರ್ಹ.

ಕುಟುಂಬ, ಗ್ರಾಮ, ಸೀಮೆಯ ಭೂತಗಳಿಂದ ಹಿಡಿದು ಸ್ತ್ರೀಶಕ್ತಿಗಳ ಆರಾಧನೆಗಳು ಭೂತಾರಾಧನೆಯಲ್ಲಿ ಯಾವ ಬಗೆಯ ಚಾರಿತ್ರಿಕ ತಿರುವನ್ನು ಪಡೆಯುತ್ತಾ ಬಂದಿದೆ ಎಂಬುದನ್ನು ಕೂಲಂಕಷವಾಗಿ ಹಾಗೂ ತೌಲನಿಕವಾಗಿ ಅಧ್ಯಯನಕ್ಕೆ ಒಳಪಡಿಸುವ ಚಾರಿತ್ರಿಕ ಪ್ರಜ್ಞೆ ನಮ್ಮದಾಗಬೇಕು. ಈ ಲೇಖನದ ಮಿತಿಯಲ್ಲಿ ಜನಪರ ನಿಲುವಿನ ಬಂಡಾಯಗಾರ್ತಿ ಸ್ತ್ರೀ ಭೂತ ತನ್ನಿಮಾನಿಗಳನ್ನು ಆಯ್ಕೆಮಾಡಿಕೊಂಡು ಇದರ ಚಾರಿತ್ರಿಕ ಚಲನಶೀಲತೆಯತ್ತ ದೃಷ್ಟಿ ಹರಿಸಲಾಗಿದೆ. ತುಳುನಾಡಿನಲ್ಲಿ ದೀರ್ಘಕಾಲದಿಂದ ಊಳಿಗಮಾನ್ಯ ಪಾಳೆಯಗಾರೀ ವ್ಯವಸ್ಥೆಯ ಸಂರಕ್ಷಣೆಗಾಗಿಯೇ ಉಳಿದುಕೊಂಡು ಬಂದ ಭೂತಾರಾಧನೆಯ ಚರಿತ್ರೆಯ ಮಡಿಲಲ್ಲಿ ತನ್ನಿಮಾನಿಗಳ ಜನಪರ ಧ್ವನಿಯನ್ನು ಗುರುತಿಸುತ್ತಾ ಇದರ ಮೌಖಿಕ ಹಾಗೂ ಚಾರಿತ್ರಿಕ ಸಂಗತಿಗಳನ್ನು ದಾಖಲಿಸಿ ಪರಾಮರ್ಶಿಸುವ ಪ್ರಯತ್ನ ಇದಾಗಿದೆ.

ಭೂತಗಳ ಚಾರಿತ್ರಿಕ ಅಧ್ಯಯನವೆಂದರೆ ಇಡೀ ದಕ್ಷಿಣ ಕನ್ನಡ ಮತ್ತು ಉಡುಪಿ ಉಭಯ ಜಿಲ್ಲೆಗಳ ಜನಸಮುದಾಯದ ಇತಿಹಾಸದ ಪುನರ್ರಚನೆ ಮಾಡುವ ಪ್ರಯತ್ನವೆಂದೇ ಇದರ ಅರ್ಥ. ನಾವು ಓದುವ ಇತಿಹಾಸವು ಅಕ್ಷರ ಸಂಸ್ಕೃತಿ ಮೂಲದ ಇತಿಹಾಸ. ಈ ಇತಿಹಾಸದಲ್ಲಿ ನಾವು ರಾಜ ಮಹಾರಾಜರ, ಪುರೋಹಿತ-ಪಂಡಿತರ ನೆಲೆಯಲ್ಲಿ ಇಡೀ ಸಮುದಾಯದ ಬದುಕನ್ನು ಗ್ರಹಿಸುವ, ಅರ್ಥೈಸುವ ದೃಷ್ಟಿ ಧೋರಣೆಗಳೇ ಪ್ರಧಾನಪಾತ್ರ ವಹಿಸುತ್ತವೆ. ಆದರೆ ಅಲಿಖಿತ ಪರಂಪರೆಯ ಮೂಲದಲ್ಲಿನ ಪುರಾಣ, ಐತಿಹ್ಯ, ನಂಬಿಕೆ, ನಡಾವಳಿ ಇತ್ಯಾದಿ ಹಲವು ಹನ್ನೊಂದು ಆಕರಗಳನ್ನು ಗಮನಿಸಿ ಇತಿಹಾಸವನ್ನು ಪುನರ್ರಚಿಸುವುದೆಂದರೆ ಅದು ಇದುವರೆಗೆ ಹೇಳದೆ ಉಳಿದಿದ್ದ ಎಷ್ಟೋ ಸಂಗತಿಗಳನ್ನು ತಿಳಿಸುವ ಶೋಧನಾಕಾರ್ಯವಾಗಿದೆ. ಮೌಖಿಕ ಪರಂಪರೆಯಲ್ಲಿ ಜನಸಮುದಾಯದ ಆಸೆ-ಆಶೋತ್ತರಗಳನ್ನು, ಕನಸು-ಕಾಮನೆಗಳನ್ನು ಮಾತ್ರವಲ್ಲ, ಅವರ ಕಷ್ಟ-ಕಾರ್ಪಣ್ಯಗಳನ್ನೂ ನಂಬಿದ ವ್ಯಕ್ತಿ-ಶಕ್ತಿಗಳ ಬಗೆಗಿನ ಅವರ ಮನೋಧರ್ಮಗಳನ್ನು ನಾವು ಶೋಧಿಸಿ ತಿಳಿಯಬಹುದಾಗಿದೆ. ಆದರೆ ಎಷ್ಟೋ ವೇಳೆ ಈ ಎಲ್ಲಾ ಸಂಗತಿಗಳು ನೇರವಾದ ನೆಲೆಯಲ್ಲಿ ಕಂಡುಬರುವ ದಾಖಲಾತಿಗಳಲ್ಲ, ಅಲ್ಲದೆ ಕಾಲದ ನಿರ್ದಿಷ್ಟತೆಯನ್ನು ಅವು ನಿಖರವಾಗಿ ತಿಳಿಸುವ ದಾಖಲಾತಿಗಳೂ ಅಲ್ಲ, ಐತಿಹ್ಯ, ಪುರಾಣ, ಕಥೆ, ನಂಬಿಕೆ, ಆಚರಣಾ ಪ್ರಕ್ರಿಯೆ ಹೀಗೆ ಹಲವು ಅನ್ಯೋಕ್ತಿ ಮಾಧ್ಯಮಗಳಲ್ಲಿ ಸಾಮಾಜಿಕ ಬದುಕಿನ ಸ್ಥಿತಿ ಸಂಗತಿಗಳು ಆಕೃತಿ ಪಡೆಯುತ್ತವೆ. ಇವುಗಳನ್ನು ಅರ್ಥೈಸುವುದಕ್ಕೆ ಆ ಪರಂಪರೆಯೊಳಗೆ ಕೀಲಿ ಕೈಗಳೂ ಇರುತ್ತವೆ. ಹೀಗೆ ಶಿಷ್ಟ ಜಗತ್ತಿನಲ್ಲಿ ಅಥವಾ ಲಿಖಿತ ಪರಂಪರೆಯಲ್ಲಿ ನಮಗೆ ಕಾಣಸಿಗದ ಎಷ್ಟೋ ಚಾರಿತ್ರಿಕ ಸತ್ಯಗಳು ಈ ಅಲಿಖಿತ ಪರಂಪರೆಯ ಅಭಿವ್ಯಕ್ತಿ ಗರ್ಭದಲ್ಲಿ ನಿಗೂಢ ರೀತಿಯಲ್ಲಿ ಇರುತ್ತವೆ. ಈ ನಿಗೂಢವನ್ನೂ ಒಡೆಯುವ ಕೀಲಿ ಕೈ ಕೂಡ ಈ ಪರಂಪರೆಯ ಧಾರೆಯಲ್ಲಿಯೇ ಇರುತ್ತದೆ. ಇದರ ಪರಾಮರ್ಶೆಗೆ ತನ್ನಿಮಾನಿಗ ಒಂದು ಮಹತ್ವದ ಆಕರ. ಬಂಡಾಯದ ಕಿಡಿ ತನ್ನಿಮಾನಿಗ ಸಂಸ್ಕೃತೀಕರಣದ ಹೆಸರಿನಲ್ಲಿ ನಿಗೂಢವಾಗುತ್ತಾ ರಕ್ತೇಶ್ವರಿಯಾಗುವ ಆಕೆಯ ವಿಭಿನ್ನ ರೂಪಗಳು ಆಕರಗಳು ಎಂದು ಪರಿಗಣಿಸಬೇಕು. ತನ್ನಿಮಾನಿಗ, ಸನಿಮಾನಿಗ, ಬಾಲೆಬಾರಗ, ಭೂಮಿಬಾರಗ, ಕಾಳಕರ್ಾಯಿ, ಕಾಳರಾತ್ರಿ, ಕಾಳಭೈರವಿ, ನೆತ್ತೆರ್ ಭೈರವಿ, ಲೆಕ್ಕೆಸಿರಿ, ರಕ್ತಾಕ್ಷಿ, ರಕ್ತೇಶ್ವರಿ ಆಗುವುದು ಲಿಖಿತ ಪರಂಪರೆಯಲ್ಲಿ ಸಂಸ್ಕೃತೀಕರಣ. ಇದು ಚರಿತ್ರೆಯನ್ನು ವ್ಯವಸ್ಥೆಯ ಸಮರ್ಥನೆಗೆ ದುಡಿಸುವುದೇ ಆಗಿದೆ. ಹಾಗೆ ನೋಡಿದರೆ ಇತಿಹಾಸಕ್ಕೆ ಎರಡು ಪ್ರಧಾನ ಧಾರೆಗಳಿವೆ. ಮೊದಲನೆಯದ್ದು ಮೌಖಿಕ ಇತಿಹಾಸ. ಎರಡನೆಯದು ಅಕ್ಷರಸ್ಥ ಇತಿಹಾಸ. ಧ್ವನಿಯಿಲ್ಲದವರ ಧ್ವನಿಯಾಗುವ ತನ್ನಿಮಾನಿಗ, ಕಲ್ಲುರ್ಟಿಯಂತಹ ಭೂತಗಳ ಮೌಖಿಕ ಇತಿಹಾಸ ಎಲ್ಲಾ ಕಾಲದಲ್ಲೂ ಇರುತ್ತದೆ. ಆದರೆ ಅಕ್ಷರಸ್ಥ ಇತಿಹಾಸ ಎಲ್ಲಾ ಕಾಲಕ್ಕೂ ಇರಬೇಕೆಂದಿಲ್ಲ. ಸಾಮಾನ್ಯವಾಗಿ ಸೀತೆ ಸಾವಿತ್ರಿಯರ ಅಕ್ಷರಸ್ಥ ಇತಿಹಾಸಗಳು ಒಂದು ವ್ಯವಸ್ಥೆಯ ಸಮರ್ಥನೆ, ಅದರ ರಕ್ಷಣೆಗೆ ಮತ್ತು ಸಮುದಾಯದ ನಿಯಂತ್ರಣಕ್ಕೆ ಇರುತ್ತವೆ. ಇದಕ್ಕೆ ವಿರುದ್ಧ ನೆಲೆಯಲ್ಲಿ ಯಾವತ್ತೂ ಮೌಖಿಕ ಇತಿಹಾಸ ಸಮುದಾಯವನ್ನು ನಿಯಂತ್ರಿಸುವ, ಪ್ರಭುಶಕ್ತಿಯನ್ನು ಪ್ರಶ್ನಿಸುವ, ವಿಶ್ಲೇಷಿಸುವ, ಅಗತ್ಯಬಿದ್ದರೆ ಪ್ರತಿಭಟಿಸುವ ಆಶಯದಿಂದ ಕೂಡಿದೆ. ಒಂದು ಪ್ರದೇಶದ ಒಂದು ಕಾಲದ ಜನರ ಬದುಕಿನ ಸಹಜ ಚರಿತ್ರೆ, ಮೌಖಿಕ ಪರಂಪರೆ ಮತ್ತು ಅಕ್ಷರಸ್ಥ ಪರಂಪರೆಗಳು ಮುಖಾಮುಖಿಯಾದಾಗ ಮಾತ್ರ ರಚನೆಯಾಗುತ್ತದೆ. ಇದೇ ನಿಜವಾದ ಇತಿಹಾಸ.

ಮೌಖಿಕ ಪರಂಪರೆಯಲ್ಲಿ ಭೂತಗಳ ಚರಿತ್ರೆಯಲ್ಲಿ 'ಜೋಗ' ಮತ್ತು 'ಮಾಯೆ' ಎಂಬ ಎರಡು ಘಟ್ಟಗಳಿವೆ. ಈಗ ಭೂತಗಳಾಗಿರುವ ಶಕ್ತಿಗಳು ಬದುಕಿದ್ದ ಕಾಲಮಾನಕ್ಕೆ ಜೋಗವೆಂದೂ, ಅವು ಸಾವಿನ ಅನಂತರ ತೋರಿಸಿದ ಕಲೆ ಕಾರ್ಣಿಕಕ್ಕೆ ಮಾಯವೆಂದೂ ತಿಳಿಸಲಾಗುತ್ತಿದೆ. ಹೀಗೆ ಜೋಗದಿಂದ ಮಾಯದ ದಾರಿಯಲ್ಲಿ ದೀರ್ಘಕಾಲದ ನಡಿಗೆಯಿರುತ್ತದೆ. ಇಂತಹ ನಡಿಗೆಯಲ್ಲಿ ಒಂದು ಭೂತದ ಮೂಲ ನಡಿಗೆಗೆ ಹಲವು ಉಪಕಥೆಗಳು ಸೇರಿಕೊಳ್ಳುತ್ತವೆ. ಇದರಲ್ಲಿ ಕೆಲವು ಜನಪದರ ಸೇರಿಕೆಯಾದರೆ ಇನ್ನೂ ಕೆಲವು ಅಧಿಕಾರ ವರ್ಗದ ಸೇರಿಕೆಗಳು. ಇವೆರಡರ ದಟ್ಟ ಪ್ರಭಾವಗಳು ಭೂತಗಳ ಕಥೆ ಮತ್ತು ಪಾಡ್ದನ ಸಾಹಿತ್ಯದಲ್ಲಿ ಕಂಡುಬರುತ್ತವೆ. ಈ ಬಗೆಯ ಪಲ್ಲಟಗಳು ಭೂತಾಲಯ ದೇವಾಲಯಗಳ ವಾಸ್ತುಗಳಲ್ಲಿ ದಾಖಲಾಗಿವೆ. ಇವುಗಳೆಲ್ಲಾ ಭೂತಗಳ ಚರಿತ್ರೆಯ ತೌಲನಿಕ ಅಧ್ಯಯನಕ್ಕೆ ಅವಶ್ಯಕವಾಗಿದ್ದಿರಬೇಕು. ಇಲ್ಲವಾದಲ್ಲಿ ತನ್ನಿಮಾನಿಗ, ಮಾಯಂದಾಲ್, ಭೂತಗಳು

ಭೂತಗಳ ಚಾರಿತ್ರಿಕ ಅಧ್ಯಯನವೆಂದರೆ ಇಡೀ ದಕ್ಷಿಣ ಕನ್ನಡ ಮತ್ತು ಉಡುಪಿ ಉಭಯ ಜಿಲ್ಲೆಗಳ ಜನಸಮುದಾಯದ ಇತಿಹಾಸದ ಪುನರ್ರಚನೆ ಮಾಡುವ ಪ್ರಯತ್ನವೆಂದೇ ಇದರ ಅರ್ಥ. ನಾವು ಓದುವ ಇತಿಹಾಸವು ಅಕ್ಷರ ಸಂಸ್ಕೃತಿ ಮೂಲದ ಇತಿಹಾಸ. ಈ ಇತಿಹಾಸದಲ್ಲಿ ನಾವು ರಾಜ ಮಹಾರಾಜರ, ಪುರೋಹಿತ-ಪಂಡಿತರ ನೆಲೆಯಲ್ಲಿ ಇಡೀ ಸಮುದಾಯದ ಬದುಕನ್ನು ಗ್ರಹಿಸುವ, ಅರ್ಥೈಸುವ ದೃಷ್ಟಿ ಧೋರಣೆಗಳೇ ಪ್ರಧಾನಪಾತ್ರ ವಹಿಸುತ್ತವೆ. ಆದರೆ ಅಲಿಖಿತ ಪರಂಪರೆಯ ಮೂಲದಲ್ಲಿನ ಪುರಾಣ, ಐತಿಹ್ಯ, ನಂಬಿಕೆ, ನಡಾವಳಿ ಇತ್ಯಾದಿ ಹಲವು ಹನ್ನೊಂದು ಆಕರಗಳನ್ನು ಗಮನಿಸಿ ಇತಿಹಾಸವನ್ನು ಪುನರ್ರಚಿಸುವುದೆಂದರೆ ಅದು ಇದುವರೆಗೆ ಹೇಳದೆ ಉಳಿದಿದ್ದ ಎಷ್ಟೋ ಸಂಗತಿಗಳನ್ನು ತಿಳಿಸುವ ಶೋಧನಾಕಾರ್ಯವಾಗಿದೆ.

ಮಾಯ ರೂಪದಲ್ಲಿ ಕೋಟಿ ಚೆನ್ನಯರೊಡನೆ ಭೇಟಿಯಾಗುವುದನ್ನೇ ಮುಂದಿಟ್ಟು ಅದರ ಕಾಲಗಣನೆ ಕ್ರಿ.ಶ. ೧೬ನೇ ಶತಮಾನದ ಅನಂತರ ಎಂಬ ತಪ್ಪು ಹುಟ್ಟಿಕೊಳ್ಳುತ್ತದೆ. ಕ್ರಿ.ಶ. ೮ನೇ ಶತಮಾನದ ಅನಂತರ ಶಂಕರಾಚಾರ್ಯರಿಂದ, ಕ್ರಿ.ಶ. ೧೩ನೇ ಶತಮಾನದ ಅನಂತರ ಮಧ್ವಾಚಾರ್ಯರಿಂದ ತುಳುವರ ಕುಲ ಮೂಲದ ಆದಿ ಆಲಡೆಗಳಾದ ಭೂತ ಸ್ಥಾನಗಳು ದೇವಾಲಯಗಳಾದುದು; ಅಲ್ಲಿ ಈಗಲೂ ತನ್ನಿಮಾನಿಗ, ಕಲ್ಲುರ್ಟಿ, ಮಾಯಾಂದಲ್, ಸಿರಿ ಮೊದಲಾದ ಭೂತಗಳ ನೆಲೆಗಳಿರುವುದು ಈಗ ನಮ್ಮ ಮುಂದೆ ಇರುವ ಮಹತ್ವದ ಚಾರಿತ್ರಕ ಆಕರಗಳು. ಇದನ್ನು ಮರೆತು ಲಿಖಿತ ಪರಂಪರೆಯಲ್ಲೇ ನಮ್ಮ ಚಾರಿತ್ರಿಕ ಪ್ರಜ್ಞೆ ಗಿರಕಿ ಹೊಡೆದರೆ ಭೂತಗಳಿಗೆ ಪ್ರಾಚೀನತೆಯಿದ್ದು ಅದರ ಉಗಮದ ಇತಿಹಾಸ ಅರ್ವಾಚೀನವಾಗುತ್ತದೆ. ಹೀಗಾಗಬಾರದೆಂಬ ಎಚ್ಚರದೊಂದಿಗೆ ಮುಂದಿನ ದಿನಗಳಲ್ಲಿ ಭೂತದ ಚರಿತ್ರೆಯ ಶೋಧನೆಯಲ್ಲಿ ಜೋಗರೂಪ ಮತ್ತು ಮಾಯಾರೂಪದ ವ್ಯತ್ಯಯಗಳನ್ನು ಅರಿತು ಮುನ್ನಡೆಯುವುದು ಅಗತ್ಯ.

**ತನ್ನಿಮಾನಿಗಳ ಕಥಾನಕವು ಮುಗೇರ ಮತ್ತು ಕೋಡ್ದಬ್ಬುವಿನ ಕಥಾನಕದೊಂದಿಗೆ ಸಂಬಂಧ ಪಡೆದಿದೆ. ಈಕೆಯ ಉಗಮ ಕಲೆ-ಕಾರ್ಣಿಕವನ್ನು ಸಂಗ್ರಹಿಸಿದರೆ ಹಲವಾರು ರೋಚಕ ವಿಷಯಗಳು ತಿಳಿಯುವುದಲ್ಲದೆ ಇದೇ ಒಂದು ಮಹಾಕಾವ್ಯ ಆಗಬಹುದಾಗಿದೆ.**

ಸಾಂಸ್ಕೃತಿಕ ತುಳುವಲಯದಲ್ಲಿ ದೇವಾಲಯದ ಉಗಮದ ಇತಿಹಾಸವನ್ನು ಕೆದಕಿದರೆ ಅದರ ಬೇರುಗಳಲ್ಲಿ ಭೂತದ ಇತಿಹಾಸ ಗೋಚರಿಸುತ್ತದೆ. ಇಲ್ಲಿಯ ಅನೇಕ ಪ್ರಾಚೀನ ದೇವಾಲಯಗಳಲ್ಲಿ ರಕ್ತೇಶ್ವರಿ, ಕಾಳಭೈರವಿ ರೂಪದಲ್ಲಿ ತನ್ನಿಮಾನಿಗ - ಕಾಳಮ್ಮ, ಕಾಳಿ ರೂಪದಲ್ಲಿ ಕಲ್ಲುರ್ಟಿ ಭೂತಗಳಿದ್ದಾರೆ. ಈ ಜಾಡನ್ನು ಹಿಡಿದು ಚರಿತ್ರೆಯ ಶೋಧ ನಡೆಯಬೇಕು. ಈಗ ದೇವಾಲಯ - ಭೂತಾಲಯಗಳಲ್ಲಿ ಪರಿವಾರ ಭೂತಗಳಾಗಿ ಆರಾಧಿಸಲ್ಪಡುವ ಶಕ್ತಿಗಳಿಗೆ ಆರೋಪಿಸಲ್ಪಟ್ಟ ಜಾತಿಯ ಹಣೆಪಟ್ಟಿಗಳನ್ನು ಸಂಗ್ರಹಿಸಿ ಅದನ್ನು ತುಳು ಮೂಲನಿವಾಸಿಗಳ ಮೌಖಿಕ ಪರಂಪರೆಯಲ್ಲಿ ವಿಶ್ಲೇಷಿಸಿದಾಗ ಈ ಎಲ್ಲಾ ಬೆಳವಣಿಗೆಗಳು ಕ್ರಿ.ಶ. ೪ನೇ ಶತಮಾನದ ಅನಂತರದಲ್ಲಿ ಎಂಬುದು ಇನ್ನಷ್ಟು ಬಲಗೊಳ್ಳುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಭೂತಾರಾಧನೆಯಲ್ಲಿ ಇಂದು ವೃತ್ತಿ ಕಲಾವಿದರಾಗಿರುವ ನಲಿಕೆ, ಪಾಣಾರ, ಕೋಪಾಳ, ಪರವ, ಪಂಬದರು ಕೌಟುಂಬಿಕ ನೆಲೆಯಲ್ಲಿ 'ಶಕ್ತಿ'ಯ ಆರಾಧಕರಾಗಿದ್ದು ಪಿತೃಪ್ರಧಾನ ಕೌಟುಂಬಿಕ ವ್ಯವಸ್ಥೆಯನ್ನು ಹೊಂದಿರುವುದನ್ನು ಕಾಣುವಾಗ ಇವರು ವಲಸೆಬಂದ ಜನವರ್ಗವಾಗಿದ್ದಿರಬೇಕು. ಇದಲ್ಲದೆ ಇವರೆಲ್ಲರಲ್ಲಿ ಇರುವ ಮಾರಿದೇವತೆ, ಧೂಮಾವತಿ ಭೂತಗಳ ಆರಾಧನೆ ಈ ಅಂಶಕ್ಕೆ ಪುಷ್ಟಿ ನೀಡುತ್ತದೆ. ಇದಕ್ಕೂ ಮಿಗಿಲಾಗಿ ಪ್ರಾಚೀನ ತುಳುವರ ಭೂತಾರಾಧನೆಯಲ್ಲಿ ಪ್ರೇಕ್ಷಕ, ಪ್ರದರ್ಶಕ ಎಂಬ ವಿಂಗಡನೆಯಿರಲಿಲ್ಲ. ಅವರ ಭೂತಾರಾಧನೆಯು ಸಮಷ್ಟಿಯ ಆರಾಧನೆ, ವೃತ್ತಿಯಲ್ಲ; ಬದುಕಿನ ಒಂದು ಭಾಗ. ತುಳುವರು ಹೆಣ್ಣು ಗಂಡು ಎಂಬ ಭೇದವಿಲ್ಲದೆ ಎಲ್ಲರೂ ಮಂಡಲಾಕಾರದಲ್ಲಿ ಸೇರಿ ಹಾಡಿ ಕುಣಿದು ಉಣ್ಣುವ ಸಮಭಾವಕ್ಕೆ ಭೂತಾರಾಧನೆಯಲ್ಲಿ ಪ್ರಾಶಸ್ತ್ಯ. ಇಲ್ಲಿ ವೃತ್ತಿಕಲಾವಿದರ ಆಗಮನದ ಸಂಕ್ರಮಣ ಕಾಲ ಭೂತಾರಾಧನೆಯ ಚಾರಿತ್ರಿಕ ಪಲ್ಲಟದ ಇತಿಹಾಸವಾಗಿದ್ದು ಇಲ್ಲಿ ಪ್ರೇಕ್ಷಕ-ಪ್ರದರ್ಶಕ-ವ್ಯವಸ್ಥಾಪಕ ಎಂಬ ಮೂರು ವರ್ಗಗಳು ಹುಟ್ಟಿಕೊಂಡವು. ಇದೆಲ್ಲ ನಡೆದದ್ದು ಕ್ರಿ.ಶ. ೪ನೇ ಶತಮಾನದ ಅನಂತರದಲ್ಲಿ ಇದನ್ನು ಗಮನಿಸಿದಾಗ ಮೌಖಿಕ ಪರಂಪರೆಯಲ್ಲೂ ತುಳು ಮೂಲನಿವಾಸಿಗಳ ಮೌಖಿಕ ಪರಂಪರೆ, ವೃತ್ತಿ ಕಲಾವಿದರ ಮೌಖಿಕ ಪರಂಪರೆ, ವ್ಯವಸ್ಥಾಪಕರ ಮೌಖಿಕ ಪರಂಪರೆ ಎನ್ನುವ ವಿಭಿನ್ನ ನೆಲೆಗಳನ್ನು ಅರ್ಥೈಸುವುದು ಅಗತ್ಯವಾಗುತ್ತದೆ. ಇಲ್ಲವಾದಲ್ಲಿ ಏಕಮುಖಿ ಇತಿಹಾಸ ವಿನ್ಯಾಸಗೊಳ್ಳಬಹುದು. ಭೂತಾರಾಧನೆಯ ಇತಿಹಾಸ ತನ್ನ ಪರಿಗಣನೆ ಮತ್ತು ಅವಗಣನೆಯಲ್ಲಿ ಸಂಸ್ಕೃತೀಕರಣ ಅಪಸಂಸ್ಕೃತೀಕರಣ ಎರಡನ್ನೂ ಜನಪದ ಸಂಸ್ಕೃತಿಗಳ ನಡುವೆ ಇಟ್ಟು ಐತಿಹಾಸಿಕ ಪ್ರಜ್ಞೆಯಿಂದ ಪರಿಶೀಲಿಸಬೇಕು. ಈ ಪರಿಶೀಲನೆಯಲ್ಲಿ ಪ್ರಧಾನ ಸಂಸ್ಕೃತಿ, ಉಪಸಂಸ್ಕೃತಿಗಳೆಂಬ ವಿಚಾರಕ್ಕೆ ಆಸ್ಪದವಿಲ್ಲ. ಜನಧ್ವನಿಯೇ ಇತಿಹಾಸವೆಂಬ ಬದುಕಿನ ಎಚ್ಚರ ಮುಖ್ಯವಾಗುತ್ತದೆ. ಡಾ|| ಅ. ಸುಂದರ ಹೇಳುವಂತೆ ಇದುವರೆಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಎಂಟು ಪ್ರಾಚೀನ ನೆಲೆಗಳು ಶೋಧವಾಗಿವೆ. ಪ್ರಾಗೈತಿಹಾಸಿಕ ಕಬ್ಬಿಣ ಯುಗದ ಬೃಹತ್ ಶಿಲಾಸಂಸ್ಕೃತಿಯ ನೆಲೆಗಳು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಈ ಜನರ ಸಾಂಸ್ಕೃತಿಕ ಅವಶೇಷಗಳಾಗಿ ಮಹತ್ವದ್ದಾಗಿವೆ. ಪುತ್ತೂರು, ಬಡಕಜೆಜ್ಜಾರು, ಉದ್ಯಾವರ, ಬಾರಕೂರು, ಹಟ್ಟಿಯಂಗಡಿಗಳಲ್ಲಿ ದೊರೆತ ಅವಶೇಷಗಳನ್ನು ಕಾಣುವಾಗ ನಿಶ್ಚಿತವಾಗಿ ಹಳೆಯ ಶಿಲಾಯುಗದಲ್ಲೇ ಇಲ್ಲಿ ಮೂಲನಿವಾಸಿಗಳಿದ್ದು ಅದರಿಂದ ಆದ ಅನನ್ಯತೆಯ ಸಂಸ್ಕೃತಿಯೊಂದು ವಿಕಾಸಗೊಂಡಿದ್ದನ್ನು ಇತಿಹಾಸದ ಹೆಜ್ಜೆಗಳಿಂದ ಗುರುತಿಸಬಹುದು (ಡಾ|| ಅ. ಸುಂದರ-೧೯೭೭ -ಲೇಖನ: ದಕ್ಷಿಣ ಕನ್ನಡದ ಪ್ರಾಚೀನತೆಯ ಸಾಂಸ್ಕೃತಿಕ ಅವಶೇಷಗಳು). ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಮುಗೇರ, ಮನ್ಸ, ಮುಂಡಾಲ, ಮಾಯಿಲ, ನಲಿಕೆ, ಪರವ – ಈ ರೀತಿಯ ಹಲವಾರು ಪರಿಶಿಷ್ಟ ಜಾತಿ ಉಪಜಾತಿಗಳನ್ನು ಗಮನಿಸಬಹುದು. ಈ ಉಪಜಾತಿಯಲ್ಲಿ ಸಾಂಸ್ಕೃತಿಕ ವೀರರ ಆರಾಧನೆ, ಕೌಟುಂಬಿಕ ಪದ್ಧತಿ, ವಿವಾಹ ಪದ್ಧತಿಗಳಲ್ಲಿನ ಸಾಮ್ಯತೆಗಳು ಕಂಡುಬರುತ್ತವೆ. ದಕ್ಷಿಣ ಕನ್ನಡದ ಪ್ರಮುಖ ಪರಿಶಿಷ್ಟ ಜಾತಿಗಳಾದ ಮುಗೇರರಲ್ಲಿ ಸಾಂಸ್ಕೃತಿಕ ವೀರರಾಗಿ ಮುದ್ದ-ಕಳಲ, ಮನ್ಸ ಜಾತಿಯಲ್ಲಿ ಕಾಣದ ಕಾಟದ, ಮುಂಡಾಲರಲ್ಲಿ ಕೋಡ್ದಬ್ಬು-ತನ್ನಿಮಾನಿಗ, ಕೊರಗರಲ್ಲಿ ಕೊರಗ ತನಿಯರ ಆರಾಧನೆ ಕಂಡುಬರುತ್ತದೆ. (ಡಾ|| ಅಭಯ ಕೌಕ್ರಾಡಿ, ೧೯೯೭-ಮುಗೇರ ಜನಾಂಗ ಜನಪದ ಅಧ್ಯಯನ: ಪುಟ ೬-೪೭). ಈ ಸಮುದಾಯಗಳು ಮೂಲದಲ್ಲಿ ಜಾತಿರಹಿತ ಕುಲಪರಂಪರೆಯ ಪಳೆಯುಳಿಕೆಗಳು.

ತುಳುನಾಡಿನ ಇತಿಹಾಸ ಪೂರ್ವದ ವಿವರಗಳನ್ನು ಹಳೆ ಶಿಲಾಯುಗ, ಹೊಸ ಶಿಲಾಯುಗ, ಲೋಹಯುಗ, ಇತಿಹಾಸದ ಪ್ರಾರಂಭ ಕಾಲದ ನೆಲೆಗಳು... ಎಂದೆಲ್ಲಾ ವಿಂಗಡಿಸಿ ವಿವೇಚಿಸುವುದು ರೂಢಿಗೆ ಬಂದಿದೆ. ಈ ಎಲ್ಲಾ ಯುಗಗಳಿಗೂ ಅನ್ವಯಿಸುವ ಕೆಲವು ಪ್ರಾಚೀನಾವಶೇಷಗಳು ದಕ್ಷಿಣ ಕನ್ನಡದಲ್ಲಿ ದೊರೆತಿವೆ (ಕೆ. ಅನಂತರಾಮು, ೧೯೯೭-ದಕ್ಷಿಣದ ಸಿರಿನಾಡು, ಪುಟ ೫). ಇದಲ್ಲದೆ ತುಳುನಾಡಿನಲ್ಲಿ ಕ್ರಿ. ಪೂ. ೩ನೇ ಶತಮಾನದಿಂದ ಕ್ರಿ.ಶ. ೧ನೇ ಶತಮಾನದವರೆಗೆ ಬೌದ್ಧಧರ್ಮ ಪ್ರಚಾರದಲ್ಲಿದ್ದುದಕ್ಕೆ ಕದ್ರಿ, ಧರ್ಮಸ್ಥಳ, ಹಟ್ಟಿಯಂಗಡಿಗಳಲ್ಲಿ ಸಾಕ್ಷಿಗಳು ಸಿಗುತ್ತವೆ.

ಋಗ್ವೇದದಲ್ಲಿ ಬರುವ 'ಅರ್ಮ' ಮತ್ತು ಅರ್ಮಕ' ಎಂಬ ಶಬ್ದಗಳತ್ತ ಗಮನ ಹರಿಸಬೇಕು. ಭೂತಾರ್ಮ, ಅಧಿಕಾರ್ಮ, ಸಂಜೀವಾರ್ಮ, ಮದ್ರಾರ್ಮ ಮುಂತಾದುವು ಊರುಗಳ ಹೆಸರುಗಳನ್ನು ಸೂಚಿಸುತ್ತವೆ. ಅರ್ಮ ಎಂದರೆ ವಿನಷ್ಟಗ್ರಾಮ ಅಥವಾ ಪಾಳುಬಿದ್ದ ಊರು ಎಂದು ಪಾಣಿನಿಯ ಅಷ್ಟಾಧ್ಯಾಯಿ ವ್ಯಾಖ್ಯಾನಕಾರರು ತಿಳಿಸಿದ್ದಾರೆ. ಈ ಗ್ರಾಮಗಳು ಯಾವ ಕಾಲದವು ? ಅವು ಪಾಳು ಬಿದ್ದುದು ಯಾವಾಗ ? (ಡಾ|| ಜಿ. ರಾಮಕೃಷ್ಣ ಅವರ ಮುನ್ನುಡಿ, ೨೦೦೨-ಇತಿಹಾಸದ ರಾಜಕೀಯ). ಇಲ್ಲಿ ಭೂತಾರ್ಮ ಎಂಬ ಊರು ಪ್ರಾಚೀನ ಸಂಸ್ಕೃತಿಯಲ್ಲಿದ್ದ ತುಳುವರ ಕೂಡುಕಟ್ಟಿನ ಭೂತಗಳ ಆಲಡೆಯಿರುವ ಸ್ಥಳಕ್ಕೆ ಸಾದೃಶ್ಯತೆ ಇದ್ದರೆ ಭೂತಾರಾಧನೆಯ ಪ್ರಾಚೀನತೆ ಮೊಹೆಂಜೋದಾರೋ - ಹರಪ್ಪಾ ಕಾಲದಲ್ಲೂ ಇದ್ದದಾಗುತ್ತದೆ. ಹೀಗೆಂದು ಫಾದರ್ ಹೆರಾಸ್ ಕೂಡ ಅಭಿಪ್ರಾಯಪಡುತ್ತಾರೆ. ಇದೆಲ್ಲವನ್ನು ಗ್ರಹಿಸಿದಾಗ ತುಳುನಾಡಿನಲ್ಲಿ ಇತಿಹಾಸದ ಪೂರ್ವಕಾಲದಿಂದಲೂ ಜನಜೀವನವಿತ್ತು ಎಂದು ತಿಳಿದುಬರುತ್ತದೆ. ಅಂದಿನಿಂದಲೂ ತುಳುವರ ಕೂಡುಕಟ್ಟಿನ ಮೂಲಸ್ಥಾನಗಳಲ್ಲಿ ಭೂತಗಳ ಆಲಡೆಗಳು, ಭೂತದ ಕಲ್ಲುಗಳು ಇದ್ದಿರಬೇಕು. ಬಿ. ಎ. ಸಾಲೆತ್ತೂರು ಅವರ ಏನ್ಶಿಯಂಟ್ ಕರ್ನಾಟಕ (Vol. I) ಗ್ರಂಥದಲ್ಲಿ ತುಳುನಾಡಿನ ಇತಿಹಾಸ ರಚನೆಯಲ್ಲಿ ಪಾಡ್ದನಗಳನ್ನು ಆಕರವಾಗಿ ಪರಿಗಣಿಸುತ್ತಾ ಪ್ರಾಚೀನ ಹಾಗೂ ಮಧ್ಯಯುಗೀನ ತುಳುವರ ಬದುಕಿನ ಅಧ್ಯಯನಕ್ಕೆ ಪಾಡ್ದನಗಳು ಜನಪದ ಗೀತೆಗಳು ಅತ್ಯಂತ ಉಪಯುಕ್ತ ಆಕರ ಮಾಹಿತಿಗಳು, ಬಹಳಷ್ಟು ಶ್ರೀಮಂತವಾದ ಈ ಆಕರಗಳು ಚರಿತ್ರೆಯ ನಿರ್ಮಾಣದ ಸಂದರ್ಭದಲ್ಲಿ ಬಳಸಲ್ಪಟ್ಟಿಲ್ಲ (ನೋಡಿ ಪು. ೪೫) ಎಂಬ ಕಳಕಳಿಯನ್ನು ವ್ಯಕ್ತಪಡಿಸಿದ್ದಾರೆ. ಇವೇ ಅಲ್ಲದೆ ಭೂತಗಳ ಮೌಖಿಕ ಪರಂಪರೆಯ ವಿಭಿನ್ನ ಕಥಾನಕಗಳು ಚರಿತ್ರೆಗೆ ಆಕರವಾಗಬೇಕು. ಇವೆಲ್ಲವನ್ನು ಮುಂದಿಟ್ಟು ಇದರ ಜೊತೆಗೆ ದೀರ್ಘಕಾಲ ಜಾತೀಯ ವರ್ಚಸ್ಸಿನಿಂದ ಸಾಮಾಜಿಕ ಶೋಷಣೆ ನಡೆಸುವಲ್ಲಿ ಭೂತಾರಾಧನೆ ಅಲಿಖಿತ ಸಮ್ಮತಿ ನೀಡಿದ ಚಾರಿತ್ರಿಕ ತಿರುವುಗಳನ್ನು ಎಚ್ಚರಿಕೆಯಿಂದ ಗಮನಿಸಬೇಕು. ಇಲ್ಲಿ ಭೂತಭಯದಿಂದ ಸಾಮಾಜಿಕ ಸಂಚಲನೆಯನ್ನು ಸ್ಥಗಿತಗೊಳಿಸಿ ಗುಲಾಮಗಿರಿಗೆ ಗೊಬ್ಬರ ಹಾಕಿದ ಶ್ರೇಯಸ್ಸು ಭೂತಾರಾಧನೆಯ ಇತಿಹಾಸಕ್ಕೆ ಸಲ್ಲುತ್ತದೆ. ಕರ್ನಾಟಕದಲ್ಲಿ ದೇವರಾಜ ಅರಸರ ಸರಕಾರದಿಂದ ಭೂಸುಧಾರಣೆಯ ಕ್ರಾಂತಿಕಾರಿ ಕಾನೂನು ಬರುವವರೆಗೂ ಭೂತಾರಾಧನೆಯ ನೆರಳಿನಲ್ಲಿ 'ಪಾಳೆಯಗಾರಿ ಸಂಸ್ಕೃತಿ' ವಿಜೃಂಭಿಸಿದ ಇತಿಹಾಸವನ್ನು ಮರೆಮಾಚುವಂತಿಲ್ಲ. ಈ ಬಗೆಯ ಅಮಾನವೀಯ ಜನಸಂಸ್ಕೃತಿ ನೆಲೆಗಳನ್ನು ನಾಶಮಾಡಲು ಬಂಡಾಯವೆದ್ದ ತನ್ನಿಮಾನಿಗಳನ್ನೇ ರಕ್ತೇಶ್ವರಿಯಾಗಿ ಪರಿವರ್ತಿಸಿ

ಆಕೆಯನ್ನೂ ಆರಾಧಿಸುವುದು ಆಕೆಯ ಆದರ್ಶಕ್ಕೆ ಕಟ್ಟಿದ ಗೋರಿಯಂತಿದೆ. ವೈದಿಕ ಪರಂಪರೆಯ ರಕ್ತೇಶ್ವರಿ ರಕ್ತಪೀರಿ ಕೊಲೆಯತ್ತ ಬೊಟ್ಟು ಮಾಡಿದರೆ ತುಳು ಮಣ್ಣಿನ ಮಗಳು ತನ್ನಿಮಾನಿಗ ಪ್ರತಿಭಾಶಾಲಿ ವಾಸ್ತುಶಿಲ್ಪಿಯನ್ನು ಶಿಷ್ಟ ಪರಂಪರೆಯ ವಾರಸುದಾರರು ಬಾವಿಗೆ ದೂಡಿ ಕಲ್ಲು ಮುಚ್ಚಿದಾಗ, ಅದೇ ಕೋಡ್ದಬ್ಬುವನ್ನು ಬಾವಿಯಿಂದ ಮೇಲೆತ್ತಿ ರಕ್ತ ನೀಡುವ ಜೀವರಕ್ಷಕಿ. ಈಕೆ ಸಹಚರ್ಯೆಯ ಕೋಡ್ದಬ್ಬುವಿನ ಸೋದರಿ. ಈಗಲೂ ಕೋಡ್ದಬ್ಬು ತನ್ನಿಮಾನಿಗರ ಸಂಯುಕ್ತ ಆರಾಧನೆ ನಡೆಯುತ್ತಿದೆ.

**ತನ್ನಿಮಾನಿಗಳ ನಿಲುವು**

ತುಳುವರ ಆರಾಧನಾ ಇತಿಹಾಸದಲ್ಲಿ ಗಂಡು ಹೆಣ್ಣಿನ ಸಂಯುಕ್ತ ಆರಾಧನೆ ಪ್ರಾಚೀನವೆಂದೂ, ಅವಳಿ ಆರಾಧನೆ ಅನಂತರದ್ದೆಂದೂ ಶೋಧನೆಯಿಂದ ಕಂಡುಬಂದಿದೆ. ತನ್ನಿಮಾನಿಗ ಮಾತ್ರ ಈ ಎರಡೂ ಪರಂಪರೆಯಲ್ಲಿ ಆರಾಧನೆಗೆ ಒಳಗಾಗುತ್ತಾಳೆ. ಈವರೆಗಿನ ಗ್ರಹಿಕೆಯಂತೆ ತನ್ನಿಮಾನಿಗ ಮುಗೇರರ ಜಾತಿಗೆ ಸೇರಿದವಳು. ತಮ್ಮ ಸೋದರರಾದ 'ಎಣ್ಮೂರು ದೈವ'ಗಳ ಜೊತೆಗೆ ಈಕೆಗೆ ಅವಳಿ ಆರಾಧನೆ ನಡೆಯುತ್ತದೆ. ಮುಂಡಾಲ ಜಾತಿಯ ಕೋಡ್ದಬ್ಬುವಿನ ಜೊತೆ ಸಂಯುಕ್ತ ಆರಾಧನೆ ನಡೆಯುತ್ತದೆ. ಪ್ರಾಚೀನ ಕಾಲದಲ್ಲಿ ಮುಗೇರರ ಆರಾಧನೆಯಲ್ಲಿ ಈಕೆ 'ಜತ್ತ ಪೋತಿನಾಲ್' (ಜಾತಿ ಬಿಟ್ಟುಹೋದವಳು) ಆಗಿ ಕಟ್ಟಳೆ ಮೀರಿದ್ದರಿಂದ ಈಕೆಗೆ ಆರಾಧನೆ ಇರಲಿಲ್ಲ ಎಂದು ಮೌಖಿಕ ಪರಂಪರೆಯಲ್ಲಿ ತಿ ಮುಬರುತ್ತದೆ. ಈಗ ಮುಗೇರರ ಆರಾಧನೆಯಲ್ಲಿ ಈಕೆ ಸ್ಥಾನ ಪಡೆದು ಕೊಂಡಿದ್ದಾಳೆ. ತನ್ನಿಮಾನಿಗ, ಜಾತಿವಿನಾಶದ ಜೊತೆಗೇನೆ ಶ್ರೇಣೀಕರಣದ ಆಶಯಕ್ಕೆ ಸಂಕೇತವಾಗುವುದಲ್ಲದೆ ಮೇಲ್ವರ್ಗದ ಕುತಂತ್ರಕ್ಕೆ ಬಲಿಯಾಗಿ ಪ್ರತಿಭೆಯಿದ್ದೂ ಅಸಹಾಯಕನಾದ ಕೋಡ್ದಬ್ಬುವಿಗೆ ಕುಲದ ಕಟ್ಟಳೆಯನ್ನು ಮೀರಿ ಜೀವದಾನ ನೀಡಿದ ಮಾನವೀಯತೆ ಈಕೆಯ ಅನನ್ಯತೆಯ ಚರಿತ್ರೆಯೊಂದಿಗೆ ಬೆಸೆದುಕೊಂಡಿದೆ.

ಸುಳ್ಯದ ಎಣ್ಮೂರಿನ ಓಡಿ ಮತ್ತು ಬಂಟ್ವಾಳದ ಕುಂಜಿ ದಂಪತಿಗಳಿಗೆ ತ್ರಿವಳಿಗಳಾಗಿ ಮುದ್ದ, ಕಳಲ ಎಂಬ ಗಂಡು ಮಕ್ಕಳು, ತನ್ನಿಮಾನಿಗ ಎಂಬ ಹೆಣ್ಣು ಮಗಳು ಹುಟ್ಟುತ್ತಾರೆ. ಇವರು ಹಾಲುಣ್ಣುವ ಸಮಯಕ್ಕೆ ತಾಯಿಯನ್ನು, ತುತ್ತುಣ್ಣುವ ಸಮಯಕ್ಕೆ ತಂದೆಯನ್ನು ಕಳೆದುಕೊಂಡು ತಬ್ಬಲಿಯಾಗುತ್ತಾರೆ. ಅನಂತರ ಪೆರಾಜೆಯ ಸೋಯಿ ಬೈದೆದಿ ಇವರ ಸಾಕುತಾಯಿಯಾಗುತ್ತಾಳೆ. ತನ್ನಿಮಾನಿಗಳ ತಂದೆಯ-ಸೋದರಳಿಯ ಕೆಲತ್ತ ಪೆರ್ನೆಯೊಡನೆ ಈಕೆಯ ವಿವಾಹವಾಗುತ್ತದೆ. ಬೆರ್ಮರ ಗುಂಡದಲ್ಲಿ ಮೀನು ಹಿಡಿಯಲು ಮುಂದಾಗಿ ಸಂಪ್ರದಾಯ ಮೀರಿದಾಗ ಸಂಪ್ರದಾಯದ ಸಮರ್ಥಕರಿಂದ ಗಂಡನ ಜೊತೆ ಅಣ್ಣಂದಿರಿಬ್ಬರ ಕೊಲೆಯಾಗುತ್ತದೆ. ಇದನ್ನೇ ಸಂಪ್ರದಾಯ ಬೆರ್ಮರಿಂದಾದ 'ಮಾಯೆ' ಎಂದು ಕಥೆ ಕಟ್ಟುತ್ತದೆ. ಇಲ್ಲಿಯ 'ಬೆರ್ಮೆರ್' ಇಂದು ತುಳುವರ ಭೂತಸ್ಥಾನವನ್ನು ಆಕ್ರಮಿಸಿರುವ ಪ್ರಧಾನ ದೈವ. ಈ ಬೆರ್ಮೆರ್ 'ಚತುರ್ಮುಖ ಬ್ರಹ್ಮ' ಎಂಬ ಸಂಸ್ಕೃತೀಕರಣ ಈಗ ನಡೆದುಹೋಗಿದೆ. ಆದರೆ ಜನಪದದಲ್ಲಿ "ನಮ್ಮವರ ನಾಶಕ್ಕೆ ಕಾರಣವಾದ ಬೆರ್ಮರನ್ನು ನಾವು ನಾಶ ಮಾಡುತ್ತೇವೆ. ಅವರ ಕಣ್ಣು ತೆಗೆಯುತ್ತೇವೆ" ಎಂಬ ಎಣ್ಮೂರು ದೈವಗಳ ಸಿಟ್ಟಿನ ಸಿಡಿಲು ಈಗಲೂ ಮೌಖಿಕ ಪರಂಪರೆಯಲ್ಲಿ ಜೀವಂತವಾಗಿದೆ. ಇಲ್ಲಿ ಎಣ್ಮೂರು ದೈವಗಳೆಂದರೆ ತನ್ನಿಮಾನಿಗಳ ಜೊತೆ ಅವರ ಅಣ್ಣಂದಿರು, ಗಂಡ ಸೇರಿ ನಾಲ್ಕು ಜನರನ್ನು ಸಂಕೇತಿಸಲಾಗುತ್ತಿದೆ. ಅಂದಿನಿಂದ ಆರಂಭಗೊಂಡ ತನ್ನಿಮಾನಿಗಳ ಬಂಡಾಯ ಕೋಡ್ದಬ್ಬುವಿಗೆ ಜೀವದಾನ ಮಾಡುವಲ್ಲಿ ಮಹತ್ವದ ತಿರುವನ್ನು ಪಡೆಯುತ್ತದೆ.

ಕೌಡೂರಿನ ಕಚ್ಚೂರಮಾಲ್ದಿ ಮತ್ತು ಬಾರಕೂರಿನ ಬೊಮ್ಮುವಿನ ಮಗ ಕೋಡ್ದಬ್ಬು. ಈತ ಕಲೆ, ತಂತ್ರ, ವಾಸ್ತು, ವೈದ್ಯ ವಿದ್ಯೆಗಳಲ್ಲಿ ಅದ್ವಿತೀಯ ಸಾಧಕ. ತೆಂಬರೆ, ಡೋಲು, ವಾದನದಲ್ಲಿ ಸಿದ್ಧಿ ಪಡೆದಿದ್ದವನು. ಸ್ವಾಭಿಮಾನಕ್ಕೆ ಇನ್ನೊಂದು ಹೆಸರಾದ, ನ್ಯಾಯ ತಪ್ಪಿ ಅನ್ಯಾಯ ಮಾಡುವವರಿಗೆ ಸಿಂಹಸ್ವಪ್ನವಾದ, ಈತನ ಪ್ರತಿಭೆ ತುಳುನಾಡಿನಲ್ಲಿ ಮನೆಮಾತಾಯಿತು. ಇದರಿಂದಾಗಿ ಕೆಲವರ ಮತ್ಸರ ವೈರಗಳಿಗೆ ಕೋಡ್ದಬ್ಬು ಗುರಿಯಾದ. ಈತನನ್ನು ಹೇಗಾದರೂ ಮುಗಿಸಬೇಕೆಂಬ ಷಡ್ಯಂತ್ರ ರಚನೆಯಾಯಿತು. ಅದರಂತೆ ಪಡುಬಿದ್ರಿಯ ಕಂಚಿನಡ್ಕದಲ್ಲಿ ಹದಿನಾರು ಆಳು ಆಳದ ಬಾವಿ ತೋಡುವ ಸಿದ್ಧತೆ ನಡೆಯುತ್ತದೆ. ಪ್ರಸಿದ್ಧ ವಾಸ್ತುಶಿಲ್ಪಿಯಾದ ಕೋಡ್ದಬ್ಬುವನ್ನು ಸಲಹೆ ನೀಡಲು ಕರೆಯಲಾಗುತ್ತದೆ. ಕೋಡ್ದಬ್ಬು ನೀರಿನ ದಂಡು ಪರೀಕ್ಷಿಸಲು ಬಾವಿಗಿಳಿಯುತ್ತಾನೆ. ಆತ ನೀರಿನ ದಂಡು ಪರೀಕ್ಷಿಸುತ್ತಿರುವ ಸಂದರ್ಭ ನೋಡಿ ಪೂರ್ವಯೋಜಿತ ಸಂಚಿನಂತೆ ಬಾವಿಯ ಮೇಲೆ ಹಾಸುಗಲ್ಲನ್ನು ಮುಚ್ಚುತ್ತಾರೆ. ಆಗ ಅಲ್ಲಿಗೆ ಬಂದ ತನ್ನಿಮಾನಿಗ ಗೆಜ್ಜೆತ್ತಿಯಿಂದ (ಕಿರುಗತ್ತಿ) ಹಾಸುಗಲ್ಲಿನ ಮೇಲೆ ೧೬ ಗೆರೆಗಳನ್ನು ಹಾಕಿ ಅದನ್ನು ಪುಡಿ ಮಾಡಿ ತನ್ನ ಸೆರಗನ್ನು ಇಳಿಸಿ ಕೋಡ್ದಬ್ಬುವನ್ನು ಮೇಲೆತ್ತುತ್ತಾಳೆ. ಹೀಗೆ ಸಹಚರ್ಯೆಯಲ್ಲಿ ಸೋದರಿಯಾಗುತ್ತಾಳೆ. ಆದರೆ ಶಿಷ್ಟರ ಕಣ್ಣಿಗೆ ಸಂಪ್ರದಾಯ ಮೀರಿದ ಹೆಣ್ಣಾಗುತ್ತಾಳೆ. ಇತಿಹಾಸದ ರಾಜಕೀಯಕ್ಕೆ ವಸ್ತುವಾಗುತ್ತಾಳೆ. ತನ್ನಿಮಾನಿಗ, ಕೋಡ್ದಬ್ಬು ಇಬ್ಬರೂ ಪರಾಕ್ರಮಿಗಳು, ಪ್ರತಿಭಾಶಾಲಿಗಳು. ಸ್ವಾಭಿಮಾನಿಗಳಾದ ಇವರ ಸಂಪ್ರದಾಯವನ್ನು ಮುರಿಯುವ ವಿವೇಕವೇ ಮುಳುವಾಗಿ ಸಂಪ್ರದಾಯಸ್ಥರಿಂದ ಕೊಲೆಯಾಗುತ್ತಾರೆ. ಇದೇ ಕಥೆ ವಿರೂಪಗೊಂಡು ಕೆಸರ ಗುಂಡಿಯಲ್ಲಿ ಇವರಿಬ್ಬರು ಮಾಯವಾದರು ಎಂಬ ಕಥಾನಕ ಬೆಳೆದಿರಬೇಕು.

**ಚಾರಿತ್ರಿಕ ಶೋಧ**

ತನ್ನಿಮಾನಿಗಳ ಕಥಾನಕವು ಮುಗೇರ ಮತ್ತು ಕೋಡ್ದಬ್ಬುವಿನ ಕಥಾನಕದೊಂದಿಗೆ ಸಂಬಂಧ ಪಡೆದಿದೆ. ಈಕೆಯ ಉಗಮ ಕಲೆ-ಕಾರ್ಣಿಕವನ್ನು ಸಂಗ್ರಹಿಸಿದರೆ ಹಲವಾರು ರೋಚಕ ವಿಷಯಗಳು ತಿಳಿಯುವುದಲ್ಲದೆ ಇದೇ ಒಂದು ಮಹಾಕಾವ್ಯವಾಗಬಹುದಾಗಿದೆ. ಇದರಲ್ಲಿ ಇರುವ ಚಾರಿತ್ರಿಕ ಅಂಶಗಳನ್ನು ಬೇರೆ ಬೇರೆ ವಿದ್ವಾಂಸರ ಮಾತುಗಳಲ್ಲಿ ಪರಿಶೀಲಿಸಬಹುದು. 'ಇಕ್ಕೇರಿ ಅರಸರು ಸುಮಾರು ಕ್ರಿ.ಶ. ೧೬೧೮ನೇ ಇಸವಿಯಲ್ಲಿ ತುಳುನಾಡನ್ನು ಆಳಿಕೊಂಡಿದ್ದರು. ರಾಜ್ಯದ ರಕ್ಷಣೆಗಾಗಿ ಇಕ್ಕೇರಿ ಅರಸರು ಬಾರ್ಕೂರಿನಲ್ಲಿ ಕೋಟೆಗಳನ್ನು ರಚಿಸಿಕೊಂಡಿದ್ದರು. ಅದೇ ಕಾಲಮಾನದಲ್ಲಿ ತುಂಬು ಜವ್ವನಿಗ ಕೋಡ್ದಬ್ಬು ಬಾರ್ಕೂರಿನಲ್ಲಿ ಕೋಟೆ ಕಟ್ಟುವ ಕೆಲಸದಲ್ಲಿ ಬಹು ನಿಪುಣ, ಎಂದು ಊರಲ್ಲಿ ಪ್ರಸಿದ್ಧಿ ಪಡೆದಿದ್ದ' ಎಂಬುದಾಗಿ ಪಾಡ್ದನದ ಆಧಾರದಿಂದ ತಿಳಿದುಬಂದಿದೆ. (ಪಿ. ಕಮಲಾಕ್ಷ - ತುಳುನಾಡ ಕಾರಣಿಕ ಪುರುಷ - ಬಬ್ಬುಸ್ವಾಮಿ - ಪುಟ ೨೮).

ತನ್ನಿಮಾನಿಗಳ ವಿವಿಧ ಸ್ವರೂಪಗಳಲ್ಲಿ ಲೆಕ್ಕೆಸಿರಿ ಒಂದಾಗಿದೆ. ಈ ಲೆಕ್ಕೆಸಿರಿ ಭೂತ ಬೆಳ್ತಂಗಡಿ ತಾಲೂಕಿನ ಬಂಗ್ವಾಡಿ ಬಂಗರಸರ ಸೀಮೆಯಲ್ಲಿ ಇದರ ಆರಾಧನೆಯನ್ನು ವಿಶಿಷ್ಟ ರೀತಿಯಲ್ಲಿ ಡಾ॥ ಕೆ. ಚಿನ್ನಪ್ಪಗೌಡ ಅವರು ಗುರುತಿಸಿದ್ದಾರೆ. ಹರಿಕರ ಜಾಲುಗುತ್ತಿನಲ್ಲಿ ಲೆಕ್ಕೆಸಿರಿ, (ತನ್ನಿಮಾನಿಗ) ಗುತ್ತಿನ ಭೂತಗಳಾಗಿವೆ. ಮುಜೂರು ಮಾಗಣೆಯಲ್ಲಿ ಗರ್ನಾಡಿ ಮತ್ತು ಕೆಳಗರ್ಗಾಡಿ ಗುತ್ತಿಗಳಲ್ಲಿ ಇದು ಕುಟುಂಬದ ಭೂತವಾಗಿದೆ. ನರ್ಸನಹಳ್ಳಿ ಮಾಗಣೆಯ ಲ್ಯಾಲ, ಸುರಿಯ, ನಾವೂರ ಮತ್ತು ಸುರಕ್ಷೆಯ



**ಬೆಳಕಿರದ ಬಾನು**

(ಪ್ರ) ತಿನಿತ್ಯ
ಬೆಳಗಾಗುತ್ತಿತ್ತು ಬಾನು
ಮೇಲೇಳುತಿದ್ದೆ; ಮತ್ತೆ
ಕತ್ತಲಾಗುತ್ತಿತ್ತು
ಮಲಗುತಿದ್ದೆ ನಾನು
ಇವತ್ತು ಮಲಗಿದ್ದೇನೆ
ಮೈಚಾಚಿ ಎಂದಿನಂತೆ
ಈಗ ರಾತ್ರಿಯಾಗಿರಲಿಲ್ಲ
ಹಗಲಾಗಿತ್ತು
ಆದರೆ, ಬೆಳಕಾಗಿರಲಿಲ್ಲ

ಶಿವಕುಮಾರ್ ಕಿನ್ನಿ
ನಂ. ೮೯೬/೧, ೨ನೇ ಅಡ್ಡರಸ್ತೆ, ಐಯ್ಯಣ್ಣ ಶೆಟ್ಟಿ ಬಡಾವಣೆ, ಮೈಸೂರು ರಸ್ತೆ, ಬೆಂಗಳೂರು - ೫೬೦ ೦೨೬

ಗುತ್ತುಗಳಲ್ಲಿ ಇದು ಕುಟುಂಬದ ಭೂತವಾಗಿದೆ. ಬೇಳಾಯಿ ಮಾಗಣೆಯಲ್ಲಿ ಹರ್ಮಾಡಿ ಗುತ್ತಿನಲ್ಲಿ, ಗುತ್ತಿನ ಭೂತವಾಗಿದ್ದರೆ, ಮಾಯ ಮತ್ತು ಹರ್ಮಾಡಿ ಗುತ್ತುಗಳಲ್ಲಿ ಇದು ಕುಟುಂಬದ ಭೂತವಾಗಿದೆ (ಭೂತಾರಾಧನೆ - ಡಾ॥ ಚಿನ್ನಪ್ಪಗೌಡ). ದಕ್ಷಿಣ ಕನ್ನಡ ದೇವಾಲಯಗಳ ಪರಿಸರಗಳಲ್ಲಿ ಕಂಡುಬರುವ ತನ್ನಿಮಾನಿಗ ಬಂಗರಸರ ಆಡಳಿತ ವ್ಯವಸ್ಥೆಯ ಗುತ್ತುಗಳಲ್ಲಿ ಗುತ್ತಿನ ಭೂತವಾಗಿರುವುದಲ್ಲದೆ ಕುಟುಂಬದ ಭೂತವೂ ಆಗಿರುವುದು, ಇದರ ಪ್ರಾಚೀನತೆಯನ್ನು ತೋರಿಸುತ್ತದೆ. ಗುತ್ತಿನ ಭೂತಕ್ಕಿಂತಲೂ ಪ್ರಾಚೀನವಾಗಿರುವುದು ಕುಟುಂಬದ ಭೂತ ಎನ್ನುವುದರಲ್ಲಿ ಅನುಮಾನವಿಲ್ಲ. ಈಗಾಗಲೇ ದೊರೆತ ಒಂದು ಶಾಸನದ ಆಧಾರದಿಂದ ಬೊಬ್ಬರ್ಯ ಭೂತದ ಕಾಲಾವಧಿಯನ್ನು ೧೭ನೇ ಶತಮಾನವೆಂದು ನಿಗದಿಪಡಿಸಿ ಅದೇ ತನ್ನಿಮಾನಿಗ ಕೋಡ್ದಬ್ಬುವಿನ ಕಾಲವೆಂದು ತಿಳಿಯುವುದು ಸರಿಯಲ್ಲ.

ತುಳುನಾಡನ್ನು ಆಳಿದ ಬಂಗರಸರ ಚರಿತ್ರೆ ಒಂದನೇ ವೀರ ಬಂಗರಸನ (ಕ್ರಿ.ಶ. ೧೧೫೭-೧೨೦೮) ಕಾಲಾವಧಿಯಲ್ಲಿ ಆರಂಭವಾಗುತ್ತದೆ (ದಕ್ಷಿಣ ಕನ್ನಡದ ಚರಿತ್ರೆ - ಗಣಪತಿ ರಾವ್ ಐಗಳ್, ಪುಟ ೨೬೩). ಇದರಿಂದ ತನ್ನಿಮಾನಿಗನ ಆರಾಧನೆ ೧೧ನೇ ಶತಮಾನಕ್ಕಿಂತ ಮುಂಚಿನದು ಎಂದು ತಿಳಿಯಬೇಕಾಗುತ್ತದೆ. ಇದರ ಜೊತೆ ಒಂದಲ್ಲ ಒಂದು ವಿಧದಲ್ಲಿ ತನ್ನಿಮಾನಿಗಳು ಸಂಪರ್ಕ ಪಡೆದಿರುವ ಬೈದೇರ್ಲು (ಕೋಟಿ-ಚೆನ್ನಯರು), ಮುಗೇರರು (ಮುದ್ದ-ಕಳಲ), ಕಾನದ-ಕಾಟದ ಇವರ ಕಾಲಾವಧಿಯು ಕೂಡ ೧೦ನೇ ಶತಮಾನಕ್ಕಿಂತ ಹಿಂದೆ ಸರಿಯುತ್ತದೆ. ತುಳುನಾಡಿನಲ್ಲಿ ಏಳು ಜನ ಬೈದೇರ್ಲು, ಏಳು ಜನ ಮುಗೇರ್ಲು ಎನ್ನುವಂತಹ ಮಾತುಗಳು ಮತ್ತೆ ಮತ್ತೆ ಆರಾಧನಾ ರಂಗದಲ್ಲಿ ಬಳಸಲ್ಪಡುವುದನ್ನು ಗಮನಿಸಿದಾಗ ಕೋಟಿ-ಚೆನ್ನಯ, ಮುದ್ದ-ಕಳಲ, ಕಾನದ-ಕಾಟದ ಈ ಆರೂ ಜನರ ಸಾಮಾಜಿಕ ಬಂಡಾಯದ ಚರಿತ್ರೆಗೆ ಏಳನೆಯವಳಾಗಿ ತನ್ನಿಮಾನಿಗ ಜೊತೆಯಾಗುತ್ತಾಳೆ. ಈ ಏಳು ಮಂದಿ ಚಾಲ್ತಿಯಲ್ಲಿರುವ ಏಳು ಜನ ಬೈದೇರ್ಲು ಯಾ ಏಳು ಜನ ಮುಗೇರ್ಲು ಎನ್ನುವ ಪದಕ್ಕೆ ಸಂಕೇತವಾಗಿರುವ ಸಾಧ್ಯತೆಗಳಿವೆ. ಈ ಏಳು ಜನರಿಗೂ ತಾಯಿ ಯಾ ಸಾಕುತಾಯಿಯರಾಗಿ ಅಥವಾ ತಾಯಂದಿರ ಒರಗೆಯವರಾಗಿ, ಸೋಯಿ ಬೈದೆದಿ, ದೇಯಿ ಬೈದೆದಿಯರ ಹೆಸರುಗಳು ಉಲ್ಲೇಖಿಸಲ್ಪಡುತ್ತವೆ. ತುಳು ಮೂಲನಿವಾಸಿಗಳ ಜಾತ್ಯತೀತ ಕೂಡುಕಟ್ಟಿನ ಸಾಮಾಜಿಕ ವ್ಯವಸ್ಥೆಯೊಂದು ಶ್ರೇಣೀಕರಣಕ್ಕೆ ಗುರಿಯಾಗುತ್ತಿರುವ ಸಂಕ್ರಮಣ ಕಾಲದಲ್ಲಿ ಸಿಡಿದ ಹೆಣ್ಣು ತನ್ನಿಮಾನಿಗಳಾಗಿ, ಅವಳಿಗೆ ಸವಾಲೆಸೆಯಲಾಗದೆ ತೆಪ್ಪಗಾದ ಪುರುಷರು ಕೋಟಿ-ಚೆನ್ನಯರು, ಮುದ್ದ-ಕಳಲ ಮತ್ತು ಕಾನದ- ಕಾಟದ ಎಂಬ ಆರು ಮಂದಿ ಅವಳಿ ಸೋದರರೆಂದು ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ಈವರೆಗಿನ ಹೆಚ್ಚಿನ ಸಂಶೋಧಕರು ಕೇವಲ ಪಾಡ್ದನಗಳ ಮತ್ತು ಶಾಸನಗಳ ಹಿನ್ನೆಲೆಯಲ್ಲಿ ಭೂತಗಳ ಚಾರಿತ್ರಿಕತೆಯನ್ನು ನಿರ್ಧರಿಸಿದ್ದು ಸರಿಯಲ್ಲವೆಂದು ಸ್ಪಷ್ಟವಾಗುತ್ತದೆ. ಈಗಾಗಲೇ ಚರ್ಚಿಸಿದಂತೆ ಜೋಗರೂಪೀ ತನ್ನಿಮಾನಿಗಳ ಚರಿತ್ರೆ ಕ್ರಿ.ಶ. ೪ನೇ ಶತಮಾನದ ಗಡಿಯಲ್ಲಿ ನಿಲ್ಲುತ್ತದೆ.




೨೩.೫.೨೦೦೫ರಂದು ದಾವಣಗೆರೆಯಲ್ಲಿ ಪ್ರಾರಂಭವಾದ ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ಜಯಮೃತ್ಯುಂಜಯ ಸ್ವಾಮಿ, ವಿರಕ್ತಮಠ ಅವರ ಸಮ್ಮುಖದಲ್ಲಿ ಶ್ರೀ ಎಚ್. ಎಸ್. ಷಡಕ್ಷರಪ್ಪ, *(ಜನತಾವಾಣಿ ಸಂಪಾದಕರು)* ಉದ್ಘಾಟಿಸಿದರು. ಶ್ರೀ ಅವರಗೆರೆ ರುದ್ರಮುನಿ *(ಸಂಸ್ಥಾಪಕರು, ಮಾನವ ಮಂಟಪ ದಾವಣಗೆರೆ)* ಅತಿಥಿಗಳಾಗಿ ಭಾಗವಹಿಸಿದ್ದರು. ಪ್ರೊ॥ ಬಿ. ವಿ. ವೀರಭದ್ರಪ್ಪ, *(ವಿಚಾರವಾದಿಗಳು)* ಹಾಗೂ ಇತರ ಸಾಹಿತ್ಯಾಸಕ್ತರು ಭಾಗವಹಿಸಿದ್ದರು.

**ತನ್ನಿಮಾನಿಗಳ ಚಾರಿತ್ರಿಕ ಸಮೀಕ್ಷೆ**

ಬಂಗರಸರ ಕುಟುಂಬ ಭೂತಗಳ ಹಿನ್ನೆಲೆಯಲ್ಲಿ ತನ್ನಿಮಾನಿಗಳ ಕಾಲವನ್ನು ೧೦ನೇ ಶತಮಾನವೆಂದು ಪರಿಗಣಿಸಬೇಕು ಎಂದು ಈಗಾಗಲೇ ಚರ್ಚಿಸಲಾಗಿದೆ. ಕಿನ್ನಿಮಾನಿ, ತನ್ನಿಮಾನಿಗ, ಲೆಕ್ಕೆಸಿರಿ, ಕಾಳರ್ಕಾಯಿ, ಮಾನಿಬಾಲೆ, ಕುಂಜಿಮಾಣಿಗೋ, ಸನಿಮಾನಿಗ ಇತ್ಯಾದಿ ರೂಪಗಳನ್ನು ನೋಡುವಾಗ ಈಕೆಯು ಬಂಡಾಯಗಾರ್ತಿ ಎಂದು ಸ್ಪಷ್ಟವಾಗುತ್ತದೆ. ಸಂದರ್ಭ ಬಂದಾಗ ಅಣ್ಣಂದಿರಾದ ಮುಗೇರ್ಲು ಮತ್ತು ಕೋಟಿ-ಚೆನ್ನಯರ (ಬೈದೇರ್ಲು) ಮಾತನ್ನು ಮೀರಿ, ಮಾನವೀಯ ನೆಲೆಯಲ್ಲಿ ಕೋಡ್ದಬ್ಬುವನ್ನು ಬದುಕಿಸುತ್ತಾಳೆ.

ತನ್ನಿಮಾನಿಗಳ ಸಹಚರ್ಯೆಯನ್ನು ಪಡೆದ ಕೋಡ್ದಬ್ಬು , ಭೂತರಾಜ, ಜಟರಾಯ, ಬಾರಗ, ಬಬ್ಬು , ಕೆಂಚರಾಯಿ, ಕಾಳಭೈರವ, ಕಾಳರಾಹು ಇತ್ಯಾದಿ ರೂಪಗಳಲ್ಲಿ ಕಾಣುತ್ತಾನೆ. ಕ್ರಿ.ಶ. ೮ನೇ ಶತಮಾನದ ನಂತರ ತುಳುನಾಡಿನಲ್ಲಿ ರಚನೆಯಾದ ದೇವಾಲಯಗಳಲ್ಲಿ ಕಾಳಭೈರವನ ಸನ್ನಿಧಿ ಇದೆ. ಲೆಕ್ಕೆಸಿರಿಯ ಸನ್ನಿಧಿಯೂ ಇದೆ. ಇದರಲ್ಲಿ ದುರ್ಗಾಪರಮೇಶ್ವರಿ ದೇವಸ್ಥಾನ-ಬಪ್ಪನಾಡು, ಮಹಾಲಿಂಗೇಶ್ವರ ದೇವಸ್ಥಾನ-ಕವತ್ತಾರು, ವೆಂಕಟ್ರಮಣ ದೇವಾಲಯ-ಬಂಟ್ವಾಳ, ಅನಂತಪದ್ಮನಾಭ ದೇವಸ್ಥಾನ-ರಾಮಕುಂಜ, ಮಂಜುನಾಥೇಶ್ವರ ದೇವಾಲಯ-ಧರ್ಮಸ್ಥಳ, ನಂದಿಕೇಶ್ವರ ದೇವಾಲಯ-ಮೆಕ್ಕಿಕಟ್ಟೆ, ಆದಿಲಕ್ಷ್ಮಿ ದೇವಸ್ಥಾನ-ನಂದಳಿಕೆ, ಮಹಿಷಮರ್ದಿನಿ ದೇವಸ್ಥಾನ-ಬೇಳಂಜೆ, ವಿಂಧ್ಯಾವಾಸಿನಿ ದುರ್ಗಾಲಯ-ಕಾರ್ಕಳ, ಮೂಕಾಂಬಿಕಾ ದೇವಾಲಯ-ಕೊಲ್ಲೂರು – ಇವುಗಳಲ್ಲಿ ಕೆಲವು ಮಾತ್ರ. ತನ್ನಿಮಾನಿಗಳಿಗೆ ಪ್ರಾಚೀನ ಹರವಿದ್ದರೂ 'ತನ್ನಿಮಾನಿಗ' ಎನ್ನುವಾಗ ಮಡಿವಂತಿಕೆಯ ಪ್ರಶ್ನೆ ಎದುರಾಗುತ್ತದೆ. ಇದು ತುಳು ಮೂಲನಿವಾಸಿಗಳಲ್ಲಿ ಕಾಲಾಂತರದಲ್ಲಿ ಬೆಳೆದ ಜಾತೀಯ ಕಂದಕಗಳಿಗೆ ಸಾಕ್ಷಿಯಾಗಿದೆ. ತುಳು ಜನಪದದ ಮೊದಲ ಸಾಲಿನ ಬಂಡಾಯಗಾರ್ತಿಯರಾದ ಕಲ್ಲುರ್ಟಿ, ಸಿರಿ, ಮಾಯಾಂದಾಲ್ ತಮ್ಮ ಮೂಲ ಹೆಸರಿನಲ್ಲೇ ಕೆಲವು ದೇವಾಲಯಗಳ ಪರಿಸರದಲ್ಲಿ ಆರಾಧನೆ ಪಡೆಯುತ್ತಾರೆ. ಆದರೆ ತನ್ನಿಮಾನಿಗ ತನ್ನ ಮೂಲ ಹೆಸರಿನಲ್ಲೇ ಈಗ ವೈದಿಕರ ವಶದಲ್ಲಿರುವ ದೇವಾಲಯಗಳಲ್ಲಿ ಆರಾಧನೆ ಪಡೆಯುತ್ತಿರುವುದು ಈವರೆಗೆ ಗಮನಕ್ಕೆ ಬಂದಿಲ್ಲ. ಏನಿದ್ದರೂ ಇಲ್ಲಿ ಈಕೆ ಲೆಕ್ಕೆಸಿರಿ, ರಕ್ತೇಶ್ವರಿ !

ತನ್ನಿಮಾನಿಗಳನ್ನು ಕಾಳರ್ಕಾಯಿ, ಕೋಡ್ದಬ್ಬುವನ್ನು ಕಾಳರಾಹು, ಎನ್ನುವ ಸ್ವರೂಪದಿಂದ ಆರಾಧಿಸುವುದನ್ನು ನೋಡುವಾಗ, ಕದ್ರಿಯ ಮಂಜುನಾಥನಿಗೂ, ಧರ್ಮಸ್ಥಳದ ಮಂಜುನಾಥನಿಗೂ ಇರುವ ಸಂಬಂಧಗಳನ್ನು ಗಮನಿಸಬೇಕಾಗುತ್ತದೆ. ಧರ್ಮಸ್ಥಳದ ಉಗಮದಲ್ಲಿ ಕಾಳರಾಹು – ಕಾಳರಾತ್ರಿಯರು ಪ್ರಧಾನಶಕ್ತಿಗಳು ಎನ್ನುವುದನ್ನು ಸಮರ್ಥಿಸುತ್ತವೆ. ಆ ಹಿನ್ನೆಲೆಯಲ್ಲಿ ತನ್ನಿಮಾನಿಗ ಒಂದು ಪ್ರಾಚೀನ ಶಕ್ತಿಶಾಲೀ ಭೂತವೆನ್ನುವುದರಲ್ಲಿ ಎರಡು ಮಾತಿಲ್ಲ. ಇತಿಹಾಸದ ಬೆಳಕಿನಲ್ಲಿ ಕದ್ರಿ, ಧರ್ಮಸ್ಥಳಗಳು ಹಿಂದೊಮ್ಮೆ ಬೌದ್ಧರ ಕೇಂದ್ರಗಳಾಗಿದ್ದವು ಎನ್ನುವುದನ್ನು ಗಮನಿಸಿದಾಗ ತನ್ನಿಮಾನಿಗಳ ಕಾಲ ಕ್ರಿ.ಪೂ.ದ ಗಡಿಯನ್ನು ದಾಟಬೇಕಾಗುತ್ತದೆ. ಹೀಗೆ ದಾಟುತ್ತಾ ಹಳೆಯ ಶಿಲಾಯುಗಕ್ಕೂ ಸರಿಯಬಹುದಾಗಿದೆ. ತುಳುನಾಡಿನ ದೇವಾಲಯ ಭೂತಾಲಯಗಳಲ್ಲಿ ರಕ್ಷಕ ಶಕ್ತಿಗಳಾಗಿ ಕಾಳಭೈರವಿ-ಕಾಳಭೈರವರು ನೆಲೆಯಾಗಿದ್ದಾರೆ. ಇವರೇ ತನ್ನಿಮಾನಿಗ ಮತ್ತು ಕೋಡ್ದಬ್ಬು ಎನ್ನುವಾಗ ನಮ್ಮ ಊಹೆ ಸರಿಯೆಂದು ಕಂಡುಬರುತ್ತದೆ. ಈಕೆಯ ಚರಿತ್ರೆಯಲ್ಲಿ ನುಸುಳಿದ 'ಜಾತಿ ಪ್ರಜ್ಞೆ' ಅನಂತರದ ಸೇರ್ಪಡೆಯಾಗಿರಬೇಕು. ಮತಧರ್ಮದ ಅತಿರೇಕ 'ಸಾಮಂತವಾದ' ಸಮಾಜ ವ್ಯವಸ್ಥೆಯನ್ನು ಸ್ಥಿರವಾಗಿರುವ ಭೂಗತ ಉದ್ದೇಶವನ್ನು ಹೊಂದಿದೆ. ಈ ಅಮಾನವೀಯ ಚರಿತ್ರೆಗೆ ಬೆಂಕಿ-ಬೆತ್ತಗಳನ್ನೇ ಹಿಡಿದ ಕಲ್ಲುರ್ಟಿ, ಗುರಾಣಿ ಹಿಡಿದ ತನ್ನಿಮಾನಿಗ, ಕೆಂಡ-ಗೆಜ್ಜೆತ್ತಿ-ತತ್ರ ಹಿಡಿದ ಮಾಯಂದಾಲ್, ಕೈಗಳನ್ನು ತಟ್ಟಿ ಬಳೆ ಒಡೆದುಕೊಂಡ ಸಿರಿ ಇವರೆಲ್ಲಾ ಸವಾಲೆಸೆದದ್ದು ಮಹತ್ವದ ಚಾರಿತ್ರಿಕ ಘಟನೆಗಳೇ. ಆದರೆ ಈ ಸ್ತ್ರೀ ಭೂತಗಳಿಂದ ನಾವು ಪಡೆಯಬೇಕಾದ ರಾಜಕೀಯ ಎಚ್ಚರ ಸಹಬಾಳ್ವೆಯ ಸಮುದಾಯ ಪ್ರಜ್ಞೆಗಳು ಚರಿತ್ರೆಯನ್ನು ಕಟ್ಟುವ ಕಾಯಕದಲ್ಲಿ ಮಹತ್ವದ ಆಕರವಾಗಬೇಕು.

**ಸಾವಿತ್ರಿ. ಕೆ**
ಪ್ರೊಫೆಸರ್ ಮತ್ತು ಮುಖ್ಯಸ್ಥರು, ಇತಿಹಾಸ ವಿಭಾಗ, ಬೆಸೆಂಟ್ ಮಹಿಳಾ ಕಾಲೇಜು, ಮಂಗಳೂರು-೫೭೫೦೦೩

